ಮನೋಹರ ಗ್ರಂಥಮಾಲೆಯ ೪೭-೪ಲನೆಯ ಕುಸುಮ

# ವೈಯ್ಯಾರಿ

(ಹನ್ನೆರಡು ಕತೆಗಳು)

ಬರೆದವರು :

**ಗೊರೂರು ರಾಮಸ್ವಾಮಿ ಐಯ್ಯಂಗಾರ**

ಏಪ್ರಿಲ್-ಜೂನ್ ೧೯೪೧

ಬೆಲೆ: ೧-೧೨-೦

ಮನೋಹರ ಗ್ರಂಥ ಪ್ರಕಾಶನ ಸಮಿತಿ

ಧಾರವಾಡ

ಮನೋಹರ ಗ್ರಂಥಮಾಲೆಯ ೪೭-ಳಲನೆಯ ಕುಸುಮ

# ವೈಯ್ಯಾರಿ

(ಹನ್ನೆರಡು ಕತೆಗಳು)

ಬರೆದವರು :

**ಗೊರೂರು ರಾಮಸ್ವಾಮಿ ಐಯ್ಯಂಗಾರ**

ಏಪ್ರಿಲ್-ಜೂನ್ ೧೯೪೧ ಬೆಲೆ: ೧-೧೨-೦

ಮನೋಹರ ಗ್ರಂಥ ಪ್ರಕಾಶನ ಸಮಿತಿ

ಧಾರವಾಡ

# ನಮ್ಮ ಮಾತು

'ಬಿಡುಗಡೆಯಬೆಲೆ' ಯ ನಂತರ 'ಮರಳಿ ಮಣ್ಣಿಗೆ' ಹೊರಡಬೇಕಾಗಿತ್ತು. ಆದರೆ 'ಮರಳಿ ಮಣ್ಣಿಗೆ' ಕಾದಂಬರಿಯು ೫೫೦ ಪುಟಕ್ಕೂ ಮಿಕ್ಕಿ ದೊಡ್ಡದಾಗಿದ್ದರಿಂದ ಅದನ್ನು ಮೊದಲು ಯೋಜಿಸಿದಂತೆ ಎರಡು ಭಾಗದಲ್ಲಿ ಕೊಡುವುದನ್ನು ಬಿಟ್ಟು ಮೂರು ಭಾಗದಲ್ಲಿ ಕೊಡಬೇಕಾಯಿತು. ಗ್ರಂಥಮಾಲೆಯ ಎಂಟನೆಯ ವರ್ಷದಲ್ಲಿಯೇ ಆ ಕಾದಂಬರಿಯನ್ನು ಸಂಪೂರ್ಣವಾಗಿ ಕೊಡುವುದು ಸಾಧ್ಯವಾಗಿ ತೋರಲಿಲ್ಲ. ಎರಡು ಭಾಗಗಳನ್ನು ಈ ವರುಷದಲ್ಲಿ ಕೊಟ್ಟು ಮೂರನೆಯ ಭಾಗವನ್ನು ಮುಂದಿನ ವರುಷದಲ್ಲಿ ಕೊಟ್ಟಿದ್ದರೆ ನಮ್ಮ ಗ್ರಾಹಕರಲ್ಲಿ ಅನೇಕರಿಗೆ ಅನಾನುಕೂಲವಾಗುವ ಹಾಗೆ ತೋರಿದ್ದರಿಂದ ಈಗ ಶ್ರೀಮಾನ್ ಗೊರೂರು ರಾಮಸ್ವಾಮಿ ಐಯ್ಯಂಗಾರ 'ವೈಯ್ಯಾರಿ' ಎಂಬ ಹನ್ನೆರಡು ರಸಗತೆಗಳ ಸಂಗ್ರಹವನ್ನು ಈ ವರುಷದ ೫-೬ನೆಯ ಕುಸುಮವನ್ನಾಗಿ ಕೊಟ್ಟು, ಒಂಬತ್ತನೆಯ ವರುಷದಲ್ಲಿ 'ಮರಳಿ ಮಣ್ಣಿಗೆ' ಇದನ್ನು ಮೂರು ಭಾಗಗಳಲ್ಲಿ ಸಂಪೂರ್ಣವಾಗಿ ಕೊಡುತ್ತೇವೆ. 'ಮರಳಿ ಮಣ್ಣಿಗೆ' ಇದರ ಮೊದಲನೆಯ ಭಾಗವು ಈ 'ವೈಯ್ಯಾರಿ'ಯ ಜೊತೆಗೆ ಗ್ರಾಹಕರ ಕೈಸೇರುವುದರಿಂದ ನಾವು ಈಗ ಇವುಗಳ ಪ್ರಕಟಣೆಯಲ್ಲಿ ಹಿಂದೆ ಮುಂದೆ ಮಾಡಿಕೊಂಡದ್ದು ನಮ್ಮ ಗ್ರಾಹಕರಿಗೆ ಅಷ್ಟೇನು ಅನಾನುಕೂಲವಾಗಲಾರದೆಂದು ನಂಬಿದ್ದೇವೆ. ಮುಂದೆ 'ಮರಳಿ ಮಣ್ಣಿಗೆ' ಇದರ ೨ನೆಯ ಮತ್ತು ೩ನೆಯ ಭಾಗಗಳನ್ನು ಹೊತ್ತಿಗೆ ಸರಿಯಾಗಿ ಹೊರಡಿಸುತ್ತೇವೆಂಬ ಭರವಸೆಯನ್ನೂ ನಾವಿಲ್ಲಿ ನಮ್ಮ ಗ್ರಾಹಕರಿಗೆ ಕೊಡಬಯಸುತ್ತೇನೆ.

ಇಷ್ಟೊತ್ತಿಗೆ ನಾವು ನಮ್ಮ ಗ್ರಾಹಕರಿಗೆ ಮೂರು ಪುಸ್ತಕಗಳನ್ನು ಸಲ್ಲಿಸಿರಬೇಕಾಗಿತ್ತು. ಆದರೆ ಅಕಲ್ಪಿತ ಆಪತ್ತುಗಳು ಬಂದೊದಗಿದ್ದರಿಂದ ನಮಗೆ ಹೊತ್ತು ಹೊತ್ತಿಗೆ ಪುಸ್ತಕಗಳನ್ನು ಹೊರಡಿಸುವುದಾಗಲಿಲ್ಲ. ಇದಕ್ಕಾಗಿ ಗ್ರಾಹಕರು ನಮ್ಮನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತೇವೆ. ಏನೋ ಇದ್ದುದರಲ್ಲಿಯೇ, ಆದ ಸಾವಕಾಶವನ್ನು ಒಮ್ಮೆಲೆ ಮೂರೂ ಪುಸ್ತಕಗಳನ್ನು ಹೊರಡಿಸಿ ತುಂಬಿಕೊಳ್ಳಬೇಕೆಂಬ ಆಶೆಯಿಂದ ಎರಡು ಮುದ್ರಣಾಲಯಗಳಲ್ಲಿ ಕೆಲಸ ಕೊಟ್ಟರೆ, ಬಿಸಿಲಿಗೆ ಬಂದವನು ನೆರಳಿಗೆಂದು ಟೆಂಗಿನ ಗಿಡದ ಬುಡಕ್ಕೆ ಹೋದರೆ ಟೆಂಗಿನಕಾಯಿ ತಲೆಯ ಮೇಲೆ ಬಿತ್ತೆಂಬಂತೆ ನಮ್ಮ ಗತಿಯಾಯಿತು. ಸಾಧನ ಮುದ್ರಣಾಲಯದ ಒಡೆಯರು ಅಕಲ್ಪಿತ

ತಡೆಯನ್ನುಂಟುಮಾಡದಿದ್ದರೆ ಇನ್ನೂ ಬೇಗನೆ ಈ ಪುಸ್ತಕವನ್ನು ಹೊರಡಿಸಬಹುದಾಗಿತ್ತು. ಆದರೆ......

ನಮ್ಮ ಚಂದಾದಾರರಲ್ಲಿ ನಮ್ಮದೊಂದು ಸವಿನಯ ಪ್ರಾರ್ಥನೆಯಿದೆ. ದಯವಿಟ್ಟು ಅವರು ಅದನ್ನು ಮನ್ನಿಸಬೇಕು.

ಗ್ರಂಥಮಾಲೆಯ ಎಂಟನೆಯ ವರ್ಷವು ಈ 'ವೈಯ್ಯಾರಿ' ಎಂಬ ಪುಸ್ತಕಕ್ಕೆ ಮುಗಿಯಿತು. ಚಂದಾದಾರರು ದಯವಿಟ್ಟು ತಮ್ಮ ಹೊಸ ವರ್ಷದ ಚಂದಾಹಣವನ್ನು **ಅಕ್ಟೋಬರ ೫ನೇ ತಾರೀಖಿನೊಳಗಾಗಿ** ನಮಗೆ ತಲಪುವಂತೆ ಕಳಿಸಬೇಕೆಂದು ಬೇಡುತ್ತೇವೆ. ಈ ಅವಧಿಯೊಳಗಾಗಿ ಚಂದಾಹಣ ಬಾರದಿದ್ದಲ್ಲಿ ನಾವು ಪ್ರತಿಸಲದಂತೆ ಒಂಬತ್ತನೆಯ ವರ್ಷದ ಮೊದಲನೆಯ ಕುಸುಮವಾದ 'ಮರಳಿ ಮಣ್ಣಿಗೆ' ಇದನ್ನು ಒಂದು ವರ್ಷದ ಚಂದಾಹಣಕ್ಕೆ ವ್ಹಿ. ಪಿ. ಯಿಂದ ಕಳುಹಿಸುತ್ತೇವೆ. ದಯವಿಟ್ಟು ಚಂದಾದಾರರು ಅದನ್ನು ಸ್ವೀಕರಿಸಿ ನಮಗೆ ಸಹಾಯಮಾಡಬೇಕು. ಒಂದು ವೇಳೆ ವ್ಹಿ. ಪಿ ಯನ್ನು ಸ್ವೀಕರಿಸಲು, ಮನಿಯಾರ್ಡಿನಿಂದ ಹಣ ಕಳಿಸಲು ಸಾಧ್ಯವಿರದಿದ್ದಲ್ಲಿ ದಯವಿಟ್ಟು ಮೊದಲಿಗೇ ಬರೆದು ತಿಳಿಸಿ ನಮ್ಮ ಅಂಚೆಯ ವೆಚ್ಚವನ್ನಾದರೂ ಈ ಯುದ್ಧ ಕಾಲದಲ್ಲಿ ಉಳಿಸಿ ನಮಗೆ ಉಪಕಾರ ಮಾಡಬೇಕೆಂದು ಅತ್ಯಂತ ನಮ್ರವಾಗಿ ಬೇಡಿಕೊಳ್ಳುತ್ತೇವೆ.

ಶ್ರೀಮಾನ್ ಗೊರೂರರವರು ಪ್ರೇಮದಿಂದ — ಪ್ರಸನ್ನವಾದ ಮನಸ್ಸಿನಲ್ಲಿದ್ದಾಗ ಏನೊ— ತಮ್ಮ 'ಮುನ್ನುಡಿ'ಯಲ್ಲಿ ನನ್ನ ವಿಷಯವಾಗಿ ಬಹಳ ದೊಡ್ಡ ಮಾತು ಹೇಳಿದ್ದಾರೆ. ಮನೋಹರ ಗ್ರಂಥಮಾಲೆ ಕನ್ನಡ ಬೆಳೆವಣಿಗೆಗೆ ಕಾರಣವಾಗಿದ್ದರೆ ಮನೋಹರ ಗ್ರಂಥಮಾಲೆಯ ಬೆಳೆವಣಿಗೆಗೆ ಶ್ರೀ. ಗೊರೂರರಂತಹ ಕೀರ್ತಿವೆತ್ತ ಕನ್ನಡ ಲೇಖಕರು ಕಾರಣರಾಗಿದ್ದಾರೆ. ಅಲ್ಲದೆ ಗ್ರಂಥಮಾಲೆಗೆ ಬೆನ್‌ಬಲವಾಗಿ ನಿಂತ, ಅದರ ಉಸಿರಿನಂತಿದ್ದ ಶ್ರೀಗಳಾದ ದ. ರಾ. ಬೇಂದ್ರೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ ಇವರ ಪುಣ್ಯ ಒಲವೇ ಈ ಗ್ರಂಥಮಾಲೆಯನ್ನು ತಲೆಯೆತ್ತಿ ನಿಲ್ಲುವಂತೆ ಮಾಡಿದ್ದು. ಗ್ರಂಥಮಾಲೆಯಿಂದ ಕನ್ನಡ ಬೆಳೆದಿದ್ದರೆ ಅದು ಈ ತ್ರಿಮೂರ್ತಿಗಳ, ಮತ್ತು ಕನ್ನಡನಾಡಿನ ಲೇಖಕರ ಸತ್ವಬಲದಿಂದ. ನಾನು ಇವರೆಲ್ಲರ ಕೈಯ್ಯಲ್ಲಿಯ ಹೊರೆಯಾಳು ಮಾತ್ರ.

'ಶ್ರೀಮಾನ್ ಗೊರೂರವರ ಬರಹದಲ್ಲಿ ಒಂದು ನಯವಾದ ಹಾಸ್ಯವು ಹರಡಿಕೊಂಡಿದೆ. ಅವರಲ್ಲಿ ಹತ್ತು ಮಸಾಲೆ ಕೂಡಿಕೊಂಡಿವೆ. ಇಲ್ಲಿ ಕತೆಯಿದೆ; ಪಾತ್ರ ಸೃಷ್ಟಿಯಿದೆ; ನಗೆಯಿದೆ; ನೋವಿದೆ; ಬಣ್ಣನೆಯಿದೆ; ಬೂಟಾಟವಿದೆ; ಕಟಕಿಯಿದೆ; ಶಲ್ಯತಂತ್ರವಿದೆ; ಬೇಕಾದರೆ ತತ್ವವಿದೆ; ಬೇಡಾದರೆ ಹರಟೆಯಿದೆ' ಇಂತಹ ಸ್ವಾರಸ್ಯವಾದ ಗ್ರಂಥವನ್ನು ನಮ್ಮ ಗ್ರಂಥಮಾಲೆಗೆ ತಮ್ಮ

ನೂರೆಂಟು ಕಾರ್ಯಕಲಾಪಗಳಲ್ಲಿಯ ಹೊತ್ತುಳಿಸಿಕೊಂಡು ಬರೆದುಕೊಟ್ಟಿದ್ದಕ್ಕಾಗಿ ನಾವು ಶ್ರೀಮಾನ್ ಗೊರೂರು ರಾಮಸ್ವಾಮಿ ಐಯ್ಯಂಗಾರ್ಯರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ.

'ವೈಯ್ಯಾರಿ'ಗೆ ಸರಿಹೋಗುವಂತೆ ಒಳ್ಳೆ ಚಿತ್ತಾಕರ್ಷಕವಾದ ಹೊದಿಕೆ-ಚಿತ್ರವನ್ನು ಬರೆದುಕೊಟ್ಟ ಶ್ರೀಮಾನ್ ರಾಘವೇಂದ್ರರಿಗೆ ನಾವು ಎಂದಿಗೂ ಉಪಕೃತರಾಗಿದ್ದೇವೆ.

—ಸಂಪಾದಕ

# ಮುನ್ನುಡಿ

ನನ್ನ ಮಿತ್ರರಾದ ಶ್ರೀಮಾನ್ ಜೋಷಿಯವರು, ಕಲ್ಲನ್ನು ಅರೆದು ಅಗೆದು ಅದರಲ್ಲಿರುವ ಚಿನ್ನವನ್ನು ತೆಗೆಯುವಂತಹ ಸಾಹಸಿಗಳು. ಸತ್ವ ಒಂದು ಕಡೆ ಇರುವುದು ಗೊತ್ತಾದರೆ ಅವರು ಅದನ್ನು ಎಂದಿಗೂ ಹೊರಕ್ಕೆ ಹೊರಡಿಸದೆ ಬಿಡುವುದಿಲ್ಲ. ಕಾಗದದ ಮೇಲೆ ಕಾಗದ; ಟೆಲಿಗ್ರಾಂ ಮೇಲೆ ಟೆಲಿಗ್ರಾಂ, ಮನುಷ್ಯನ ಮೇಲೆ ಮನುಷ್ಯ; ಇವು ಕನ್ನಡದ ಬೆಳವಣಿಗೆಯ ಸೂಚನೆಗಳೆಂದು ನಾನು ಭಾವಿಸುತ್ತೇನೆ. ಈ ಬೆಳವಣಿಗೆಗೆ ಶ್ರೀಮಾನ್ ಜೋಷಿಯವರೂ ತಮ್ಮ ಮನೋಹರ ಗ್ರಂಥಮಾಲೆಯ ಮೂಲಕ ಬಹು ಮಟ್ಟಿಗೆ ಕಾರಣರಾಗಿದ್ದಾರೆ. ಇವರು ಕನ್ನಡ ಜನತೆಗೆ ಮಾಡುತ್ತಿರುವ ಸೇವೆಗೆ ನನ್ನ ಅಭಿನಂದನೆಯ ಕುರುಹಾಗಿ ಒಂದು ಕೃತಿಯನ್ನು ಕೊಡಬೇಕೆಂಬುದು ನನ್ನ ಬಹುದಿವಸದ ಆಸೆಯಾಗಿದ್ದಿತು. ಅದು ಇಂದು ಪೂರ್ಣವಾದುದಕ್ಕೆ ಬಹಳ ಸಂತೋಷಪಡುತ್ತೇನೆ.

ಈ ಸಂಗ್ರಹದಲ್ಲಿರುವ ಹನ್ನೆರಡು ಕತೆಗಳ ಪೈಕಿ, ಐದು ಪ್ರಬುದ್ಧ ಕರ್ನಾಟಕದಲ್ಲಿಯೂ ಒಂದು ಕಾಮನಬಿಲ್ಲಿನಲ್ಲಿಯೂ ಹಿಂದೆ ಪ್ರಕಟವಾಗಿದ್ದಿತು. ಈ ಕೃಪೆಗಾಗಿ ಮಾನ್ಯ ಸಂಪಾದಕರಿಗೆ ಕೃತಜ್ಞನಾಗಿದ್ದೇನೆ. 'ಯುದ್ಧದ ಕಾವು' ಎಂಬುದು 'ಚೌ ಎರ್ ಫು' ಎಂಬ ಚೀಣ ಗ್ರಂಥಕರ್ತನ ಕಥೆಯೊಂದರ ಅನುವಾದ. ನಾಲ್ಕು ವರುಷಗಳಿಂದ ಜಪಾನರಿಗೆ ಎದುರಾಗಿ ಯುದ್ಧಮಾಡುತ್ತಿರುವ ಚೀಣ, ಹೇಗೆ ತನ್ನ ನೀತಿಯನ್ನು ಉಳಿಸಿಕೊಂಡಿದೆ ಎಂಬುದು ನಮ್ಮ ಜನರಿಗೆ ತಿಳಿಯಲೆಂಬ ಆಸೆಯಿಂದ ಈ ಕತೆಯನ್ನು ಇಲ್ಲಿ ಕೊಟ್ಟಿದ್ದೇನೆ. 'ಪ್ರಸನ್ನವಾದ ಕಲಹ' ಎಂಬುದು ಒಂದು ಹೊಸ ಬಗೆಯ ಕತೆ. ಇದರಲ್ಲಿರುವ ಹಾಸ್ಯ ಬಹಳ ನವಿರಾದುದು; ಈ ಕತೆ ಹೇಳಿರುವ ಕ್ರಮ ಬಹಳ ಸ್ವಾರಸ್ಯವಾಗಿದೆ. ಚೀಣಾ ದೇಶಕ್ಕೆ ಸಂಬಂಧಪಟ್ಟ ಕತೆಗಳು ಅಡಕವಾಗಿರುವ 'ಗೋಲ್ಡನ್ ಅವರ್ಸ್' ಎಂಬುದರಿಂದ ಇದನ್ನು ತೆಗೆದುಕೊಂಡಿದ್ದೇನೆ.

ಈ ಗ್ರಂಥವನ್ನು ನಾನು ಬಹಳ ಪ್ರಸನ್ನವಾದ ಮನಸ್ಸಿನಿಂದ ಕನ್ನಡ ಜನತೆಯ ಅಡಿದಾವರೆಗಳಲ್ಲಿ ಅರ್ಪಿಸುತ್ತಿದ್ದೇನೆ. ಕನ್ನಡ ಬಾಂಧವರಿಗೆ ಇದನ್ನು ಓದುವುದರಿಂದ ಒಂದೆರಡು ಗಂಟೆಗಳಾದರೂ ಸಂತೋಷ ಲಭಿಸಲಿ ಎಂದು ಶ್ರೀ ಯೋಗಾನೃಸಿಂಹಸ್ವಾಮಿಯನ್ನು ಪ್ರಾರ್ಥಿಸುತ್ತೇನೆ.

**—ಗೊರೂರು ರಾಮಸ್ವಾಮಿ ಐಯ್ಯಂಗಾರ್**

ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರ

ನೆನಪಿಗೆ

# ಪರಿವಿಡಿ

# ಬೂತಯ್ಯನ ಮಗ 'ಅಯ್ಯು'

ನಮ್ಮ ಸುತ್ತಮುತ್ತಲ ಹಳ್ಳಿಗಳಲ್ಲೆಲ್ಲಾ ಸಾಹುಕಾರ್ ಬೂತಯ್ಯನವರೇ 'ತ್ರಾಣಿಗಳು'.[1] ಅವರ ಕೈಯಲ್ಲಿ ಹಣ ಕಣ್ಣುಮುಚ್ಚಿ ತೆರೆಯುವುದರೊಳಗೆ ಒಂದಕ್ಕೆ ಹತ್ತರಷ್ಟು ಆಗುತ್ತಿದ್ದಿತು. ನಮ್ಮ ಹಳ್ಳಿಯ ಸುತ್ತ ಎಲ್ಲಿಂದ ಎಲ್ಲಿಯವರೆಗೆ ನೋಡಿದರೂ ಅವರ ಜಮೀನುಗಳೇ; ಯಾವ ರೈತನೂ ಅವರ ಸಾಲಗಾರನೇ. ಒಂದು ಸಲ ಅವರಲ್ಲಿ ಸಾಲ ಮಾಡಿದರೆ ಸಾಕು, ಅನಂತರ ಸತ್ತರೂ ಅವರ ಕೈಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

ಬೂತಯ್ಯನವರು ನಮ್ಮ ಪ್ರಾಂತಕ್ಕೆ ಪಾಳೆಯಗಾರರಂತಿದ್ದರು. ಅವರನ್ನು ಶಿಶುಪಾಲ, ಜರಾಸಂಧ, ರಾವಣ, ಕಳಿಂಗ ಎಂದವರು ನಮ್ಮ ಕಡೆ ಬೇಕಾದಷ್ಟು ಜನ ಇದ್ದಾರೆ. ಅವರು ದುಷ್ಟರು, ಘಾತಕರು ಎಂಬುದರಲ್ಲಿ ಯಾವ ಸಂದೇಹವೂ ಇರಲಿಲ್ಲ. ಅವರು ಯಾವ ಕೆಲಸ ಮಾಡುವುದಕ್ಕೂ ಹೇಸುತ್ತಿರಲಿಲ್ಲ. ಅವರಿಗೆ ಮನುಷ್ಯನ ಭಯವಿರಲಿಲ್ಲ. ದೇವರ ಭಯ ಸತ್ತನಂತರದ ಭಯವಾದುದರಿಂದ ಅದನ್ನು ಕುರಿತು ಯೋಚಿಸಬೇಕಾದುದು ಸತ್ತನಂತರವೆಂದು ಅವರು ಹೇಳುತ್ತಿದ್ದರು. ಅವರಿಗೆ ಯಾರ ಮೇಲಾದರೂ ಕೋಪ ಬಂದರೆ, ಅವರ ಮನೆಯನ್ನು ಸುಟ್ಟು ಬೂದಿಯನ್ನು ನೆತ್ತಿಗೆ ಹಚ್ಚಿಕೊಳ್ಳುತ್ತಿದ್ದರು. ಅದರಿಂದಲೂ ಅವರ ಕೋಪವೂ ದ್ವೇಷವೂ ಶಾಂತವಾಗುತ್ತಿರಲಿಲ್ಲ. ಮೊದಲು ಎದುರಾಳಿಯನ್ನು ಕೋರ್ಟಿಗೆ ಎಳೆದು ಸುಳ್ಳುಪತ್ರ, ಸುಳ್ಳುಸಾಕ್ಷಿ, ಫೋರ್ಜರಿ ಮುಂತಾದವುಗಳಿಂದ ಅವನನ್ನು ನಿರ್ನಾಮ ಮಾಡುತ್ತಿದ್ದರು. ಅನಂತರ ಅವನ ಹೊಲಗದ್ದೆಗಳಿಗೆ ಹೊಡೆಯ ಕಾಲದಲ್ಲಿ ದನಗಳನ್ನು ನುಗ್ಗಿಸಿ ಪೈರನ್ನು ನುಣ್ಣಗೆ ಮೇಯಿಸುತ್ತಿದ್ದರು. ಅದರಿಂದಲೂ ತೃಪ್ತಿಯುಂಟಾಗದಿದ್ದರೆ ಅವನು ಒಬ್ಬನೇ ಸಿಕ್ಕಿದಾಗ ಅವನ ತಲೆ ಒಡೆದು ಸೊಂಟವನ್ನು ಮುರಿದು ಕೈಕಾಲುಗಳನ್ನು ಪಿಂಟಿ ಊನ ಮಾಡುತ್ತಿದ್ದರು. ಅವನ ದನಗಳನ್ನು ೩೦-೪೦ ಮೈಲಿಗಳ ಆಚೆ ದೊಡ್ಡಿಗಳಿಗೆ ಹೊಡೆದುಕೊಂಡು ಹೋಗಿ ಕೂಡಿಬರುತ್ತಿದ್ದರು. ಅಲ್ಲಿಂದಲೂ ದನಗಳನ್ನು ಬಿಡಿಸಿಕೊಂಡು ಬಂದರೆ, ಅವುಗಳ ಕಾಲನ್ನು ಮುರಿದು ಬಾಲವನ್ನು ಕತ್ತರಿಸುತ್ತಿದ್ದರು.

---

[1] ನಮ್ಮ ಕಡೆ ಒಬ್ಬ ಮನುಷ್ಯನಲ್ಲಿ ಹತ್ತು ಸಾವಿರ ರೂಪಾಯಿಗಳಿಗಿಂತ ಹೆಚ್ಚು ಹಣ ಸೇರಿದರೆ ಅವನಿಗೆ 'ತ್ರಾಣಿ' ಎಂದು ಹೆಸರು.

ಎದುರಾಳಿಯ ತೋಟಕ್ಕೆ ರಾತ್ರಿ ಕಾಲದಲ್ಲಿ ನುಗ್ಗಿ ಅಲ್ಲಿಯ ಎಳೆಯ ಬಾಳೆಕಂದುಗಳನ್ನೆಲ್ಲಾ ಕುಯ್ಯಗತ್ತಿಯಲ್ಲಿ ಸವರುತ್ತಿದ್ದರು. ಅವನ ಹುಲ್ಲುಮೆದೆಗೆ ಬೆಂಕಿ ಹಚ್ಚಿ ಬೂದಿಯನ್ನು ಎರಡು ಮೈಲಿ ಉರುವುತ್ತಿದ್ದರು. ಬಲಿಷ್ಠನಾದ ರೈತನ ರಾಗಿ ಅಥವಾ ಭತ್ತದ ಗುಡ್ಡೆಗೆ ಅದು ತೆನೆಯೊಂದಿಗೆ ಇರುವಾಗಲೇ ಬೆಂಕಿಯಿಟ್ಟು ಅರಳು ಅರ್ಧ ಮೈಲಿಯವರೆಗೆ ಹಾರಿ ಗುಬ್ಬಕ್ಕಿಗಳಿಗೆಲ್ಲಾ ಆಹಾರವಾಗುವಂತೆ ಮಾಡುತ್ತಿದ್ದರು. ತಮ್ಮ ಕಾಫಿ ತೋಟಕ್ಕೆ ನುಗ್ಗಿದ ಆಡುಗಳನ್ನು ಅಲ್ಲೇ ಕೊಂದು ಗಿಡಗಳ ಬುಡದಲ್ಲಿ ಗೊಬ್ಬರಕ್ಕಾಗಿ ಹೂತುಬಿಡುತ್ತಿದ್ದರು. ಈ ಕಾರಣದಿಂದ "ಬೂತಯ್ಯನವರು ಹಸಿ ಆಡನ್ನೇ ತಿನ್ನುತ್ತಾರೆ" ಎಂದು ಜನರು ಹೇಳುತ್ತಿದ್ದರು. ಒಟ್ಟಿನಲ್ಲಿ ಬೂತಯ್ಯನವರು ಕಿರಾತರಾಗಿದ್ದರು.

ಬೂತಯ್ಯನವರ ಸಂಪಾದನೆಯ ದಾರಿಗಳು ಬಗೆಬಗೆಯವಾಗಿದ್ದುವು. ಅವರು ಮಾಡುತ್ತಿದ್ದ ಎಲ್ಲಾ ಕೆಲಸಗಳಲ್ಲೂ ಅವರು ಅನುಸರಿಸುತ್ತಿದ್ದುದು ಒಂದೇ ತತ್ವ—"ತಾವು ಕಾನೂನಿನಲ್ಲಿ ಸಿಕ್ಕಿಕೊಳ್ಳಬಾರದು" ಎಂಬುದು. ಅವರಿಗೆ ಸರ್ಕಾರದ ಭಯದ ಹೊರತು ಮತ್ತಾವ ಭಯವೂ ಇರಲಿಲ್ಲ; ಹಣದ ಹೊರತು ಮತ್ತಾವ ಆಸೆಯೂ ಇರಲಿಲ್ಲ. ಅವರ ದೇಹ ಕಂಚಿನಂತಿದ್ದಿತು. ಅವರ ಕೆಚ್ಚೆದೆಯೂ ಧೈರ್ಯವೂ ಯಾರ ಗುಂಡಿಗೆಯನ್ನಾದರೂ ಅಲ್ಲಾಡಿಸುತ್ತಿದ್ದುವು. ಅವರ ಆಸೆಯು ಇಂದ್ರನ ವೈಭವವನ್ನೇ ಕೊಟ್ಟರೂ ತೃಪ್ತಿಯಾಗುತ್ತಿರಲಿಲ್ಲ. ಹಣ ಸಂಪಾದನೆಯ ಯಾವ ಮಾರ್ಗವನ್ನೂ ಅವರು ಅಲಕ್ಷ್ಯ ಮಾಡುತ್ತಿರಲಿಲ್ಲ; ಹಣಕ್ಕಾಗಿ ಯಾವ ಅನ್ಯಾಯ ಮಾಡಲು ಹಿಂತೆಗೆಯುತ್ತಿರಲಿಲ್ಲ. ನಮ್ಮ ಪ್ರಾಂತದ ಪ್ರತಿ ಒಬ್ಬ ರೈತನ ಹೆಸರಿನಲ್ಲೂ ಅವರ ಬಳಿ ಒಂದೊಂದು ಖಾಲಿ ಛಾಪಾ ಕಾಗದವಿದ್ದಿತು. ರೈತನು ಇವರ ಮಾತಿನಂತೆ ನಡೆಯದೆ ಸ್ವಲ್ಪ ಬಾಲ ಬಿಚ್ಚಿದರೂ ಸಾಕು, ಬೂತಯ್ಯನವರು ಕೂಡಲೇ ತಮ್ಮಲ್ಲಿದ್ದ ಛಾಪಾ ಕಾಗದವನ್ನು ತೆಗೆದುಕೊಂಡು ಅವನ ಹೆಸರಿನಲ್ಲಿ ಇನ್ನೂರೋ ಮುನ್ನೂರೋ ರೂಪಾಯಿಗಳಿಗೆ ಒಂದು ಕಳ್ಳ ಪತ್ರವನ್ನು ತಮಗೆ ಬೇಕಾದವರಿಂದ ಬರೆಯಿಸುತ್ತಿದ್ದರು. ಅನೇಕ ವೇಳೆ ರೈತ ಬದುಕಿರುವವರೆಗೆ ಸುಮ್ಮನೆ ಇದ್ದು, ಅವನು ಸತ್ತ ನಂತರ ತಮಗೆ ಅವನಿಂದ ಹಣವು ಬರಬೇಕಾಗಿದೆ ಎಂದು ಪ್ರಕಟಿಸುತ್ತಿದ್ದರು. ಒಬ್ಬೊಬ್ಬನ ಹೆಸರಿನಲ್ಲೂ ಇಂತಹ ಬುಸುನಾಗಪ್ಪಗಳು ಎಷ್ಟಿವೆ ಎಂಬುದು ಯಾರಿಗೂ ಗೊತ್ತಾಗುತ್ತಿರಲಿಲ್ಲ. ಅವರು ಯಾರಿಗೆ ಬೇಕಾದರೂ ಸಾಕ್ಷಿ ಹೇಳಲು ಸಿದ್ಧರಾಗಿದ್ದುದರಿಂದ, ಇಂತಹ ವಿಷಯಗಳಲ್ಲಿ ಅವರಿಗೂ ಸುಳ್ಳು ಸಾಕ್ಷಿಗಳನ್ನು ಹೇಳಲು ಜನರು ಸಿದ್ಧರಾಗಿರುತ್ತಿದ್ದರು. ಅವಿಭಕ್ತ ಕುಟುಂಬಗಳಲ್ಲಿ ಸತ್ತ ಅಣ್ಣತಮ್ಮಂದಿರ ಹೆಸರಿನಲ್ಲಿ ಇಂತಹ ಸುಳ್ಳು

ಕಾಗದಗಳು ಸೃಷ್ಟಿಯಾಗಿ ಮನೆಯಲ್ಲಿ ಗೃಹಚ್ಛಿದ್ರವುಂಟಾಗಿ ಸಂಸಾರಗಳೇ ಹಾಳಾಗುತ್ತಿದ್ದುವು. ಬೂತಯ್ಯನವರು ಅಣ್ಣನನ್ನು ತಮ್ಮನ ಮೇಲೂ ಅತ್ತಿಗೆಯನ್ನು ಮೈದುನನ ಮೇಲೂ ತಂದೆಯನ್ನು ಮಗನ ಮೇಲೂ ದತ್ತುಪುತ್ರನನ್ನು ತಾಯಿಯ ಮೇಲೂ ಕೆಡವಿ ಎಲ್ಲರ ಪರವನ್ನೂ ಹಿಡಿದು ಎಲ್ಲರಿಂದಲೂ ಕಾಗದಗಳನ್ನು ಬರೆಸಿಕೊಂಡು ದೊಡ್ಡ ಗೊಂದಲವನ್ನೇ ಉಂಟುಮಾಡಿ ಆಸ್ತಿಯನ್ನೆಲ್ಲಾ ನುಂಗಿಬಿಡುತ್ತಿದ್ದರು.

ರಾತ್ರಿ ಕಾಲದಲ್ಲಿ ಜತೆ ಜತೆ ಹೋರಿಗಳನ್ನು ಕದ್ದು ಬೆಳಗಾಗುವುದರೊಳಗೆ ೨೦-೩೦ ಮೈಲಿ ದೂರದ ಸಂತೆಗಳಿಗೆ ಹೋಗಿ ಒಂದೊಂದು ಸಂತೆಯಲ್ಲಿ ಒಂದೊಂದು ಹೋರಿಯನ್ನು ಮಾರಿಬಿಡುತ್ತಿದ್ದರು. ಸಂತೆಗಳಲ್ಲಿ ದನಗಳನ್ನು ಮಾರಿದರೆ ಮಾರುವವನು ಕೊಳ್ಳುವವನಿಗೆ 'ಚಹರೆ ಪಟ್ಟಿ' ಎಂಬುದಾಗಿ ಒಂದನ್ನು ಕೊಡಬೇಕು. ಆ ಪಟ್ಟಿಯಲ್ಲಿ ಮಾರುವವನ ಹೆಸರು, ಅವನಿಗೆ ಆ ದನ ಬಂದ ಬಗೆ ಇವುಗಳನ್ನೆಲ್ಲಾ ಬರೆದಿರಬೇಕು. ಬೂತಯ್ಯನವರು ಧಾರಾಳವಾಗಿ ಚಹರೆಪಟ್ಟಿಯನ್ನು ಎತ್ತು ಯಾರದೊ ಅವನ ಹೆಸರಿನಲ್ಲೇ ಬರೆದುಕೊಡುತ್ತಿದ್ದರು. ರಾಸಿನವನು ತನ್ನ ದನವನ್ನು ಹುಡುಕುತ್ತಾ ಕೊಂಡುಕೊಂಡವನ ಬಳಿಗೆ ಬಂದಾಗ ತನ್ನ ಹೆಸರಿನ ಚಹರೆಪಟ್ಟಿಯೇ ಅವನಿಗೆ ಕಾಣುತ್ತಿದ್ದಿತು. ರಾಸು ಕಳವು ಮಾಲೆಂದು ವ್ಯಕ್ತವಾಗಿದ್ದರೆ ಕೊಂಡುಕೊಂಡವನು ಸ್ವಲ್ಪ ಹೆದರುತ್ತಿದ್ದನು. ಆದರೆ ಚಹರೆಪಟ್ಟಿ ಯಜಮಾನನ ಹೆಸರಿನಲ್ಲೇ ಇದ್ದುದರಿಂದ ನಿಜವಾಗಿ ತನಗೆ ಮಾರಿದವನೇ ಈ ವೇಷದಿಂದ ದನವನ್ನು ಕಡಿಮೆ ಬೆಲೆಗೆ ಹಾರಿಸಿಕೊಂಡು ಹೋಗಲು ಬಂದಿರುವನೆಂದು ಅವನು ತಿಳಿದುಕೊಳ್ಳುತ್ತಿದ್ದನು. ದನದ ಯಜಮಾನನು ಕೊಂಡವನು ಎತ್ತನ್ನು ಕದ್ದುದು ಮಾತ್ರವಲ್ಲದೆ ಚಹರೆಪಟ್ಟಿಯನ್ನು ಫೋರ್ಜರಿ ಮಾಡಿದ್ದಾನೆಂದು ರೇಗುತ್ತಿದ್ದನು. ಇವೆಲ್ಲಾ ಕಣ್ಣೆದುರಿಗೆ ನಡೆಯುತ್ತಿದ್ದರೂ ಬೂತಯ್ಯನವರು ಮಾತ್ರ ಶಾಂತರಾಗಿಯೇ ಇರುತ್ತಿದ್ದರು. ತಮ್ಮ ಅಕೃತ್ಯವೇ ಈ ಕದನಕ್ಕೆ ಕಾರಣವೆಂಬುದರಿಂದ ಅವರಿಗೆ ಸ್ವಲ್ಪವೂ ವ್ಯಥೆಯುಂಟಾಗುತ್ತಿರಲಿಲ್ಲ. ಈ ರೀತಿಯಾಗಿ ಸಂತೆಗಳಲ್ಲಿ ಬೂತಯ್ಯನವರು ಸುಮಾರು ಮುನ್ನೂರು ಜತೆ ಎತ್ತುಗಳನ್ನೂ ಇನ್ನೂರು ಎಮ್ಮೆಗಳನ್ನೂ ನೂರಾರು ಕುದುರೆಗಳನ್ನೂ ಮಾರಿದ್ದಾರೆಂದು ತಿಳಿದವರು ಹೇಳುತ್ತಾರೆ. ಬೂತಯ್ಯನವರ ಈ ಸಾಧನೆಯಲ್ಲಿ ಅವರಿಗೆ ಅಸಾಧ್ಯ ಸಂಖ್ಯೆಯ ವೈರಿಗಳಾಗಿದ್ದಾರೆ. ಒದೆತಗಳಂತೂ ಲೆಕ್ಕವಿಲ್ಲದಷ್ಟು ಬಿದ್ದಿವೆ. ಒಕ್ಕಲಿಗರೂ ತಿಗಳರೂ ಹರಿಜನರೂ ಒಟ್ಟೊಟ್ಟಾಗಿ ಗುಂಪು ಕೂಡಿ ಅವರಿಗೆ ಚೆನ್ನಾಗಿ 'ಇಡಿಕಿ' ಮೈಯಿನ ಪ್ರತಿಯೊಂದು ಮೂಳೆಯನ್ನೂ ನೆಗ್ಗಿ ಹಾಕಿದ್ದಾರೆ. ಕೈಕಾಲುಗಳನ್ನೆಲ್ಲಾ ಇಡಿದು ಪುಡಿಮಾಡಿದ್ದಾರೆ. ಆದರೆ

ಇದಾವುದರಿಂದಲೂ ಬೂತಯ್ಯನವರು ಹೆದರಿಲ್ಲ. ಪ್ರತಿಯೊಂದು ಘಟನೆಯಿಂದಲೂ ಮನುಷ್ಯ ಜಾತಿಯಲ್ಲಿ ಅವರ ದ್ವೇಷವೂ ಕೋಪವೂ ಹೆಚ್ಚಾಗುತ್ತಿದ್ದವು.

ಬೂತಯ್ಯನವರಿಗೆ ಸಂಪಾದನೆಯು ಹೆಚ್ಚಾಗಿದ್ದಂತೆ ವೆಚ್ಚವೂ ಕಡಿಮೆಯಾಗಿದ್ದಿತು. ಅವರ ಸ್ವಭಾವ ಬಹು ಹಿಡಿತ, ತೀರ 'ಅಂಟು'. ನಮ್ಮ ಕಡೆ 'ಒಂದು ರೂಪಾಯಿಯನ್ನು ಮುರಿಸಿದರೆ ಒಬ್ಬನ ಬುರುಡೆಯನ್ನು ಹಾರಿಸಿದಂತೆ' ಎಂಬ ಮಾತನ್ನು ಮೊದಲು ಹೇಳಿ, ಅದನ್ನು ಆಚರಣೆಗೆ ತಂದವರು ಅವರೇ. ಅವರು ಜೀವಮಾನದಲ್ಲೆಲ್ಲಾ ಒಂದು ಪ್ರಾಣಿಗೂ ಒಂದು ತುತ್ತು ಅನ್ನವನ್ನೂ ಕೊಟ್ಟವರಲ್ಲ, ಎಂಜಲು ಕೈಯಲ್ಲಿ ಕಾಗೆಯನ್ನು ಸಹ ಓಡಿಸಿದವರಲ್ಲ. ಯಾವ ಸಾಮಾನನ್ನೂ ಅವರು ಒಂದೇ ಸಲ ಮೂರು ಕಾಸಿಗಿಂತ ಹೆಚ್ಚಾಗಿ ಮನೆಗೆ ತಂದುದಿಲ್ಲ. ಉಳಿದವರೆಲ್ಲಾ ತಮ್ಮ ಜಮೀನುಗಳಲ್ಲಿ ಬೆಳೆದ ಬೆಳೆಯನ್ನೇ ತಮ್ಮ ಮನೆಯ ಉಪಯೋಗಕ್ಕೆ ಬೇಕಾದಷ್ಟನ್ನು ಮೊದಲು ಇಟ್ಟುಕೊಂಡು ಉಳಿದುದನು ಮಾರಿದರೆ ಬೂತಯ್ಯನವರು ಬೆಳೆದುದನ್ನೆಲ್ಲಾ ಮಾರಿ ಮನೆಗೆ ಸಾಮಾನು ಬೇಕಾದಾಗ ಮೂರು ಕಾಸಿಗೋ ಆರು ಕಾಸಿಗೋ ತರುತ್ತಿದ್ದರು. ಅವರ ಮನೆಯಲ್ಲಿ ದುಡ್ಡಿಗೆ ಹೊರತು ಉಳಿದ ಸಾಮಾನುಗಳಿಗೆ ಯಾವಾಗಲೂ ದರಿದ್ರವೇ. ಅವರ ಹೆಂಡತಿಗೂ ಅವರಿಗೂ ಮನೆಗೆ ಬೇಕಾದ ಸಾಮಾನುಗಳನ್ನು ತರಲಿಲ್ಲವೆಂದು ಹತ್ತಿದ ವ್ಯಾಜ್ಯ ಹರಿಯುತ್ತಿರಲಿಲ್ಲ. ಅನೇಕ ದಿನ ಬೂತಯ್ಯನವರು ಮೂರು ಅಥವಾ ನಾಲ್ಕು ಗಂಟೆಗೆ ಹಗಲು ರಾತ್ರಿ ಎರಡಕ್ಕೂ ಅನ್ವಯಿಸುವಂತೆ ಒಂದೇ ಊಟವನ್ನು ಮಾಡುತ್ತಿದ್ದರು. ಅವರು ಉಪಯೋಗಿಸುತ್ತಿದ್ದ ಒಂದೇ ಒಂದು ತರಕಾರಿ ಹಲಸಿನಕಾಯಿ 'ಬಡಕು'. ಅದಕ್ಕೆ ಅವರು ದುಡ್ಡು ಕಾಸು ಕೊಡಬೇಕಾಗಿರಲಿಲ್ಲ. ಯಾರ ಮರದಲ್ಲಿ ಇದ್ದರೂ ಮುರಿದುಕೊಂಡು ಬರುತ್ತಿದ್ದರು. ಒಂದು ಮರದಲ್ಲಿಯಂತೂ ಅವರ ಜೀವಮಾನದಲ್ಲಿ ಮರದ ಯಜಮಾನನು ಒಂದು ಬಲಿತಕಾಯನ್ನೂ ಕಾಣಲೇ ಇಲ್ಲ. "ಈ ಮರದ ಕಾಯಿ ಬಲಿಯುವುದೇ ಇಲ್ಲ. ಇದಕ್ಕೆ ಹಾಕಿದುದೇ ಎಳೆಯ ಬೀಜ" ಎಂದು ಅವರು ಹೇಳುತ್ತಿದ್ದರು. ಹೀಗೆ ಮಾಡಿ ಬೂತಯ್ಯನವರು ತಮ್ಮ ಪಾಲಿಗೆ ಬಂದಿದ್ದ ಹತ್ತು ಸಾವಿರ ರೂಪಾಯಿನ ಆಸ್ತಿಯನ್ನು ತಾವು ಸಾಯುವುದಕ್ಕೆ ಮುಂಚೆ ಎರಡು ಲಕ್ಷಕ್ಕೆ ಏರಿಸಿದರು.

ಬೂತಯ್ಯನವರು ವಾಸವಾಗಿದ್ದುದು ಜಾಲಹಳ್ಳಿ ಗ್ರಾಮದಲ್ಲಿ. ಅಲ್ಲಿ ಬ್ರಾಹ್ಮಣರದು ಅವರದು ಒಂದೇ ಒಕ್ಕಲು. ಇವರಲ್ಲದೆ ಜಾಲಹಳ್ಳಿಯಲ್ಲಿ ತಿಗಳರದೂ ಸೇರಿ ಸುಮಾರು ನೂರು ಮನೆಗಳಿದ್ದುವು. ಹಳ್ಳಿಯವರಿಗೆ ಬೂತಯ್ಯನವರು ಬ್ರಾಹ್ಮಣರೆಂದು ಮಾತ್ರ ಗೊತ್ತಿದ್ದಿತೇ ಹೊರತು ಬ್ರಾಹ್ಮಣರಲ್ಲಿ ಅವರು ಯಾವ ಪಂಗಡಕ್ಕೆ ಸೇರಿದವರೆಂಬುದು ತಿಳಿದಿರಲಿಲ್ಲ. ಕೆಲವರು

ಬ್ರಾಹ್ಮಣರಲ್ಲಿ ಯಾವುದೋ ಪಂಗಡಕ್ಕೆ ಅವರನ್ನು ಅನ್ವಯಿಸಿಕೊಂಡು “ಬೂತಯ್ಯನವರು ಸಂಕೇತಿಗಳರು, ನಾವು ಬರಿಯ ತಿಗಳರು” ಎಂಬುದಾಗಿ ಹೇಳಿಕೊಳ್ಳುತ್ತಿದ್ದರು. ಬೂತಯ್ಯನವರ ಆಕಾರ, ಬಲಿತ ಗಡ್ಡ, ಅವರ ಬಟ್ಟೆಗಳು, ಮಾತಿನ ಸರಣಿ ಇವುಗಳನ್ನು ನೋಡಿದರೂ ಅವರು ಯಾವ ಜಾತಿಯವರೆಂದು ಹೇಳುವುದು ಕಷ್ಟವಾಗುತ್ತಿದ್ದಿತು. ಬೂತಯ್ಯನವರ ಮಡಿಮೈಲಿಗೆಗಳನ್ನು ನೋಡಿದರೆ ಜನಕ್ಕೆ ಮೈ ಜುಂ ಎನ್ನುತ್ತಿದ್ದಿತು. ಅವರ ಬಟ್ಟೆಗಳನ್ನು ಕಂಡರೆ ಬೆಂಕಿಯೂ ನೀರೂ ಹೆದರುತ್ತಿದ್ದುವು. ಅವರ ಸ್ವಭಾವ ಬಹಳ 'ಅಂಟಾದುದರಿಂದ' ಅವರು ಚಿಂದಿಯಲ್ಲದೆ ಹೊಸ ಬಟ್ಟೆಯನ್ನು ಉಟ್ಟುದನ್ನೇ ಜನರು ಕಾಣರು. ಅತಿ ಸೋಮಾರಿಗಳಾದ ಅವರು ತಮ್ಮ ಬಟ್ಟೆಯನ್ನು ಒಗೆದೇ ಕಾಣರು. ಜಾಲಹಳ್ಳಿಯಲ್ಲಿ ಊರಮುಂದೆಯೇ ನದಿ ಹರಿಯುತ್ತಿದ್ದರೂ ಅವರು ಸ್ನಾನ ಮಾಡುತ್ತಿರಲಿಲ್ಲ. ಸ್ನಾನಕ್ಕೆಂದು ನದಿಗೆ ಹೋಗಿ ಏನೋ ಬೇಸರಿಕೆಯುಂಟಾಗಿ ಸ್ನಾನ ಮಾಡದೆ ಸುಮ್ಮನೆ ಕೈಕಾಲು ತೊಳೆದುಕೊಂಡು ಮನೆಗೆ ಬಂದು ಬಿಡುತ್ತಿದ್ದರು. ಇದರಿಂದ ಸ್ನಾನ ಮಾಡದೆಯೇ ಸ್ನಾನ ಮಾಡಿದೆವೆಂದರೆ ಜಾಲಹಳ್ಳಿಯಲ್ಲಿ 'ಬೂತಯ್ಯನವರ ಸ್ನಾನವೋ' ಎಂದು ಜನರು ಕೇಳುವಷ್ಟು ಮಟ್ಟಿಗೆ ಅವರ ಸ್ನಾನವು ಪ್ರಸಿದ್ಧವಾಗಿದ್ದಿತು. ಬೂತಯ್ಯನವರಿಗೆ ಚಳಿ ಮಳೆ ಯಾವುದೂ ಕೆಂದುತ್ತಿರಲಿಲ್ಲ. ಅವರನ್ನು ಕಚ್ಚಿದ ಸೊಳ್ಳೆಗಳೂ ತಿಗಣೆಗಳೂ ತತ್ಕ್ಷಣ ಸತ್ತುಬೀಳುತ್ತಿದ್ದುವು. ಅವರಿಗೆ ಹಾಸಿಗೆಯಲ್ಲಿ ಮಲಗಿದರೆ ನಿದ್ರೆಯೇ ಬರುತ್ತಿರಲಿಲ್ಲ. ಹಾಸಿಗೆ ಮೆತ್ತಗಿದ್ದುದು ಅವರ ಮೈಗೆ ಒಗ್ಗುತ್ತಿರಲಿಲ್ಲ. ಹೆಗಲ ಮೇಲಿದ್ದ ಬಟ್ಟೆಯನ್ನೇ ಹಾಸಿಕೊಂಡು ಮೊಳಕೈಯನ್ನೇ ತಲೆದಿಂಬಿಗಿಟ್ಟುಕೊಂಡು ಗೊರಕೆ ಹೊಡೆಯುತ್ತಿದ್ದರು. ಈ ಕಾರಣದಿಂದ “ಬೂತಯ್ಯನವರು ಏಳುವುದಕ್ಕೆ ಮುಂಚೆ ಅವರ ಹಾಸಿಗೆಯೇ ಏಳುತ್ತದೆ” ಎಂದು ಜನರು ಹೇಳುತ್ತಿದ್ದರು. ಬೂತಯ್ಯನವರು ಸುಖಕ್ಕೆ ಆಳಾಗಿರಲಿಲ್ಲ. ಮೂರುದಿನ ಎರಡು ಹೊತ್ತೂ ಬಿಸಿ ಅನ್ನ ಸಾರು ಊಟ ಮಾಡಿದರೆ ಅವರಿಗೆ ತಲೆನೋವು ಬರುತ್ತಿದ್ದಿತು. ಎಂಟು ದಿನ ಅವರು ಸುಖವಾಗಿ ಕಾಲಕಾಲಕ್ಕೆ ಊಟ ನಿದ್ರೆ ಮಾಡಿದ್ದರೆ ಅವರಿಗೆ ಚಳಿಜ್ವರ ಬರುತ್ತಿದ್ದಿತು. ಒಂದು ತಿಂಗಳು ಅವರನ್ನು ಒಂದೇ ಕಡೆ ಕೂರಿಸಿ ಸುಖದಲ್ಲಿ ಇರಿಸಿದ್ದರೆ ಅವರು ಸಾಯುತ್ತಿದ್ದರು.

ಬೂತಯ್ಯನವರು ತಮ್ಮ ಮನೆಗೆ ಜನರನ್ನು ಸೇರಿಸುತ್ತಿರಲಿಲ್ಲ. ಯಾರಾದರೂ ಮನೆಯ ಹತ್ತಿರ ಬಂದರೆ ಅವರನ್ನು ಅಟ್ಟಿಸಿಕೊಂಡೇ ಬರುತ್ತಿದ್ದರು. “ಲೋಕದಲ್ಲಿರುವವರೆಲ್ಲಾ ಕಳ್ಳರು. ನಮ್ಮಿಂದ ಏನೋ ಲಾಭ ಸಂಪಾದನೆಗಾಗಿಯೇ ನಮ್ಮ ಬಳಿಗೆ ಬರುತ್ತಾರೆ. ಇವರ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕು” ಎಂದು ಅವರು ಹೇಳುತ್ತಿದ್ದರು. ತಮ್ಮ ಮಗನಾದ ಅಯ್ಯುವಿಗೆ

ಅವರು ನಿತ್ಯವೂ "ಲೋಕದ ಜನರ ದುಷ್ಟಸ್ವಭಾವ; ಅವರ ವಿಷಯದಲ್ಲಿ ತಾವು ಹೇಗೆ ಎಚ್ಚರಿಕೆಯಿಂದ ನಡೆದುಕೊಂಡು ಬಂದರು; ಹೇಗೆ ಜನರು ಒಂದು ಸಲ ಮಾಡಿದ ಕೆಡಕನ್ನು ತಾವು ಮರೆಯದೆ ಸಾಯುವವರೆಗೆ ನಾಗರ ಹಾವಿನಂತೆ ವೈರವನ್ನು ಸಾಧಿಸಿ ಅವನ ಬಾಲವನ್ನು ಕುಯ್ದರು; 'ಒಕ್ಕಲಿಗನ ನೆಂಟು ಒಡವೆ ಗೇಡು'; 'ಶೂದ್ರಸ್ಯ ಶುಭಂನಾಸ್ತಿ'; ತಿಗಳರು ನಿನಗೆ ಕೈಮುಗಿದರೆ, ನಿನ್ನೊಂದಿಗೆ ಒಂದು ಒಳ್ಳೆಯ ಮಾತನಾಡಿದರೆ ನಿನ್ನಿಂದ ಏನೋ ಕಸಿಯಲು ಈ ಸಿದ್ಧತೆಯನ್ನು ಮಾಡುತ್ತಾರೆ, ನೀನು ಎಚ್ಚರಿಕೆಯಿಂದ ಇರಬೇಕು"—ಮುಂತಾಗಿ ಉಪದೇಶ ಮಾಡುತ್ತಿದ್ದರು. ತಮಗೆ ಎಪ್ಪತ್ತು ವಯಸ್ಸಾಗಿ ಯಮನು ಕಣ್ಣುಮುಂದೆ ಸುಳಿಯುತ್ತಿರುವಾಗ ಕೂಡ ಅವರ ಹಣದ ಆಶೆಯೂ ಮನುಷ್ಯ ಸ್ವಭಾವದಲ್ಲಿ ಅಪನಂಬಿಕೆಯೂ ಕಡಿಮೆಯಾಗಿರಲಿಲ್ಲ. ಅವರು ಸಾಯುವ ಮೊದಲ ರಾತ್ರಿ ಅವರಿಗೆ ಜ್ವರ ಬಹು ತೀಕ್ಷ್ಣವಾಗಿ ಬಂದಿತ್ತು. ಅದರ ಕಾವಿನಿಂದ ಮಧ್ಯೆ ಮಧ್ಯೆ ಅವರಿಗೆ ಜ್ಞಾನ ಹೋಗುತ್ತಿದ್ದಿತು. ಒಂದು ಸಲ ಎಚ್ಚರವಾದಾಗ ಅವರು ಅಯ್ಯುವನ್ನು ಹತ್ತಿರ ಕರೆದು "ನೋಡು, ಆಚೆ ಬೀದಿ ಕೆಂಗನಿಗೆ ಅವತ್ತು ಒಂದು ಪಾವು ಉಪ್ಪು ಸಾಲಾಕೊಟ್ಟೆ, ಸಂತೇಲಿ ತಂದುಕೊಡುತ್ತೇನೆಂದು ಹೇಳಿದ ಕಳ್ಳ ಕೊರವು ನುಂಗಿಯೇ ಬಿಟ್ಟ, 'ಇನ್ನೇನು ಈ ಮುದಿಗೂಬೆ ಸಾಯುತ್ತೆ ತನಗೇ ದಕ್ಕಿತು' ಎಂದುಕೊಂಡಿರಬಹುದು; ಒಂದು ಹರಳನ್ನೂ ಬಿಡದೆ ವಸೂಲ್ಮಾಡು" ಎಂದು ಹೇಳಿದರು. ಸ್ವಲ್ಪ ಹೊತ್ತಿನೊಳಗೆ ಅಯ್ಯುವಿಗೆ ಮತ್ತೆ ಕಣ್ಣಿಗೆ ಜೊಂಪು ಹತ್ತಿತು. ಅಷ್ಟರಲ್ಲೇ ಬೂತಯ್ಯನವರು ಮಗನನ್ನು ಮತ್ತೆ ಕೂಗಿ "ಬೀದಿ ಮನೆ ಚಿಕ್ಕ ಎಪ್ಪತ್ತು ಬಳ್ಳ ರಾಗಿ ಗುತ್ತಿಗೆ ಕಮ್ಮಿ ಬಳ್ಳದಲ್ಲಿ ಅಳೆದಿದ್ದಾನೆ. ಅದರ ಓರಡೆ ಎರಡೂವರೆ ಬಳ್ಳ ಬರಬೇಕು. ಈ ಊರಿನ ಪದ್ಧತಿಯೇ ಹೀಗೆ. ಕಿರಾತರು; ನೆಚ್ಚಿದರೆ ತಲೆಗೆ ಕಲ್ಲು. ಒಂದು ಕಾಳೂ ಬಿಡದೆ ಹಳೇ ಬಾಕಿಯನ್ನೆಲ್ಲಾ ವಸೂಲ್ಮಾಡು. ಈ ಊರಲ್ಲಿ ಯಾರನ್ನೂ ನಂಬಬೇಡ. ಊರು ಒಂದು ಸುತ್ತ ಬಂದರೂ ನೂರು ಒಕ್ಕಲಲ್ಲಿ ಒಬ್ಬನಿಗೂ ಹೇಳಿದ ಮಾತು, ಕೊಟ್ಟ ನಂಬಿಕೆ ಎಂಬುದಿಲ್ಲ. ನಮ್ಮನ್ನು ಎಷ್ಟು ಹೀರಿದರೂ ಅವರಿಗೆ ತೃಪ್ತಿಯೇ ಇಲ್ಲ. ಹಣಕಾಸಿನ ವಸೂಲಿಯಲ್ಲಿ ಯಾರ ದಾಕ್ಷಿಣ್ಯಕ್ಕೂ ಒಳಗಾಗಬೇಡ. ರೈತರಿಗೆ ಅಯ್ಯೋ ಎಂದರೆ ಸಾಕು, ಆರು ತಿಂಗಳು ಪಾಪ ಸುತ್ತಿಕೊಳ್ಳುತ್ತೆ. ಬೆಣ್ಣೆ ಶಾಖವಿಲ್ಲದೆ ಹೇಗೆ ಕರಗುವುದಿಲ್ಲವೋ ಹಾಗೆಯೇ ರೈತನೂ ಬಿಸಿ ತಟ್ಟಿದ ಹೊರತು ನಿನಗೆ ಬಗ್ಗುವುದಿಲ್ಲ. ಅವನಿಗೆ ಬೈಗಳ ಸರಿಯಾಗಿ ಬೀಳುತ್ತಿದ್ದರೆ ಚೀಲಕ್ಕೆ ಕೈಹಾಕಿ ರೂಪಾಯಿಗಳನ್ನು ತೆಗೆಯುತ್ತಾನೆ. ಆ ಮಧ್ಯ ನೀನು ಒಂದು ಒಳ್ಳೆಯ ಮಾತನ್ನಾಡಿದರೂ ಸಾಕು, ಕೈಯಲ್ಲಿದ್ದ ರೂಪಾಯಿಯನ್ನು ಹಾಗೆಯೇ ಮೆಲ್ಲಗೆ ಚೀಲಕ್ಕೆ ಬಿಟ್ಟುಬಿಡುತ್ತಾನೆ. ಆದ್ದರಿಂದ ರೈತನೊಂದಿಗೆ

ಮರೆತೂ ಒಂದು ಒಳ್ಳೆಯ ಮಾತನ್ನೂ ಆಡಬೇಡ.... ಮರೆತೆ, ಮೂಲೆಮನೆ ರಂಗನ ತಣಿಗೆ ಪೈಕಿ ಒಂದನ್ನು ಮಾರಿಬಿಡು. ಎರಡರ ದುಡ್ಡ ಬರುತ್ತೆ..." ಎಂದು ಹೇಳುತ್ತಾ ಬೂತಯ್ಯನವರು ಪ್ರಾಣಬಿಟ್ಟರು.

ಮೂಲೆಮನೆ ರಂಗನೆಂಬುವನು ಬೂತಯ್ಯನವರಲ್ಲಿ ಹನ್ನೆರಡಾಣೆಗಳನ್ನು ತೆಗೆದುಕೊಂಡು ಎರಡು ಕಂಚಿನ ತಣಿಗೆಗಳನ್ನು ಅಡವಿಟ್ಟಿದ್ದನು. ಅವು ಹೊಸ ತಣಿಗೆಗಳಂತೆ ತೋರುತ್ತಿದ್ದುವು. ಅವುಗಳನ್ನು ಅಡವು ಇಟ್ಟುಕೊಂಡ ಕೆಲವು ದಿವಸಗಳ ಮೇಲೆ ಬೂತಯ್ಯನವರು "ಇದರಲ್ಲಿ ಊಟ ಪ್ರಾರಂಭಿಸಿದರೆ ನಿತ್ಯ ಎರಡು ಎಲೆ ಉಳಿಯುತ್ತೆ. ಹನ್ನೆರಡಾಣೆಯ ಬಡ್ಡಿಯಾದರೂ ಗಿಟ್ಟಿದಂತಾಯಿತು" ಎಂದುಕೊಂಡು ರಂಗನಮನೆಯ ತಣಿಗೆಯಲ್ಲೇ ಊಟವನ್ನು ಪ್ರಾರಂಭಿಸಿದರು. ಬೂತಯ್ಯನವರ ಹೆಂಡತಿ ಬದುಕಿರುವವರೆಗೆ ಒಕ್ಕಲಿಗನ ತಣಿಗೆಯಲ್ಲಿ (ಅದು ಹೊಸ ತಣಿಗೆಯಾಗಿದ್ದರೂ) ಊಟ ಮಾಡಲು ಅವಕಾಶ ಕೊಟ್ಟಿರಲಿಲ್ಲ. ಬೂತಯ್ಯನವರು ಸಾಯುವುದಕ್ಕೆ ಎರಡು ವರುಷ ಮುಂಚೆ ಅವರ ಹೆಂಡತಿಯವರು ಸ್ವರ್ಗಸ್ಥರಾದ ನಂತರ, ಬೂತಯ್ಯನವರೂ ಅಯ್ಯುವೂ ತಣಿಗೆಗಳಲ್ಲಿಯೇ ಊಟ ಮಾಡುತ್ತಿದ್ದರು.

ಬೂತಯ್ಯನವರ ಕಾಲಾನಂತರ ಅಯ್ಯುವೇ ಅವರ ಆಸ್ತಿಗೆ ಯಜಮಾನನಾದನು. ತಂದೆ ಸಾಯುವಾಗ ಅಯ್ಯುವಿಗೆ ಇಪ್ಪತ್ತೈದು ವಯಸ್ಸಾಗಿದ್ದಿತು. ಅವನು ಅಷ್ಟೇನೂ ಬುದ್ಧಿವಂತನಾಗಿರಲಿಲ್ಲ, ಬೂತಯ್ಯನವರ ದುಡ್ಡು ಇದ್ದುದರಿಂದಲೇ ಅವನೂ ಒಬ್ಬ ಮನುಷ್ಯನಾಗಿದ್ದನು. ಲಂಕೆಯಲ್ಲಿ ಹುಟ್ಟಿದವರೆಲ್ಲಾ ರಾವಣರೇ ಎಂಬಂತೆ ಬೂತಯ್ಯನವರ ಮಗನಾದ ಅವನೂ ದೌಷ್ಟ್ಯದಲ್ಲಿ ಕಡಿಮೆಯಾಗಿರಲಿಲ್ಲ; ಆದರೆ ಬೂತಯ್ಯನವರಷ್ಟು ಬುದ್ಧಿ ಕೌಶಲ್ಯವು ಅವನಲ್ಲಿ ಇಲ್ಲದುದರಿಂದ ಅವನು ಹಲ್ಲುಕಿತ್ತ ಹಾವಿನಂತಾಗಿದ್ದನು. ಬುದ್ಧಿಯು ಕಡಿಮೆಯಾಗಿದ್ದುದರಿಂದ ಅವನ ಧೈರ್ಯವೂ ಕಡಿಮೆಯಾಗಿದ್ದಿತು. ಆದರೆ ಅವನು ಯುವಕನಾಗಿದ್ದುದರಿಂದ ದಯೆ ದಾಕ್ಷಿಣ್ಯಗಳ ಸೆಲೆಯು ಪೂರ್ಣವಾಗಿ ಬತ್ತಿ ಹೋಗಿರಲಿಲ್ಲ. ಬೂತಯ್ಯನವರು ಬದುಕಿರುವಾಗ ಅದು ಪೂರ್ಣವಾಗಿ ಬತ್ತಿ ಹೋಗಿದೆಯೆಂದು ನಂಬಿದ್ದರು. ರೈತರಿಗೆ ಹಾಗೆಯೇ ತೋರುತ್ತಿದ್ದಿತು. ಬಹುದೊಡ್ಡ ಅಪಾಯ, ದುಃಖ ಇವು ಬಂದಿದ್ದರೆ ಅದರ ಪರಿಣಾಮ ಅವನ ಮನಸ್ಸಿನ ಮೇಲೆ ಹೇಗೆ ಆಗುತ್ತಿದ್ದಿತೋ ಹೇಳುವುದು ಸಾಧ್ಯವಲ್ಲ. ಅಂತಹ ನೂರಾರು ಅನುಭವಗಳು ತಮಗೆ ಉಂಟಾಗಿದ್ದರೂ ಬೂತಯ್ಯನವರ ಮನಸ್ಸು ಮಾತ್ರ

ಕಲ್ಲಿನಂತೆಯೇ ಇದ್ದಿತು. ಬೂತಯ್ಯನವರಲ್ಲೂ ಅಯ್ಯುವಿನಲ್ಲೂ ಮನುಷ್ಯತ್ವವಿದೆಯೆಂಬುದನ್ನು ಜಾಲಹಳ್ಳಿಯಲ್ಲಿ ಯಾರೂ ಒಪ್ಪುತ್ತಿರಲಿಲ್ಲ. 'ಆ ಕೇಡಿಗನ ಮಗ ಈ ಕೇಡಿಗ' ಎಂದು ಅವರು ಅಯ್ಯುವನ್ನು ಬಯ್ಯುತ್ತಿದ್ದರು. ಸಮಯ ಸಿಕ್ಕಿದರೆ ಕೋಳಿ ಕುರಿಗಳನ್ನು ಕುಯ್ಯುವಂತೆ ಅಯ್ಯುವನ್ನು ಕುಯ್ಯಲು ಅವರು ಹಿಂದೆಗೆಯುತ್ತಿರಲಿಲ್ಲ. 'ಅಯ್ಯ ಮನಸನ ಕುಲವಲ್ಲ ದೆಯ್ಯ, ಅವನ್ಹಡೆ ಹಾಳಾಗ' ಎಂದಲ್ಲದೆ ಅವರು ಅಯ್ಯುವಿನ ಮಾತನ್ನು ಎತ್ತುತ್ತಿರಲಿಲ್ಲ. 'ನಿಮ್ಮಪ್ಪ ನಮ್ನೆಲ್ಲ ದೋಚಿ ಗುಡ್ಡೆ ಹಾಕವ್ನೆ; ಯಾವ ಗುದ್ಲಿ ಹಿಡಕೊಂಡು ಕಡ್ದದ್ಕೆ ನಿನಗೆ ಇಷ್ಟು ಬದುಕು. ನಮ್ಮ ನೂರು ಮಕ್ಳು ಸತ್ತು ನೀವು ಒಬ್ಬರು ಬದುಕಿದಿರಿ. ಊರೆಲ್ಲ ಉಪಾಸ ಸತ್ತು ನಿಮ್ಮ ಮನೆ ಬೆಳೀತು. ಹಂಗೆ ನುಂಗಿದ್ದನ್ನೆಲ್ಲಾ ಕಕ್ಕೊ ಕಾಲ ಬರ್ತದೆ" ಮುಂತಾಗಿ ತಿಗಳರು ಅಯ್ಯುವಿನ ಎದುರಿಗೆ ಹರಟುತ್ತಿದ್ದರು. ಬೂತಯ್ಯನವರು ಸತ್ತ ನಂತರ ಅವರು ಸ್ವಲ್ಪ ಜೋರಾಗಿದ್ದರು. ಬೂತಯ್ಯನವರ ಎದುರಿಗೆ ಆ ತರದ ಮಾತುಗಳನ್ನಾಡಲೂ ಯಾರಿಗೂ ಧೈರ್ಯವಿರುತ್ತಿರಲಿಲ್ಲ; ಆಡಿದ್ದರೆ ಬೂತಯ್ಯನವರು ಅಲ್ಲೇ ಅವನ ನಾಲಗೆಯನ್ನು ಕುಯಿದು ನಾಯಿ-ನರಿಗಳಿಗೆ ಹಾಕುತ್ತಿದ್ದರು.

ಅಯ್ಯು ಕಿರಾತನೇ ಆಗಿದ್ದರೂ ಒಂದೊಂದು ಸಲ ಅವನಿಗೆ ರೈತರನ್ನು ಕಂಡು ಅವರೂ ಮನುಷ್ಯರೇ ಎಂಬ ಯೋಚನೆಯುಂಟಾಗುತ್ತಿದ್ದಿತು. ಆದರೆ ಮರುಕ್ಷಣದಲ್ಲಿಯೇ ಬೂತಯ್ಯನವರು ಹೇಳಿದ್ದ 'ಇವರನ್ನು ನಂಬಿದರೆ ತಲೆಗೆಕಲ್ಲು' ಎಂಬ ಮಾತು ಜ್ಞಾಪಕಕ್ಕೆ ಬಂದು ಅವನ ಮನುಷ್ಯ ಸ್ವಭಾವ ಅಲ್ಲೇ ಅದುಮಿಹೋಗಿ ಅವನು ಪಿಶಾಚಿಯಾಗುತ್ತಿದ್ದನು. ಅವನ ಗದ್ದೆಯಲ್ಲಿ ಜೀತಮಾಡುತ್ತಿದ್ದ ಆಳು ಕರಿಯನು ಗದ್ದೆಯಲ್ಲಿ ನಾಗರಹಾವಿನ ಕಡಿತದಿಂದ ಸತ್ತಾಗ ಅಯ್ಯುವು ತನಗೆ ಕರಿಯನ ಹೆಂಡತಿಯಿಂದ ಬರಬೇಕಾಗಿದ್ದ ಹಣವನ್ನೆಲ್ಲಾ ಅವಳಿಗೇ ಸೋಡಿಮಾಡಿದನು. ಅದಕ್ಕೂ ಜಾಲಹಳ್ಳಿಯ ರೈತರು ಅಯ್ಯುವನ್ನು ಸುಮ್ಮನೆ ಬಿಡಲಿಲ್ಲ. "ಬೂತಯ್ಯನವರು ಇದ್ದ ಕಾಲದಲ್ಲಿ ಗದ್ದೇಲಿ ಬೆಳೆ ಆಗದಿದ್ದರೂ ರೈತರು ಮನೆ ಬಾಗಿಲಿಗೇ ಗುತ್ತಿಗೆ ತಂದು ಅಳೀತಿದ್ರು. ವಸೂಲೀಲಿ ಅವರ ಸಮ್ಮಂದ ಇವರೇ—ಪಾಪ ಪಾಪ. ಅವರು ಕಾಸಿಗೆ ಕಾಸು ಕೂಡಾಕಿದ್ದೆಲ್ಲಾ ಇವರ ಕಾಲದಲ್ಲಿ ದಾರಿ ಹಿಡೀತದೆ" ಎಂದರು. ಅಯ್ಯುವಿಗೆ ಬಹಳ ಕೋಪ ಬಂತು. "ಎಲಾ, ನಾನು ಸ್ವಲ್ಪ ದಯೆ ತೋರಿಸಿದರೆ ನನ್ನನ್ನು ಕೈಲಿ ಹರಿಯದವನು" ಎನ್ನುತ್ತಾರೆ. ಈ ಮೃಗಗಳಿಗೆ ಚಾವಟಿ ಏಟೇ ಸರಿ. ನಮ್ಮ ತಂದೆ ಹೇಳಿದ್ದಂತೆ 'ಶೂದ್ರಸ್ಯ ಶುಭಂ ನಾಸ್ತಿ' ಎಂದುಕೊಂಡು ಅವನು ರೈತರನ್ನು ಬೂತಯ್ಯನವರಿಗಿಂತಲೂ ಹೆಚ್ಚು ಬಿರುಸಿನಿಂದ ಹುರಿಯಲು ಪ್ರಾರಂಭಿಸಿದನು.

ಜಾಲಹಳ್ಳಿಯ ತಿಗಳರ ಪೈಕಿ ಗುಳ್ಳನೆಂಬುವನು ಸ್ವಲ್ಪ ಪುಷ್ಟನಾಗಿದ್ದನು. ಅವನಿಗೂ ಅಯ್ಯುವಿನಷ್ಟೇ ವಯಸ್ಸಾಗಿದ್ದಿತು. ಅವನನ್ನು ಮನಸ್ಸಿನಲ್ಲಿಟ್ಟುಕೊಂಡು ಬೂತಯ್ಯನವರು ತಾವು ಬದುಕಿರುವಾಗ "ಒಕ್ಕಲಿಗನ ಹತ್ತಿರ ಹಣವಿದ್ದರೆ ಅವನಿಗೆ ಸರಿಯಾಗಿ ನಿದ್ರೆ ಬರುವುದಿಲ್ಲ; ಊಟ ಸೇರುವುದಿಲ್ಲ. ಆ ಹಣವನ್ನು ಯಾರಿಗಾದರೂ ದಂಡ ತತ್ತ ಹೊರತು ಅವನಿಗೆ ಮನಸ್ಸಿಗೆ ನಿರಾಳವಿಲ್ಲ, ಕೈಲಿ ದುಡ್ಡಿದ್ದರೆ ಅವನು ಇಲ್ಲದ ವ್ಯಾಜ್ಯವನ್ನು ಗಂಟುಹಾಕಿಕೊಂಡು ಹಣವನ್ನು ಲಾಯರಿಗೆ ತೆತ್ತುಬಿಡುತ್ತಾನೆ. ಅನಂತರ ಅವನ ಮನಸ್ಸು ಶಾಂತವಾಗುತ್ತೆ. ಜೋರಾದವರಿಗೆ ಒಕ್ಕಲಿಗರು ದಂಡ ತೆತ್ತು ಬಿಡುತ್ತಾನೆ; ಮೆತ್ತಗಿರುವವರನ್ನು ತುಳಿದು ಬಿಡುತ್ತಾನೆ" ಎಂಬುದಾಗಿ ಹೇಳಿದ್ದರು. ಗುಳ್ಳನು ಒಂದಿಲ್ಲೊಂದು ಕಾರಣದಿಂದ ಯಾವಾಗಲೂ ಇತರರೊಂದಿಗೆ ಜಗಳವನ್ನು ತೆಗೆಯುತ್ತಿದ್ದರೂ ಬೂತಯ್ಯನವರ ತಂಟೆಗೆ ಮಾತ್ರ ಬಂದಿರಲಿಲ್ಲ. ಆದರೆ ಅಯ್ಯುವಿನ ಮನಸ್ಸು ಒಂದೊಂದು ಸಲ ಸ್ವಲ್ಪ ಮೃದುವಾಗುವುದೆಂದು ಅವನಿಗೆ ಗೊತ್ತಾದ ಕೂಡಲೇ "ನಾನು ಅಯ್ಯನನ್ನು ನುಂಗಿ ನೀರು ಕುಡಿದೇ ಬಿಡುತ್ತೇನೆ" ಎಂದುಕೊಂಡನು.

ಬೂತಯ್ಯನವರ ಒಂದು ಜಮೀನನ್ನು ಗುಳ್ಳನು ಹುಲ್ಲುಗಾವಲಿಗೆ ವರುಷಕ್ಕೆ ಒಂದು ರೂಪಾಯಿ ಗುತ್ತಿಗೆಗೆ ಮಾಡಿಕೊಂಡಿದ್ದನು. ಅದು ಸುಮಾರು ಮೂವತ್ತು ವರುಷಗಳಿಂದ ಅವನ ತಂದೆಯ ಸ್ವಾಧೀನದಲ್ಲೇ ಇದ್ದಿತು. ಬೂತಯ್ಯನವರ ಕಾಲದಲ್ಲಿ ಗುಳ್ಳನ ತಂದೆಯು ಒಂದು ವರುಷವೂ ನಿಲ್ಲಿಸದೆ ಗುತ್ತಿಗೆ ರೂಪಾಯಿಯನ್ನು ಪಾವತಿ ಮಾಡುತ್ತಿದ್ದನು. ಆದರೆ ಹಾವಿನ ಹಲ್ಲಲ್ಲಿ ಸತ್ತ ಕರಿಯನ ಹೆಂಡತಿಗೆ ಅಯ್ಯು ಹಣವನ್ನು ಸೋಡಿ ಮಾಡಿದ ನಂತರ ತಾನು ಕೊಡಬೇಕಾದ ಒಂದು ರೂಪಾಯಿಯನ್ನೂ ತಿಂದುಕೊಳ್ಳಬಹುದೆಂದು ಗುಳ್ಳನಿಗೆ ತೋರಿತು. ಅವನು ಒಬ್ಬಿಬ್ಬರೊಂದಿಗೆ "ಅಯ್ಯ ಕೊಟ್ಟದ್ದು ತಕೋತಾನೆ, ಕೊಟ್ಟರೆ ತಕೋತಾನೆ. ನಾನು ಮೂವ್ವತ್ತು ವರುಷದಿಂದ ಹುಲ್ಲು ಬೆಳೀಲಿ ಬಿಡಲಿ, ದಂಡದ ಗುತ್ತಿಗೆ ತೆರತಾ ಬಂದಿದೀನಿ. ಈ ಬಾರಿ ರೂಪಾಯಿ ಅಯ್ಯ ತಕೊಳ್ಳೋದ ನೋಡ್ತಿನಿ" ಎಂದನು. ಅಯ್ಯುವಿಗೆ ತಾನು ಸ್ವಲ್ಪ ದಯೆ ತೋರಿಸಿದುದಕ್ಕೆ ತನ್ನನ್ನು ಕೈಲಿ ಹರಿಯದವನೆಂದುಕೊಂಡು ತನಗೆ ಬರಬೇಕಾದುದನ್ನೆಲ್ಲಾ ಇವರೇ ನುಂಗುತ್ತಾರಲ್ಲಾ ಎಂಬ ಕೋಪ ಪೂರ್ಣವಾಗಿತ್ತು. ಒಬ್ಬನಿಗೆ ಬಿಸಿಯನ್ನು ತೋರಿಸಿದ ಹೊರತು ತನ್ನ ವಿಷಯದಲ್ಲಿ ರೈತರಿಗೆ ಭಯವುಂಟಾಗುವುದಿಲ್ಲವೆಂಬುದು ಅವನಿಗೆ ಮಂದಟ್ಟಾಯಿತು. ಅಯ್ಯುವು "ಗುತ್ತಿಗೆ ರೂಪಾಯಿಯನ್ನು ಕೊಡು. ಇಲ್ಲದಿದ್ದರೆ ಜಮೀನಿಗೆ ದನಗಳನ್ನು ಬಿಟ್ಟು ಮೇಯಿಸಬೇಡ" ಎಂಬುದಾಗಿ ಗುಳ್ಳನಿಗೆ ಹೇಳಿಕಳುಹಿಸಿದನು. ಗುಳ್ಳನು ರೂಪಾಯಿಯನ್ನು ಕೊಡಲಿಲ್ಲ. ದನಗಳನ್ನು

ಮೇಯಿಸುವುದನ್ನೂ ಬಿಡಲಿಲ್ಲ. ಅಯ್ಯುವು ಹುಲ್ಲುಗಾವಲಿಗೆ ಹೋಗಿ ದನಗಳನ್ನು ದೊಡ್ಡಿಗೆ ಕೂಡಿಸಿದನು. ಗುಳ್ಳನ ಕೈಲಿ ನಾಲ್ಕು ಕಾಸಿನ ಬಲವಿದ್ದುದರಿಂದ ಅವನು ಕೊಬ್ಬಿ ಅಯ್ಯುವಿಗೆ ನಾಲ್ಕು ಬಾರಿಸಿದನು. ಅಯ್ಯು ಗುಳ್ಳನ ಮೇಲೆ ಒಂದು ಕ್ರಿಮಿನಲ್ ಮೊಖದ್ದಮೆಯನ್ನು ಒಂದು ಸಿವಿಲ್ ಮೊಕದ್ದಮೆಯನ್ನೂ ಹೂಡಿದನು. ವೈರವು ಇಬ್ಬರಿಗೂ ಪೂರ್ಣವಾಗಿ ಮಸೆಯಿತು. ಒಬ್ಬರನ್ನೊಬ್ಬರು ನಿರ್ನಾಮ ಮಾಡಬೇಕೆಂದು ದೃಢಸಂಕಲ್ಪ ಮಾಡಿದರು.

ಅದೇ ಗುಳ್ಳನ ಮನೆ ಹಾಳಾಗುವುದಕ್ಕೆ ಪ್ರಾರಂಭವಾಯಿತೆನ್ನಬಹುದು. ಬೂತಯ್ಯನವರು ಹೇಳುತ್ತಿದ್ದಂತೆ ಅವನ ಕೈಲಿ ನಾಲ್ಕು ಕಾಸು ಇರುವವರೆಗೆ ಆ ಕಾಸು ಅವನನ್ನು ಈ ರೀತಿಯಾಗಿ ಕುಣಿಸುತ್ತಿದ್ದಿತು. ಕ್ರಿಮಿನಲ್ ಮೊಖದ್ದಮೆಯಲ್ಲಿ ಅವನ ಹಸುರು ನೋಟುಗಳು ಒಂದೊಂದಾಗಿ ಕರಗಲು ಪ್ರಾರಂಭವಾದುವು. ಲಾಯರಿಗೆ ಎಷ್ಟು ಕೊಟ್ಟರೂ ತೃಪ್ತಿಯೇ ಇರಲಿಲ್ಲ. ಮೊದಲೇ ಫೀಜನ್ನು ಗೊತ್ತು ಮಾಡಿಕೊಂಡು ಲಾಯರು ಆ ಮೊಬಲಗನ್ನು ಪೂರ್ಣವಾಗಿ ತೆಗೆದುಕೊಂಡುಬಿಟ್ಟರು. ಆದರೆ ಮೊಖದ್ದಮೆಯ ದಿವಸಗಳಲ್ಲೆಲ್ಲಾ ಅಲ್ಪಸ್ವಲ್ಪ ಹಣವನ್ನು ಕೊಡದೆ ಇದ್ದರೆ ಅವರು ಕೋರ್ಟಿಗೆ ಬರುತ್ತಿರಲಿಲ್ಲ. “ಮೊದಲು ಕೊಟ್ಟಿದ್ದು ಆಯಿತು. ಫೀಜು ಬಿದ್ದ ಹೊರತು ವಾದಿಸುವುದು ನಮ್ಮ ಪದ್ಧತಿಯಲ್ಲ” ಎಂದು ಅವರು ಗದರಿಸುತ್ತಿದ್ದರು. ಒಂದು ದಿವಸ “ನನ್ನ ಹೆಂಡತಿ ಸೀರೆ ಇಲ್ಲ. ಅದನ್ನು ತಂದುಕೊಟ್ಟ ಹೊರತು ಕೋರ್ಟಿಗೆ ಹೋಗುವುದಕ್ಕೆ ಆಗುವುದಿಲ್ಲ” ಎಂದರು. ಗುಳ್ಳನು ಗುಮಾಸ್ತನನ್ನು ಕರೆದುಕೊಂಡು ಹೋಗಿ ಸೀರೆಯನ್ನು ತಂದನು. ಮತ್ತೊಂದು ದಿನ ಲಾಯರು “ನನ್ನ ಮಗ ಮೂರು ತಿಂಗಳಿನಿಂದ ಸ್ಕೂಲು ಫೀಜು ಕೊಟ್ಟಿಲ್ಲ. ಅವನನ್ನು ಸ್ಕೂಲಿನಿಂದ ವಜಾ ಮಾಡಿದ್ದಾರೆ. ಅವನು ಸ್ಕೂಲಿಗೆ ಹಿಂದಿರುಗಿ ಹೋಗುವವರೆಗೆ ನಾನು ಕೋರ್ಟಿಗೆ ಹೋಗುವುದಕ್ಕೆ ಆಗುವುದಿಲ್ಲ” ಎಂದರು. ಎಲ್ಲದಕ್ಕೂ ತಲೆಬೋಳಿಸಿಕೊಂಡು ನಿಂತಿದ್ದ ದುರದೃಷ್ಟದ ಗುಳ್ಳನು ಮೂರು ತಿಂಗಳ ಸ್ಕೂಲು ಫೀಜನ್ನೂ ಲಾಯರಿಗೆ ಸಮರ್ಪಿಸಿದನು. ಲಾಯರ ಹೆಂಡತಿ ಅವನಿಗೆ ಸೌದೆ, ಬೆಣ್ಣೆ ಬಾಳೆ ಎಲೆ ಮುಂತಾದುವುಗಳಿಗೆ ಹೇಳುತ್ತಿದ್ದರು. ಮೊಖದ್ದಮೆಯ ದಿವಸ ಹೋದಾಗಲೆಲ್ಲಾ ಲಾಯರು ಗುಳ್ಳನನ್ನು ಹೊಸಬನನ್ನು ಮಾತಾಡಿಸುವಂತೆ “ಯಾವದು ನಿನ್ನೂರು, ನಿನ್ನ ಹೆಸರೇನು, ಯಾಕೆ ಬಂದೆ?” ಮುಂತಾಗಿ ಕೇಳುತ್ತಿದ್ದರು. ಗುಳ್ಳನಿಗೆ ಅವರನ್ನು ನುಂಗುವಷ್ಟು ಸಿಟ್ಟು ಬರುತ್ತಿದ್ದಿತು. ಲಾಯರುಗಳು ಇಷ್ಟು ಹೊಟ್ಟೆ ಹರುಕರಾಗಿ ಜುಟ್ಟು ಜನಿವಾರ ಉಡಿದಾರಕಿತ್ತು ನಿಂತಿರುವವರೆಂಬುದು ಅವನಿಗೆ ಎಂದೂ ತಿಳಿದಿರಲಿಲ್ಲ. ಅವರ ಆಸೆಗೆ ಪಾರವೇ ಇರಲಿಲ್ಲ. ಊರನ್ನೇ ನುಂಗಿದರೂ ಅವರ ಹಸಿವು ಅಡಗುವಂತಿರಲಿಲ್ಲ. ಕಕ್ಷಿಗಾರನು ಹೀರಿ

ಹೀದೆಯಾದರೂ ಅವರ ಫೀಜು ಮಾತ್ರ ಇನ್ನೂ ಪಾವತಿಯಾಗುತ್ತಿರಲಿಲ್ಲ. ಕಕ್ಷಿಗಾರನನ್ನು ಕಂಡಕೂಡಲೇ ಅವರಿಗೆ ಎಲ್ಲೂ ಇಲ್ಲದ ಆಕ್ರೋಶವೂ ಕೋಪವೂ ಉಂಟಾಗುತ್ತಿದ್ದುವು. ಅವರ ಎದುರಿಗೆ ನಿಷ್ಕಾರಣವಾಗಿ ಯಾರ ಮೇಲೋ ರೇಗಿ ಯಾರನ್ನೋ ಬೈದುಬಿಡುತ್ತಿದ್ದರು. "ಲಾಯರಿ ಅವರೆ. ಹಣ ಸುರಿದರೆ ಯಾವ ವ್ಯಾಜ್ಯಾನೂ ಗೆದ್ದುಕೊಡ್ತಾರೆ" ಎಂದುಕೊಂಡಿದ್ದ ಗುಳ್ಳನಿಗೆ "ಸದ್ಯ ಲಾಯರ ಕೈಯಿಂದ ತಪ್ಪಿಸಿಕೊಂಡರೆ ಸಾಕು. ಅಯ್ಯನಿಗೆ ಈ ಬಾರಿ ಜೈಲು ಒಂದು ಆಗಿಬಿಡಲಿ. ಮನೆಮಠ ಇತ್ತಾಪಾರ ಎಲ್ಲಾ ಹೋದರೂ ಸರಿಯೇ. ಆಮೇಲೆ ಕೋರ್ಟಿನ ಕಡೆ ತಲೆಮಾಡಿ ಮಲಗೋಕಿಲ್ಲ" ಎಂದು ದಿನಕ್ಕೆ ಸಾವಿರ ಸಾರಿ ಪ್ರತಿಜ್ಞೆ ಮಾಡುತ್ತಿದ್ದನು.

ಜಾಲಹಳ್ಳಿಯಲ್ಲಿ ಗುಳ್ಳನು ಕೀಚಕನಾಗಿದ್ದನು. ಬೂತಯ್ಯನು ಮೇದು ಉಳಿದುವೆಲ್ಲಾ ಅವನ ಪಾಲಾಗುತ್ತಿದ್ದುವು. ಅವನು ಹೆದರುತ್ತಿದ್ದುದು ಬೂತಯ್ಯನವರೊಬ್ಬರಿಗೆ ಮಾತ್ರ. ಅವರು ಬಿಟ್ಟ ಕೂಳೆಗಳನ್ನೆಲ್ಲಾ ಇವನು ನೆಲಸಮ ಮಾಡುತ್ತಿದ್ದನು. ಗುಳ್ಳನಿಗೂ "ರೈತರು ಕುರಿಗಳು, ನಾವು ಅವರನ್ನು ತಿನ್ನಬೇಕು. ಅವರು ಇರುವುದೇ ನಮಗಾಗಿ" ಎಂಬ ನಂಬಿಕೆಯಿದ್ದಿತು. ಅವನು ಫೂಟ್ ಲಾಯರಿಯಾಗಿ ರೈತರನ್ನು ಸದೆಬಡಿದು ಊರಿಗೆ ಮುಖಂಡನಾಗಿದ್ದನು. "ಸದ್ಯ ಈ ಮುಖಂಡರ ಕೈಯಿಂದ ತಪ್ಪಿಸಿಕೊಂಡರೆ ಬದುಕಿಕೊಂಡವಲ್ಲಾ" ಎಂದು ರೈತರು ಗೋಳಿಡುತ್ತಿದ್ದರು. ಜಾಲಹಳ್ಳಿಯ ತಿಗಳರಿಗೂ ಒಕ್ಕಲಿಗರಿಗೂ ಉಪ್ಪಲಿಗರಿಗೂ ಗುಳ್ಳ, ಬೂತಯ್ಯ—ಈ ಇಬ್ಬರನ್ನು ಕಂಡರೂ ಭಯವಿದ್ದಿತು. ಆದರೆ ಬೂತಯ್ಯನವರಲ್ಲಿ ಅವರ ದ್ವೇಷ ಅಧಿಕವಾಗಿತ್ತು. ಬೂತಯ್ಯನವರೂ ಗುಳ್ಳನೂ ಇಬ್ಬರೂ "ಹುಡ ಬಡಿದುಹೋದರೆ ಊರಿನ ಪ್ಲೇಗು, ಕಾಲರಾ, ಮಾರಿ, ಮಸಣಿ ತೊಲಗಿದಂತಾಗುತ್ತೆ" ಎಂದು ರೈತರು ಹೇಳುತ್ತಿದ್ದರು. ಆದರೂ ಸಮಯ ಬಂದರೆ ಅವರು ಗುಳ್ಳನಿಗೆ ಸಹಾಯ ಮಾಡುತ್ತಿದ್ದರು. ಗುಳ್ಳನಿಗೂ ಅಯ್ಯುವಿಗೂ ಹೊಡೆದಾಟ ಪ್ರಾರಂಭವಾದುದರಿಂದ ಊರಿನವರಿಗೆ ಸಂತೋಷವೇ ಆಯಿತು. "ಆ ಹೈರಾವಣ ಮೈರಾವಣರು ಒಬ್ಬರೊಂದಿಗೆ ಒಬ್ಬರು ಹೊಡೆದಾಡಿ ತಾವೇ ಮಟ್ಟವಾಗ್ತಾರೆ" ಎಂದುಕೊಂಡು ಹಳ್ಳಿಯವರು ತಟಸ್ಥರಾದರು. ಆ ಎರಡು ಧೂಮಕೇತುಗಳು ಒಬ್ಬರ ಮೇಲೊಬ್ಬರು ತೊಡಚಿಕೊಂಡಿರುವುದು ದೇವರ ತಂತ್ರವೇ ಎಂದು ಅವರು ನಂಬಿದರು.

ಗುಳ್ಳನು ಹಳ್ಳಿಯಲ್ಲಿ ಅಷ್ಟು ಪ್ರಬಲನಾಗಿದ್ದರೂ ಕೋರ್ಟಿಗೆ ಹೆಚ್ಚಾಗಿ ಅಲೆದಿರಲಿಲ್ಲ. ತಾನು ಯಾರ ಹತ್ತಿರವಾದರೂ ಸರಿಯೇ ಕೆಲಸವನ್ನು ಸುಲಭವಾಗಿ ಸಾಧಿಸಿಕೊಳ್ಳುತ್ತೇನೆಂಬ ನಂಬಿಕೆ ಅವನಿಗೆ ಚೆನ್ನಾಗಿದ್ದಿತು. ಆದರೆ ತಾನು ಹಳ್ಳಿಯಲ್ಲಿ ಕಾಗೆಯಂತಿದ್ದರೆ ಕೋರ್ಟಿನ

ನೌಕರಮಾನೇರೂ ಲಾಯರ ಗುಮಾಸ್ತರೂ ಸಾಕ್ಷಿಗಾರರೂ ತನ್ನನ್ನೂ ಮೀರಿಸಿದ ಹದ್ದುಗಳೆಂಬುದು ಅವನ ಅನುಭವಕ್ಕೆ ಬಂದಿರಲಿಲ್ಲ. ಅವನ ಲಾಯರು ದೊಡ್ಡ ಕುಡುಕರಾಗಿ ಸೀಮೆಯಿಂದ ಬರುತ್ತಿದ್ದ ಸೀಸೆಯ ಹೆಂಡವನ್ನು ಕುಡಿಯುತ್ತಿದ್ದರು. ಅದರ ಅಮಲು ಏರಿದಾಗ ಒಂದು ದಿನ ಅವರು ಒಂದು ಗುಂಡು ಸೂಜಿಯಿಂದ ಗುಳ್ಳನನ್ನು ಚುಚ್ಚಿ ಹಾ ಹಾ ಎಂದು ನಕ್ಕರು. ಗುಳ್ಳನು ನೋವನ್ನು ತಡೆಯಲಾರದೆ ಹಾ ಹಾ ಎಂದನು. ಅವನು ಹಾ ಹಾ ಎಂದಷ್ಟೂ ಲಾಯರು ಗುಂಡು ಸೂಜಿಯಿಂದ ಚುಚ್ಚುವುದೂ ನಗುವುದೂ ಹೆಚ್ಚಾಯಿತು. ಗುಳ್ಳನು ನೋವನ್ನು ತಡೆಯಲಾರದೆ ಲಾಯರಿಯ ಕೈಯಿನ ಗುಂಡುಸೂಜಿಯನ್ನು ಕಿತ್ತು ಎಸೆದನು. ಲಾಯರು ಕೋಪದಿಂದ ಗುಳ್ಳನ ವ್ಯಾಜ್ಯದ ಕಟ್ಟನ್ನು ಅವನ ಮುಖದ ಮೇಲೆ ಒಗೆದು "ನನ್ನ ಮನೆ ಹತ್ತಿರ ಇನ್ನು ಮುಂದೆ ಕಾಲಿಟ್ಟೀಯೆ, ಬಂದರೆ ನಿನ್ನ ತಲೆ ಒಡೆಯುತ್ತೇನೆ" ಎಂದು ಕಿರಿಚಿದನು. ಎಂಜಲು ಎಲೆಗಳಂತೆ ಗಾಳಿಯಲ್ಲಿ ಹಾರಾಡುತ್ತಿದ್ದ ಕಟ್ಟಿನ ಕಾಗದಗಳನ್ನೆಲ್ಲಾ ಆಯಿದುಕೊಂಡು ಗುಳ್ಳನು ಕೋರ್ಟಿನ ಬಳಿಗೆ ಹೋದನು. ಗುಳ್ಳನ ಸಾಕ್ಷಿಗಳು ಅವನ ಜೀವವನ್ನು ಹೀರತೊಡಗಿದರು. "ಈಗ ಬಿಟ್ಟರೆ ಇವನ ತಾವ ಕಾಸಿನ ಕಿಲಬೂ ಸಿಕ್ಕೋಕಿಲ್ಲ. ಈ ಏಜ್ಯದಲ್ಲಿ ಇವನ ಗತಿ ನೆಟ್ಟಗಾಗೋಕಿಲ್ಲ. ಹಿರಿದದ್ದೇ ನಮಗೆ ಲಾಭ" ಎಂದು ಅವರು ಗುಳ್ಳನಿಂದ ಸಾಧ್ಯವಾದಷ್ಟು ಹಣವನ್ನು ಹಿರಿಯತೊಡಗಿದರು. ಗುಳ್ಳನು ತನ್ನ ಸ್ವಾರ್ಥವನ್ನು ಸಾಧಿಸುವುದಕ್ಕಾಗಿ ಗ್ರಾಮದ ಹತ್ತೂ ಜನರ ಒಳ್ಳೆಯದಕ್ಕೆ ಹೊಡೆದಾಡುತ್ತೇನೆಂದು ಹೇಳಿ ಸುಳ್ಳು ಸಾಕ್ಷಿಗಳನ್ನು ಒದಗಿಸಿದ್ದನು. ನಾಲ್ಕು ಜನ ಸಾಕ್ಷಿಗಳನ್ನು ಜೋಡಿಸಿಕೊಂಡು ಸರಿಯಾಗಿ ಮೊಖದ್ದಮೆಯನ್ನು ನಡೆಸಿದರೆ ಅಯ್ಯುವಿಗೆ ಜೈಲು ಆಗುವುದರಲ್ಲಿ ಸಂದೇಹವಿಲ್ಲವೆಂದು ಅವನಿಗೆ ಗೊತ್ತಿದ್ದಿತು. ಅಯ್ಯುವಿಗೇ ಏಟು ಬಿದ್ದಿದ್ದರೂ ಅವನಿಗೆ ಸರಿಯಾದ ಸಹಾಯಕರಾದ ಸಾಕ್ಷಿಗಳಾರೂ ಇರಲಿಲ್ಲ. ಗುಳ್ಳನ ಕಡೆಯವರು ಅಯ್ಯುವೇ ಗುಳ್ಳನನ್ನು ಹೊಡೆದನೆಂದು ಹೇಳಲು ಸಿದ್ಧರಾಗಿದ್ದರು. ಇದರಿಂದ ಅಯ್ಯುವಿಗೆ ಕೋರ್ಟಿನಲ್ಲಿ ತನಗೆ ಏನಾಗುವುದೋ ಎಂದು ಭಯವಿದ್ದಿತು. ಆದರೆ ಅವನಿಗೆ ಗುಳ್ಳನ ಭಯವಿರಲಿಲ್ಲ. "ಈ ಕೇಸು ನಡೆಸುವ ಹೊತ್ತಿಗೆ ಇವನ ಹೆಂಡತಿಯ ತಾಲಿ ಮರದ ತಾಲಿಯಾಗುತ್ತೆ. ಕೋರ್ಟಿಗೆ ಅಲೆದು ಇವನು ಹಣ್ಣಾಯಿ ನೀರ್ಗಾಯಿಯಾಗುತ್ತಾನೆ. ಇನ್ನು ಬೇರೆ ಇವನು ತಲೆ ಎತ್ತುವಂತಿಲ್ಲ" ಎಂದುಕೊಂಡು ಅವನು ಸಮಾಧಾನದಿಂದಲೇ ಇದ್ದನು.

ಗುಳ್ಳನು ಯೋಚಿಸುತ್ತಿದ್ದಂತೆ ಅವನ 'ಇತ್ತಾಪಾರ' ಹೋದರೂ ಮೊಖದ್ದಮೆ ಮುಗಿಯಲಿಲ್ಲ. ಹೆಚ್ಚು ಖರ್ಚು ಇಲ್ಲದೆ ಸುಖವಾಗಿ ಅವನು ಮನೆಯಲ್ಲಿದ್ದಾಗ ಅವನ ಹತ್ತಿರ ಇದ್ದ

ಹಣಕ್ಕೆ ದಾರಿಯೇ ತೋರಿರಲಿಲ್ಲ. ಅದು ಮಧ್ಯಾಹ್ನದ ನಂತರದ ನೆರಳಿನಂತೆ ಗಳಿಗೆಗಳಿಗೆಗೂ ವೃದ್ಧಿಯಾಗುತ್ತಾ ಹೋಗುತ್ತಿದ್ದಿತು. ಕೋರ್ಟಿಗೆ ಅವನು ತಿರುಗಲು ಪ್ರಾರಂಭಿಸಿದ ಮೇಲೆ ಮನೆಯಲ್ಲಿದ್ದ ಹಣವು ಖರ್ಚಾದುದಲ್ಲದೆ ಸಾಲವೂ ಆಯಿತು. ಎಷ್ಟು ದಿನವಾದರೂ ಆ ಮೊಖದ್ದಮೆ ಮುಗಿಯುವಂತೆಯೇ ತೋರಲಿಲ್ಲ. ಅವನ ಆರಂಭ ಕಾಡುಪಾಲಾಯಿತು. ದನಕರುಗಳು ಗೊರಗವಾದವು. ಬರತಕ್ಕ ಹಣಗಳೆಲ್ಲಾ ನಿಂತುಹೋದವು. ಮನೆಯಲ್ಲಿ ಅವನಿಗೂ ಅವನ ಹೆಂಡತಿಗೂ ನಿತ್ಯ ಅಯ್ಯುವಿನೊಂದಿಗೆ ರಾಜಿ ಮಾಡಿಕೊಳ್ಳುವ ವಿಷಯದಲ್ಲಿ ವಾಗ್ವಾದ ನಡೆಯುತ್ತಿದ್ದಿತು. ಇದಾವುದರಿಂದಲೂ ಗುಳ್ಳನು ಜಗ್ಗಲಿಲ್ಲ. ಅವನ ಸಾಕ್ಷಿಗಾರರು ಸರಿಯಾದವರಾಗಿದ್ದರು. ಅಯ್ಯುವಿಗೆ 'ಹಾತ್ ಬೇಡಿ' ಬೀಳುವುದರಲ್ಲಿ ಯಾವ ಸಂದೇಹವೂ ಇರಲಿಲ್ಲ. "ಆಮೇಲೆ ಆದ್ದಂಗೆ ಆಗಲಿ".

ಅಯ್ಯುವಿನ ಲಾಯರು ಅವನಿಂದ ತೆಗೆಯಬೇಕಾದ ಫೀಜನ್ನೆಲ್ಲಾ ತೆಗೆದುಕೊಂಡು ನಂತರ "ನಿನಗೆ ಸಾಕ್ಷಿಗಳಿಲ್ಲದಿದ್ದರೆ ಮೊಖದ್ದಮೆಯು ನಿನಗೆ ವಿರೋಧವಾಗುತ್ತೆ. ಇಲ್ಲಿ ಸರಿಯಾದ ಸಾಕ್ಷಿಗಳಿಲ್ಲದಿದ್ದರೆ ಮೇಲಿನ ಕೋರ್ಟಿಗೆ ಹೋಗುವುದು ಕಷ್ಟ" ಎಂದು ಹೇಳಿಬಿಟ್ಟರು. ಅಯ್ಯುವು ಊರಿಗೆ ಬಂದು ರೈತರನ್ನೆಲ್ಲಾ ವಿಚಾರಿಸಿದನು. ತಾನು ಗುತ್ತಿಗೆ ಹಣವನ್ನು ಕೇಳುವುದಕ್ಕೆ ಹೋಗಿದ್ದಾಗ ಗುಳ್ಳನು ತನ್ನನ್ನು ಬಡಿದುದನ್ನು ಕಂಡಿದ್ದ ಅನೇಕ ರೈತರನ್ನು ನಿಜವಾದ ಸ್ಥಿತಿಯನ್ನು ಸಾಕ್ಷಿ ಹೇಳಬೇಕೆಂದು ಕೇಳಿದನು. ಬೂತಯ್ಯನವರ ಕೈಯಲ್ಲಿ ಬರೆಗಳನ್ನು ತಿಂದಿದ್ದ ರೈತರು ಒಬ್ಬರೂ ಅಯ್ಯುವಿನ ಪರವಾಗಿ ಸಾಕ್ಷಿ ಹೇಳಲು ಒಪ್ಪಲಿಲ್ಲ. ಕೋರ್ಟು ಕಛೇರಿಗಳಲ್ಲಿ ಗಂಟು ವ್ಯಾಜ್ಯಗಳಿಗಾಗಿ ಯಾವಾಗಲೂ ಅಲೆಯುತ್ತಿದ್ದ, ತಲೆಗೆ ಅರಿವೆಯಿಲ್ಲದ ಬೂತಯ್ಯನವರ ಮಗನಾಗಿದ್ದುದೇ ಅಯ್ಯುವಿಗೆ ವಿರೋಧವಾದ ಒಂದು ಬಲವಾದ ಸಾಕ್ಷಿಯಾಗಿದ್ದಿತು. "ಸಾರಿಗೆ ಹಾಕುವ ಬೇಳೆ ಕುದಿಯಬಾರದು. ಅದು ಕುದ್ದರೆ ಸಾರು ಮಾರನೇ ದಿವಸಕ್ಕೆ ಹಳಸಿಹೋಗುತ್ತದೆ. ಬೇಳೆ ಕುದಿಯದೆ ಇದ್ದರೆ ಸಾರು ಎರಡು ದಿವಸವಾದರೂ ಕಬ್ಬಿನ ಹಾಲಿನಂತೆ ಇರುತ್ತದೆ" ಎಂದು ಹೇಳುತ್ತಾ ಲಕ್ಷಾಂತರವನ್ನು ಸಂಪಾದಿಸಿದ ಬೂತಯ್ಯನವರು ಅಯ್ಯುವಿಗೆ ತಾವು ಬಿಟ್ಟ ಆಸ್ತಿ ಆ ರೀತಿ ಪರಿಣಮಿಸುವುದೆಂದು ಎಂದೂ ತಿಳಿದಿರಲಿಲ್ಲ. ಊರಿನವರಲ್ಲಿ ಒಬ್ಬನಾದರೂ ಸತ್ಯವಂತನು ಇಲ್ಲದ್ದನ್ನು ಕಂಡು ಅಯ್ಯುವಿಗೆ ಆಶ್ಚರ್ಯವಾಯಿತು. ಅಷ್ಟು ಜನರೂ ಒಟ್ಟಾಗಿ ತನ್ನನ್ನು ದ್ವೇಷಿಸುವುದರ ಕಾರಣವೂ ಅವನಿಗೆ ತಿಳಿಯಲಿಲ್ಲ. "ಈ ಜನರು ಸ್ವಭಾವತಃ ಪಶುಗಳು, ಕಾಡುಮನುಷ್ಯರು; ಆದರೆ ದುಷ್ಟರು. ಇವರನ್ನು ಹಾವನ್ನು ಕಂಡಕಡೆ ಹೊಡೆಯುವಂತೆ ಹೊಡೆದು

ಹಾಕಬೇಕು. ಇಂತಹ ರೈತರು ಇದ್ದರೂ ಒಂದೇ ಸತ್ತರೂ ಒಂದೇ. 'ತನ್ನ ತಿನ್ನುವ ಹಡಗು ಸುಡು' ಎಂದು ಹೇಳಿದೆ. ಇದನ್ನು ತಿಳಿದೇ ನಮ್ಮ ತಂದೆ ಇವರನ್ನು ಅರೆಯುತ್ತಿದ್ದರು. ನನಗೂ ಇವತ್ತಿನವರೆಗೆ ಇವರಲ್ಲಿ ಅಲ್ಪಸ್ವಲ್ಪ ನಂಬಿಕೆಯಿದ್ದಿತು. ಇನ್ನು ಮೇಲೆ ಎಲ್ಲಾ ಹೋಯಿತು. ಇವರಲ್ಲಿ ಒಬ್ಬನಿಗೂ ಅಯ್ಯೋ ಎನ್ನಬಾರದು. ಅಬ್ಬ! ನನಗೆ ಅವಮಾನ ಪಡಿಸಲು ಇವರು ಎಷ್ಟು ಒಟ್ಟಾಗಿದ್ದಾರೆ! ಆಗಲಿ, ಇವರ ಬೇರನ್ನು ಬೊಡ್ಡೆಗೆ ಕುಯ್ಯದೆ ಇದ್ದರೆ ನಾನು ಬೂತಯ್ಯನವರ ಮಗನೇ ಅಲ್ಲ" ಎಂದುಕೊಂಡು ಅವನು ರೈತರನ್ನೂ ಗುಳ್ಳನನ್ನೂ ಹಣ್ಣು ಮಾಡುವ ಉಪಾಯಗಳನ್ನು ಚಿಂತಿಸತೊಡಗಿದನು.

ಗುಳ್ಳನು ದಾರಿದ್ರ್ಯದಿಂದ ಕಂಗಾಲಾದನು. ಆದರೂ ಅಯ್ಯುವಿನ ಮೊಖದ್ದಮೆ ತೀರ್ಮಾನವಾಗಿರಲಿಲ್ಲ. ಅವರಿಬ್ಬರ ನಡುವೆ ಹಸಿ ಹುಲ್ಲನ್ನು ಹಾಕಿದರೂ ಉರಿದು ಹೋಗುತ್ತಿದ್ದಿತು. ಒಬ್ಬರನ್ನೊಬ್ಬರು ಎದುರಿಗೆ ಕಂಡಾಗ ಎಲ್ಲಿ ಕೈ ಕೈ ಮಿಲಾಯಿಸುತ್ತದೋ ಎಂದು ಜನರು ಹೆದರುತ್ತಿದ್ದರು. ಅಯ್ಯುವನ್ನು ಜೈಲಿನಲ್ಲಿರಿಸಲು ಗುಳ್ಳನು ತನ್ನ ಸರ್ವಸ್ವವನ್ನೂ ಆಗಲೇ ಕಳೆದಿದ್ದನು. ಗುಳ್ಳನನ್ನು ನುಂಗಿ ನೀರು ಕುಡಿಯಲು ಅಯ್ಯುವು ತನ್ನ ಸರ್ವಸ್ವವನ್ನೂ ವೆಚ್ಚ ಮಾಡಲು ಸಿದ್ಧನಾಗಿದ್ದನು. ಇಬ್ಬರು ಅಥವಾ ಇಬ್ಬರ ಪೈಕಿ ಒಬ್ಬರು ಇಲ್ಲವಾದ ಹೊರತು ಜಾಲಹಳ್ಳಿಗೆ ಶಾಂತಿಯೂ ಪ್ರಜೆಗಳಿಗೆ ನೆಮ್ಮದಿಯೂ ಉಂಟಾಗುವಂತೆ ತೋರುತ್ತಿರಲಿಲ್ಲ.

ಕ್ರಿಮಿನಲ್ ಮೊಖದ್ದಮೆಯಲ್ಲಿ ತೀರ್ಮಾನವಾಗುವುದಕ್ಕೆ ಸುಮಾರು ಒಂದು ತಿಂಗಳ ಮುಂಚೆ ಸಿವಿಲಿನಲ್ಲಿ ಅಯ್ಯು, ಗುಳ್ಳನ ಮೇಲೆ ಒಂದು ಡಿಕ್ರಿಯನ್ನು ತೆಗೆದುಕೊಂಡು ಅವನ ಮನೆಯನ್ನು ಹರಾಜಿಗೆ ಕೋರ್ಟಿನಲ್ಲಿ ಕೇಳಿದನು. ಆ ಮನೆಯನ್ನು ತನಗೆ ಬರಬೇಕಾದ ಹಣಕ್ಕೆ ಕೋರ್ಟಿನ ಮೂಲಕ ಸ್ವಾಧೀನ ಪಡಿಸಿಕೊಂಡು, ಗುಳ್ಳನನ್ನೂ ಅವನ ಹೆಂಡತಿಯನ್ನೂ ಜಾಲಹಳ್ಳಿ ಬಿಟ್ಟು ಓಡಿಸಬೇಕೆಂಬುದೇ ಅವನ ಉದ್ದೇಶವಾಗಿತ್ತು. ಸಾಧ್ಯವಾದರೆ ಗುಳ್ಳನನ್ನು ಸಿವಿಲ್ ಜೈಲಿನಲ್ಲಿ ಸಹ ಇಡಿಸಬೇಕೆಂದು ಅವನು ಹವಣಿಸುತ್ತಿದ್ದನು. ಕೆಣಕಿದವರ ಹಣೇಬರಹವನ್ನು ತೊಡೆದು ಹಾಕಿದ ಹೊರತು ಅಯ್ಯನು ಬಿಡುವುದಿಲ್ಲ ಎಂಬ ಭಯವನ್ನು ಜನರಲ್ಲಿ ಹುಟ್ಟಿಸಬೇಕೆಂಬುದೇ ಅಯ್ಯುವಿನ ಸಂಕಲ್ಪವಾಗಿದ್ದಿತು.

ಗುಳ್ಳನ ಹೆಂಡತಿ ಗುಳ್ಳನಂತೆ ತಾಟಕಿಯಾಗಿರಲಿಲ್ಲ. ಅವಳು ಏನೂ ಅರಿಯದವಳೂ ಭಯಸ್ತಳೂ ಆಗಿದ್ದಳು. ಗುಳ್ಳನ ದಾಂಧಲೆಗಳೊಂದೂ ಅವಳಿಗೆ ಸೇರುತ್ತಿರಲಿಲ್ಲ. ಎಲೆಯ ಮರೆಯ ಕಾಯಂತೆ ಉಪಾಯವಾಗಿ ಕಾಲಹಾಕಬೇಕೆಂದು ಅವಳು ಹೇಳುತ್ತಿದ್ದಳು. ಜಾಲಹಳ್ಳಿಯಲ್ಲಿ

ಅವಳಷ್ಟು ಒಳ್ಳೆಯ ಹೆಂಗಸು ಯಾರೂ ಇರಲಿಲ್ಲ. ಅವಳು ಲಕ್ಷಣವಾಗಿ ಮೈ ಕೈಕಾಲು ತುಂಬಿಕೊಂಡು ದುಂಡುದುಂಡಾಗಿ ನೋಡುವುದಕ್ಕೆ ಗಜಗೌರಿಯಂತಿದ್ದಳು. ಅಯ್ಯುವಿನೊಂದಿಗೆ ತನಗೆ ಒದಗಿದ ಈ ವ್ಯಾಜ್ಯದಲ್ಲಿ ಹೊರತು ಉಳಿದ ಎಲ್ಲಾ ವಿಷಯಗಳಲ್ಲೂ ಗುಳ್ಳನು ಹೆಂಡತಿಯ ಮಾತಿನಂತೆ ನಡೆಯುತ್ತಿದ್ದನು. ಈ ಒಂದು ವ್ಯಾಜ್ಯದಲ್ಲಿ ಮಾತ್ರ ಅತಿ ದ್ವೇಷವು ಅವನನ್ನು ಕುರುಡಾಗಿಯೂ ಹುಚ್ಚಾಗಿಯೂ ಮಾಡಿದ್ದಿತು. ಅಯ್ಯುವಿನೊಂದಿಗೆ ಹೊಡೆದಾಟವು ಪ್ರಾರಂಭವಾದ ಮೇಲೆ ಗುಳ್ಳನ ಮನಃಶಾಂತಿಯೂ ಆರೋಗ್ಯವು ಕೆಟ್ಟುವು. ಅದರ ಹೊರತು ಅವನಿಗೆ ಮತ್ತಾವ ಯೋಚನೆಯೂ ಇರಲಿಲ್ಲ. ಇನ್ನು ಮೂರು ತಿಂಗಳು ಆ ವ್ಯಾಜ್ಯ ನಡೆದಿದ್ದರೆ ಗುಳ್ಳನಿಗೆ ಹುಚ್ಚು ಹತ್ತುವುದರಲ್ಲಿ ಸಂದೇಹವಿರಲಿಲ್ಲ. ಅಯ್ಯುವು ಇದ್ದುದು ಇಲ್ಲದ್ದು ಎಲ್ಲಾ ಸೇರಿಸಿ, ಗಂಟನ್ನು ದಪ್ಪಮಾಡಿ ಗುಳ್ಳನ ಮನೆಯನ್ನು ಹರಾಜಿಗೆ ಕೇಳಿದುದು ಗುಳ್ಳನಿಗೆ ಗೊತ್ತಾದಾಗ ಅವನಿಗೆ ಬಹಳ ಕೋಪ ಬಂದಿತು. ಹಣವನ್ನು ಕೊಡಲು ಅವನ ಕೈಯಲ್ಲಿ ಒಂದು ಕಾಸೂ ಇರಲಿಲ್ಲ. ಎದುರು ಅರ್ಜಿಗಳನ್ನು ಹಾಕಿ ಪಾಟಿ ಸವಾಲುಗಳನ್ನು ಜೋಡಿಸಿ, ಲಾಯರುಗಳನ್ನೂ ನ್ಯಾಯಾಧಿಪತಿಯನ್ನೂ ಗೊಂದಲದಲ್ಲೂ ಗಾಬರಿಯಲ್ಲೂ ಕೆಡವಲು, ದೇಹದಲ್ಲಿ ತ್ರಾಣವೂ ಉತ್ಸಾಹವೂ, ಇರಲಿಲ್ಲ. ಊರಿಗೆ ಕಣ್ಣಾಗಿ ಹುಲಿಯಂತೆ ಬಾಳಿ ಅಯ್ಯುವೇ ಬಾಯಲ್ಲಿ ಅಕ್ಕಿಕಾಳು ಹಾಕಿಕೊಳ್ಳುವಂತೆ ಮಾಡಿದ್ದ ತನ್ನನ್ನು ಅಯ್ಯುವು ಹುಚ್ಚು ನಾಯನ್ನು ಓಡಿಸುವಂತೆ ತನ್ನ ಮನೆಯಿಂದ ಓಡಿಸುವುದು ಅವನಿಗೆ ಸಹಿಸದಾಯಿತು. ಅವನು ಆ ದಿನವೆಲ್ಲಾ ಗಾಯಗೊಂಡ ಹಾವಿನಂತೆ ಬುಸುಗುಟ್ಟುತ್ತ ನಿಟ್ಟುಸಿರುಬಿಡುತ್ತಿದ್ದನು. "ಇನ್ನು ಈ ಅವಮಾನವನ್ನು ಸಹಿಸುವುದು ಸಾಧ್ಯವಿಲ್ಲ. ಈ ಊರಲ್ಲಿ ಇನ್ನು ಬದುಕಿದ್ದರೂ ಒಂದೇ ಸತ್ತರು ಒಂದೇ. ಆದರೆ ಸಾಯುವುದಕ್ಕೆ ಮುಂಚೆ ಊರಿಗೆ ಒಂದು ಉಪಕಾರ ಮಾಡುತ್ತೇನೆ. ಅಯ್ಯನ್ನ ತಕೋತೇನೆ. ಅಯ್ಯನ ಬುರುಡೆ ಹಾರಿದ ಮೇಲೆ ನನ್ನ ಬುರುಡೆ ನೂರು ಸಲ ಹಾರಲಿ. ಅವನ ಕತ್ತು ಕುಯಿದು ನನ್ನ ಕತ್ತು ಕುಯಿಕೋತೇನೆ" ಎಂದು ನಿಶ್ಚಯಿಸಿಕೊಂಡನು. ಗುಳ್ಳನು ಆ ತೀರ್ಮಾನಕ್ಕೆ ಬಂದೊಡನೆಯೇ ಅವನಿಗೆ ಭಯಂಕರವಾದ ಸಂತೋಷವುಂಟಾಯಿತು. ಅವನ ಮುಖದಲ್ಲಿ ಪೈಶಾಚಿಕ ನಗೆಯು ಮೂಡಿತು. ಅಯ್ಯುವು ಆಗಲೇ ಸತ್ತು ಎಷ್ಟೋ ವರುಷಗಳಾದಂತೆ ಅವನಿಗೆ ತೋರಿತು. ಅಯ್ಯುವಿನ ಕಡಿದ ಕತ್ತು, ಬಾತ ಶಿರ, ಹೊರಕ್ಕೆ ಹೊರಟ ಕಣ್ಣುಗುಡ್ಡೆಗಳು, ರಕ್ತದಿಂದ ತೊಯಿದ ದೇಹ ಇವು ಬಹುದಿನಗಳಿಂದ ತನ್ನ ಜತೆಯಲ್ಲೇ ಸುಳಿದಾಡುತ್ತಿದ್ದಂತೆ ಅವನಿಗೆ ತೋರಿತು. ತನ್ನ ಎಲ್ಲಾ ಕಷ್ಟಗಳೂ ಪರಿಹಾರವಾಗಿ ಮನಸ್ಸಿನ ಗೊಂದಲವೆಲ್ಲಾ ಒಂದೇ ಸಲಕ್ಕೆ ಬಿಡುಗಡೆಯಾದಂತೆ ಅವನಿಗೆ ಭಾಸವಾಯಿತು. ಅವನ

ಮನಸ್ಸಿನ ಎಲ್ಲಾ ಪ್ರವೃತ್ತಿಗಳೂ ದ್ವೇಷವೊಂದರಲ್ಲೇ ಅಡಕವಾದುವು. ದೇಹದ ಚಲನವಲನಗಳೆಲ್ಲಾ ಅಯ್ಯುವನ್ನು ಕೊಲೆ ಮಾಡುವುದೊಂದರಲ್ಲೇ ಕೇಂದ್ರೀಕೃತವಾದುವು. ಆಗ ಯಾರಾದರೂ ಗುಳ್ಳನಿಗೆ "ಅಯ್ಯುವನ್ನು ಕೊಲ್ಲುವ ಪ್ರಯತ್ನವನ್ನು ಬಿಡು" ಎಂಬುದಾಗಿ ಹೇಳಿದ್ದರೆ ಖಂಡಿತವಾಗಿಯೂ ಎರಡು ಕೊಲೆಗಳಾಗುತ್ತಿದ್ದುವೆಂಬುದರಲ್ಲಿ ಸಂದೇಹವಿಲ್ಲ.

ಆ ರಾತ್ರಿ ಗುಳ್ಳನು ಮಚ್ಚನ್ನು ಒಂದೇ ಸಮನಾಗಿ ಹರಿತ ಮಾಡುತ್ತಿದ್ದನು. ತುಕ್ಕು ಹಿಡಿದು ಕಪ್ಪಾಗಿದ್ದ ಅದರ ಅಲುಗು ಮಿಂಚಿನಂತೆ ಹೊಳೆಯಲು ಪ್ರಾರಂಭವಾಯಿತು. ಅದರ ಹರಿತವನ್ನು ನೋಡಿ ಗುಳ್ಳನಿಗೆ ಬಹಳ ಸಮಾಧಾನವಾಯಿತು. ಗುಳ್ಳನ ಸ್ವಭಾವವನ್ನು ಅರಿತಿದ್ದ ಅವನ ಹೆಂಡತಿಗೆ ಅವನ ಮುಖಭಾವವನ್ನೂ ಅವನು ಮಸೆಯುತ್ತಿದ್ದ ಮಚ್ಚನ್ನೂ ನೋಡಿ ಭಯವಾಯಿತು. ಗುಳ್ಳನು ಪದೇ ಪದೇ ತನ್ನ ಎದುರಿಗೆ 'ಅಯ್ಯನ್ನ ತಕೋತೀನಿ' ಎಂಬುದಾಗಿ ಹೇಳುತ್ತಿದ್ದುದೂ ಅಯ್ಯುವು ತನ್ನ ಗಂಡನ ಮನೆಯನ್ನು ಹರಾಜು ಮಾಡಿಸಲು ಏರ್ಪಾಡು ಮಾಡಿರುವುದೂ ಅವಳಿಗೆ ಗೊತ್ತಾಗಿದ್ದಿತು. ಕೋಪಿಷ್ಠನಾದ ಗುಳ್ಳನು ಯಾವುದೋ ಅವಿವೇಕಕ್ಕಾಗಿಯೇ ಹೀಗೆ ಮಚ್ಚನ್ನು ಮಸೆಯುತ್ತಿರುವನೆಂಬುದು ಅವಳಿಗೆ ಸರಾಗವಾಗಿ ಹೊಳೆಯಿತು. ಗುಳ್ಳನು ಆಗ ತಾನೇ ಪಡಖಾನೆಯಿಂದ ಹೆಂಡವನ್ನು ಭರ್ತಿಯಾಗಿ ಹೊಡೆದು ಕಣ್ಣುಗುಡ್ಡೆಗಳನ್ನು ಬುಗರಿಯಾಡಿಸುತ್ತಾ ಮನೆಗೆ ಬಂದನು. ಬಂದವನೇ ಮಚ್ಚನ್ನು ಕೈಲಿ ಹಿಡಿದುಕೊಂಡು ಅದರ ಅಲಗಿನ ಮೇಲೆ ಬೆರಳನ್ನಲ್ಲಾಡಿಸಿ ಅದರ ಹರಿತವನ್ನು ನೋಡಿದನು. ಇನ್ನು ಅವನ ಹೆಂಡತಿಗೆ ತಡೆಯುವುದಾಗಲಿಲ್ಲ. ಅವಳು "ಏನು ಮಾಡೋಕೆ ಹಿಂಗೆ ಮಚ್ಚನ್ನು ಮಸೀತೀರಿ?" ಎಂಬುದಾಗಿ ಕೇಳಿದಳು. ಗುಳ್ಳನಿಗೆ ಬುಂಡೆಯ ಅಮಲು ಏರಿತ್ತು. ಕೆಲಸ ನಡೆಯುವವರೆಗೆ ಯಾರಿಗೂ ಹೇಳಕೂಡದೆಂದುಕೊಂಡಿದ್ದ ಗುಳ್ಳನು "ಅಯ್ಯನ ಬುಂಡೆ ಹಾರಿಸತೀನಿ" ಎಂದು ಬಗುಳಿದನು. ಅವನ ಹೆಂಡತಿಯು "ವೈನಾಯ್ತು. ಹೇಳಿದೋರ ಮಾತ ಕೇಳಿಕೊಂಡು ಹುಚ್ಚರಂಗೆ ಆಡಬೇಡಿ. ಕೇಳಿದೋರು ಅದು ನಿಜ ಅಂದ್ಕೊಂಡಾರು" ಎಂದಳು. ಗುಳ್ಳನು "ನಿಜವಾಗೂ ಅಯ್ಯನ್ನ ತಕೋತೀನಿ. ನಾಳೆ ಈಟುಹೊತ್ತಿಗೆ ಅಯ್ಯ ಮಸಾಣದ ಹೆಣ. ಮಣ್ಣಾಯ್ತಾನೆ. ಇನ್ನು ಅವನ್ನ ಉಳಿಸೊ ಶಿಖಾಮಣಿ ಯಾರು ಬರ್ತಾರೋ ಬರ್ಲಿ ನೋಡ್ತೀನಿ" ಎಂದನು. ಹೆಂಡತಿಯು "ಅಯ್ಯನ್ನ ಬಡದ್ರೆ ನಿಮ್ಮ ಸುಮ್ಮನೆ ಬಿಡ್ತಾರಾ. ಫಾಸಿ ಹಾಕ್ತಾರೆ. ಹೆಂಡದ ಅಮಲು ಏರಿ..." ಗುಳ್ಳನು ಅವಳನ್ನು ಮುಂದೆ ಮಾತನಾಡಗೊಡದೆ "ಏ ಸುಮ್ನೆ ಕೂತಿರು. ನಿನಗೇನು ತಿಳೀತದೆ. ಫಾಸಿಯಂತೆ ಫಾಸಿ. ನಾನು ಅಯ್ಯನ್ಗೆ ಫಾಸಿ ಹಾಕೊಕಿಲ್ಲ, ಕತ್ತು ಕುಯ್ತೀನಿ"

ಎಂದನು. ಕೊನೆಯದಾಗಿ ನೋಡೋಣವೆಂದು ಗುಳ್ಳನ ಹೆಂಡತಿಯು "ಅಯ್ಯನ ತಾವ ಬಂದೂಕ ಅಯ್ತೆ" ಎಂದಳು. ಗುಳ್ಳನು "ಅಯ್ತೆ ಅಯ್ತೆ, ಆ ಬಂದೂಕ ಮುಟ್ಟೋಹೊತ್ಗೆ ಅಯ್ಯ ಕಾಪಿ ತಕೋತಾನೆ"[2] ಎಂದು ಹೇಳಿ, ಮಚ್ಚನ್ನು ಜೋಪಾನವಾಗಿ ಹೆಂಡತಿಗೆ ಸಿಕ್ಕದಂತೆ ಸೂರಿಗೆ ಎತ್ತರವಾಗಿ ಸಿಕ್ಕಿಸಿ ಮನೆಬಿಟ್ಟು ಹೊರಕ್ಕೆ ಹೋದನು.

ಗುಳ್ಳನ ಹೆಂಡತಿಗೆ ಮೈಯಲ್ಲಿ ನಡುಕವುಂಟಾಯಿತು. ಕೈಕಾಲು ಬೆವರಿದುವು. ಆ ರಾತ್ರಿಯೆಲ್ಲಾ ಅವಳಿಗೆ ಭಯದ ಹೊರತು ಮತ್ತೇನೂ ತೋರಲಿಲ್ಲ. ಅವಳು ಊಟ ಮಾಡದೆ ಯೋಚಿಸುತ್ತಾ ಮಲಗಿಕೊಂಡಳು. ಬಹಳ ಹೊತ್ತು ಕೆಟ್ಟ ಕನಸುಗಳನ್ನು ಕಂಡನಂತರ ಅವಳಿಗೆ ನಿದ್ರೆ ಹತ್ತಿತು. ಅರ್ಧರಾತ್ರಿ ಕಳೆದ ಮೇಲೆ ಗುಳ್ಳನೂ ಮನೆಗೆ ಬಂದು ಊಟ ಮಾಡದೆ ಮಲಗಿಕೊಂಡನು. ಮರುದಿನ ಬೆಳಿಗ್ಗೆ ಗುಳ್ಳನ ಹೆಂಡತಿಯು ನೆಟ್ಟಗೆ ಅಯ್ಯುವಿನ ಮನೆಗೆ ಹೋದಳು. ಅಯ್ಯುವು ಬಾಗಿಲು ಜಗಲಿಯ ಮೇಲೆ ಕುಳಿತುಕೊಂಡು ಯಾವುದೋ ಕಾಗದವನ್ನು ನೋಡುತ್ತಿದ್ದನು. ಗುಳ್ಳನ ಹೆಂಡತಿಯು ತನ್ನ ಮನೆಗೆ ಬರುತ್ತಿರುವಳೆಂಬುದು ಅವಳು ದೂರದಲ್ಲಿರುವಾಗಲೇ ಅಯ್ಯುವಿಗೆ ತಿಳಿಯಿತು. "ಇವಳು ಇಲ್ಲಿ ಯಾಕೆ ಬರುತ್ತಿರಬಹುದು? ಗುಳ್ಳನೇನಾದರೂ ಇವಳ ಕೈಲಿ ಹೇಳಿ ಕಳುಹಿಸಿದ್ದಾನೆಯೇ, ಅಥವಾ ಮನೆಯ ವಿಚಾರ, ಸಿವಿಲ್ ಹರಾಜು ಸಮಾಚಾರ ಕೇಳಿ ಬಂದಿರಬಹುದೇ? ಮನೆ ಹರಾಜು ಮಾಡಿಸಬೇಡಿ ಅಂದರೆ ನಾನು ಏನು ಮಾಡಬೇಕು?" ಎಂದು ಅವನು ಯೋಚಿಸತೊಡಗಿದನು. ಗುಳ್ಳನ ಹೆಂಡತಿಯು ಜಗಲಿಯ ಸಮೀಪಕ್ಕೆ ಬಂದು "ಸಾಮೀ, ಇವತ್ತು ನೀವು ಈ ಊರುಬಿಟ್ಟು ಹೊರಡಿ. ನಿಮ್ಮದಮ್ಮಯ್ಯ. ಕಾಲಿಗೆ ಬಿದ್ದೇನು. ಎಲ್ಲಾರು ಹೊಂಟುಹೋಗಿ" ಎಂದು ಒಂದೇ ಉಸಿರಿನಲ್ಲಿ ಹೇಳಿದಳು. ಗುಳ್ಳನನ್ನು ಕಾಲುಕಡೆಯಿಂದ ಕಡಿದುಹಾಕಿದರೂ ತಪ್ಪಿಲ್ಲವೆಂದು ನಂಬಿದ್ದ ಅಯ್ಯುವು ತನಗೇ ತಿಳಿಯದಂತೆ ಗುಳ್ಳನ ಹೆಂಡತಿ, ದನಕರು ಮುಂತಾದ ಗುಳ್ಳನಿಗೆ ಸಂಬಂಧಪಟ್ಟ ಎಲ್ಲಾ ವಸ್ತುಗಳನ್ನೂ ದ್ವೇಷಿಸುತ್ತಿದ್ದನು. ಗುಳ್ಳನು ತನ್ನ ಶತ್ರುವಾಗಿರುವಾಗ ಗುಳ್ಳನ ಹೆಂಡತಿಯೂ ತನ್ನ ಶತ್ರುವೇ ಎಂಬುದು ಅಯ್ಯುವಿನ ದೃಢವಾದ ನಂಬಿಕೆಯಾಗಿತ್ತು. ಅವನು ಅವಳಿಗೆ "ಯಾಕೆ, ನನ್ನನ್ನು ಊರಬಿಟ್ಟು ದೂಡೋದಕ್ಕೆ ಗುಳ್ಳ ನಿನ್ನನ್ನ ಕಳಿಸಿದನೋ? ನನ್ನ ಊರುಬಿಟ್ಟು ಹೋಗು ಅನ್ನೋಕೆ ಗುಳ್ಳನೇನು ಇಲ್ಲಿಗೆ ಪಾಳೆಯಗಾರನೋ?" ಎಂದು ಗರ್ಜಿಸಿದನು. ಗುಳ್ಳನ ಹೆಂಡತಿಯು "ಇವತ್ತು

---

[2] ಸಾಯುತ್ತಾನೆ ಎನ್ನುವುದಕ್ಕೆ ಹೀಗೆ ಹೇಳುವುದು ನಮ್ಮ ಕಡೆ ಪದ್ಧತಿ.

ನನ್ನ ಮಾತ ಕೇಳಿ ಬುದ್ದಿ. ಮನೆಯೋರು ಕುಡಿದು ಏನೇನೋ ಹರಟ್ತ ಅವ್ರೆ, ಕುಡ್ದಾಗ ಹಂಗೆ ಆಡೋದು ಅವರ ಪದ್ಧತಿ. ಊರಲ್ಲಿ ಎಲ್ಲರನ್ನೂ ಕಡೀತೇನೆ ಅಂತಾರೆ. ನನ್ನೂ ಕಡೀತಾರಂತೆ. ಕೆಂಗನ್ನೂ ಕಡೀತಾರಂತೆ. ನಿಮ್ನೂ ಕಡೀತಾರಂತೆ. ಕುಡ್ದೋರ ಬುದ್ದಿ ಯಾವ ಕಾಲ್ಕೆ ಹೆಂಗೊ. ಇವತ್ತು ನೀವು ಅವ್ರ ಕಣ್ಣೆ ಬೀಳಬೇಡಿ. ಈ ಹೆಂಡದ ಮತ್ತು ಇಳಿದ ಮೇಲೆ ಅವ್ರೆ ತೆಪ್ಪಗಾಗ್ತಾರೆ" ಎಂದಳು. ಗುಳ್ಳನು ಯಾವುದಕ್ಕೂ ಹೇಸುವುದಿಲ್ಲವೆಂದು ನಂಬಿದ್ದ ಅಯ್ಯುವು ಕೋಪದಿಂದ "ಹೊ ಹೊ, ಖೂನಿ ಬೇರೆ ಮಾಡ್ತಾನೊ? ಕಳ್ಳತನ ಆಯ್ತು, ಅವತ್ತು ತಲೆ ಒಡೆದು ಬಚಾವಾದ, ಇವತ್ತೂ ಬಚಾವಾಗ್ತೇನೆ ಖೂನಿ ಮಾಡಿ ಅಂತ ತಿಳಕೊಂಡಿರಬಹುದು. ಆಗಲಿ ಅವನ ಬುಂಡೆ ಕಾಯಿಸ್ತೀನಿ. ನನ್ನ ಹತ್ತಿರ ಬಂದೂಕವಿರೋದನ್ನ ಅವ ಮರೆತಂಗೆ ಕಾಣ್ತದೆ. ಇವತ್ತು ಖಂಡಿತ ಅವನ್ನ ಗುಂಡಿನಲ್ಲಿ ಹೊಡೆದುಹಾಕ್ತೇನೆ" ಎಂದನು. ಗುಳ್ಳನ ಹೆಂಡತಿಗೆ ಅಯ್ಯುವಿನ ಕೋಪವನ್ನು ನೋಡಿದಾಗ, ಗುಳ್ಳನ ಕೋಪವನ್ನು ನೋಡಿದಾಗ ಆದಷ್ಟೇ ಭಯವಾಯಿತು. ಅಯ್ಯುವೂ ಗುಳ್ಳನಷ್ಟೇ ರಕ್ಕಸನಾಗಿ ತೋರಿದನು. ಇಬ್ಬರೂ ಠಕ್ಕರಾದ ಪಂಜಿನ ಕಳ್ಳರಂತೆ ತೋರುತ್ತಿದ್ದರು. ಅಯ್ಯು ಹೆಂಡವನ್ನು ಕುಡಿಯುವುದಿಲ್ಲವೆಂದು ಗುಳ್ಳನ ಹೆಂಡತಿಗೆ ಖಂಡಿತವಾಗಿ ಗೊತ್ತಿಲ್ಲದೆ ಇದ್ದಿದ್ದರೆ ಅವನ ಕಣ್ಣುಗಳನ್ನು ನೋಡಿ, ಅವನೂ ಕುಡಿಯುತ್ತಾನೆಂದು ಅವಳಿಗೆ ಭಾಸವಾಗುತ್ತಿದ್ದಿತು. ಮನೆಯಿಂದ ಹೊರಡುವುದಕ್ಕೆ ಮುಂಚೆ ಅಯ್ಯುವನ್ನು ಊರುಬಿಟ್ಟು ಹೊರಡಿಸುವುದು ಅವಳಿಗೆ ಬಹು ಸುಲಭವಾಗಿ ತೋರಿದ್ದಿತು. ಈಗ ಅದಕ್ಕಿಂತ ಹೆಚ್ಚು ಕಷ್ಟವಾಗಿ ಮತ್ತಾವ ಕೆಲಸವೂ ತೋರಲಿಲ್ಲ. ಅಯ್ಯುವೂ ಗುಳ್ಳನೂ ಸುಂದೋಪಸುಂದರಂತೆ ಇದ್ದರು. ಒಬ್ಬನ ಹತ್ತಿರ ಮಚ್ಚು ಒಬ್ಬನ ಹತ್ತಿರ ಬಂದೂಕು. ಇಬ್ಬರಲ್ಲಿ ಒಬ್ಬನೂ ಇವಳ ಮಾತನ್ನು ಕೇಳುವಂತೆ ಇರಲಿಲ್ಲ. ಅಯ್ಯುವಿಗೂ ಗುಳ್ಳನಿಗೂ ವ್ಯಾಜ್ಯ ಪ್ರಾರಂಭವಾದಂದಿನಿಂದ ಅವಳ ಮನಸ್ಸಿಗೆ ಬಹಳ ಬೇಜಾರಾಗಿದ್ದಿತು. ಗುಳ್ಳನಲ್ಲದಿದ್ದರೆ ಅಯ್ಯುವಾದರೂ ತನ್ನ ಮಾತನ್ನು ಕೇಳಿ ಅಪ್ರಕೃತವಾದ ಜೋರನ್ನು ಬಿಟ್ಟು ರಕ್ತಪಾತವನ್ನು ನಿಲ್ಲಿಸುವುದಕ್ಕಾಗಿಯಾದರೂ ಊರುಬಿಟ್ಟು ಹೋದಾನೆಂದು ಅವಳು ತಿಳಿದಿದ್ದಳು. ಆದರೆ ದ್ವೇಷದಿಂದ ಅಂಧರಾಗಿದ್ದ ಆ ಕಿರಾತರಲ್ಲಿ ಒಬ್ಬನೂ ಮನುಷ್ಯ ಪ್ರಾಣಿಯಾಗಿರಲಿಲ್ಲ. ಇಬ್ಬರೂ ಕೊಲೆಗಡುಕರಾಗಿದ್ದರು. ಈ ಹೊಡೆದಾಟದಲ್ಲಿ ಬಂದೂಕದ ಏಟಿನಿಂದ ಗುಳ್ಳನು ಮೊದಲು ನಾಯಿಯಂತೆ ಸಾಯುವುದು ಖಂಡಿತವೆಂದು ಅವಳಿಗೆ ನಂಬಿಕೆಯಾಯಿತು. ಒಂದು ತಿಂಗಳೊಳಗೆ ಮೈ ಅರಂಗುವಂತಿದ್ದ ಪೂರ್ಣ ಬಿಮ್ಮನಿಸಿಯಾದ ಅವಳು ಬೇಸರಿಕೆಯಿಂದ ಊರಮುಂದೆ ಪೂರ್ಣ ಪ್ರವಾಹದಲ್ಲಿ ಹರಿಯುತ್ತಿದ್ದ ನದಿಗೆ ಬಿದ್ದುಬಿಟ್ಟಳು.

ಒಂದು ನಿಮಿಷದಲ್ಲಿ ಹೊ ಹೊ ಎಂದು ಗದ್ದಲವಾಯಿತು. ಊರಿಗೆ ಊರೇ ಹೊಳೆಯ ತೀರಕ್ಕೆ ಮಗುಚಿಕೊಂಡಿತು. ನದಿಯ ಪ್ರವಾಹ ಬಹುವೇಗದಲ್ಲಿದ್ದಿತು. ಆ ಪ್ರವಾಹದಲ್ಲಿ ನದಿಯಲ್ಲಿ ಈಜಿಬಿದ್ದು ತೇಲಿಹೋಗುತ್ತಿರುವವರನ್ನು ಹಿಡಿಯುವವನು ಒಳ್ಳೇ ಎದೆಗಾರನಾಗಿರಬೇಕಾಗಿದ್ದಿತು. ಜಾಲಹಳ್ಳಿಯ ನೂರು ಒಕ್ಕಲುಗಳಲ್ಲಿ ಅಂತಹ ಎದೆಗಾರನು ಯಾರೂ ಇರಲಿಲ್ಲ. ನದಿಯ ತೀರದಲ್ಲಿ ಇರುವೆ ಸಾಲಿಟ್ಟಂತೆ ಜನ ಜಮಾಯಿಸಿತು. ಒಂದು ಸಲ ಗುಳ್ಳನ ಹೆಂಡತಿ ಒಂದು ಕಡೆ ನೀರಿನಿಂದ ಮೇಲಕ್ಕೆ ತಲೆ ಎತ್ತಿದುದು ಕೆಲವರಿಗೆ ಕಂಡಿತು. ಮರುಕ್ಷಣದೊಳಗೆ ಇನ್ನೂ ಅರ್ಧ ಫರ್ಲಾಂಗ್ ಮುಂದೆ ಎರಡನೆಯ ಸಲ ಅವಳ ತಲೆಯು ಮೇಲೆದ್ದಿತು. ನೀರಿನ ವೇಗದ ಜತೆಯಲ್ಲಿ ದಡದಲ್ಲಿದ್ದ ಜನವೂ ಮುಂದುಮುಂದಕ್ಕೆ ಓಡುತ್ತಿದ್ದಿತು. ತಲೆ ಅಲ್ಲಿ ಎದ್ದಿತು, ಇಲ್ಲಿ ಎದ್ದಿತು ಎಂಬುದಾಗಿ ಎಲ್ಲಿಂದ ಎಲ್ಲಿಯವರೆಗೆ ನೋಡಿದರೂ ಜನರ ಗದ್ದಲವೇ ಗದ್ದಲವಾಯಿತು. ಆದರೆ ನೀರಿಗೆ ಇಳಿಯಲು ಯಾರಿಗೂ ಧೈರ್ಯವಿರಲಿಲ್ಲ. ಅಯ್ಯು ಒಬ್ಬನು ಮಾತ್ರ ಆ ನದಿಯನ್ನು ಪ್ರವಾಹದಲ್ಲಿ ಈಜಿದ್ದನು. ಗುಳ್ಳನಂತೂ ನೀರನ್ನು ಕಂಡರೇ ಹೆದರುತ್ತಿದ್ದನು. ನದಿಯ ತೀರದಲ್ಲಿ ಎಲ್ಲೂ ಗುಳ್ಳನೂ ಕಾಣಲಿಲ್ಲ. "ಗುಳ್ಳನ ಹೆಂಡತಿ ತೇಲಿಯೇ ಹೋದಳು. ಇನ್ನು ಅವಳ ಆಸೆ ಯಾಕೆ? ಈ ನದಿ ನುಂಗಿದೋರ ಬಿಟ್ಟು ಕೊಟ್ಟದ್ದುಂಟೇ, ಮೂಳೆ ಕೂಡ ಸಿಕ್ಕೋಕಿಲ್ಲ" ಎಂದು ಜನರು ಆಡಿಕೊಳ್ಳುತ್ತಿದ್ದರು. ಆದರೂ ಅವರೆಲ್ಲರ ಲಕ್ಷ್ಯವೂ ಸ್ವಾಭಾವಿಕವಾಗಿ ಅಯ್ಯುವಿನ ಕಡೆಗೆ ಹೋಯಿತು. "ಅಯ್ನೋರು ಒಂದು ಪಕ್ಷ ನೀರಿಗೆ ಬಿದ್ದಿದ್ರೆ ಹಿಡಕೊಂಡು ಬರೋರು" ಎಂದು ಕೆಲವರು ಹೇಳಿಕೊಳ್ಳುತ್ತಿದ್ದರು. ಮತ್ತೆ ಕೆಲವರು "ಅಯ್ನೆ, ಗುಳ್ನ ಹೆಂಡ್ತಿ ಬದುಕಿಸೋಕೆ ಸತ್ತರೂ ಅಯ್ಯ ನೀರಿಗೆ ಇಳಿಯೋಕಿಲ್ಲ" ಎಂದರು. ಆ ವೇಳೆಗೆ ಅಯ್ಯುವೂ ನದಿಯ ತೀರಕ್ಕೆ ಬಂದನು. 'ಗುಳ್ಳನ ಹೆಂಡತಿ' ಎಂದು ಕಿವಿಗೆ ಬಿದ್ದೊಡನೆಯೇ ಅಯ್ಯುವು ಪಂಚೆಯನ್ನು ಮೇಲಕ್ಕೆ ಬಿಗಿದು ಕಟ್ಟಿ ಸುಳಿಸುಳಿಯಾಗಿಯೂ ನೊರೆನೊರೆಯಾಗಿಯೂ ಭೋರ್ಗರೆಯುತ್ತಿದ್ದ ಪ್ರವಾಹದಲ್ಲಿ ಮುಳುಗಿಹೋದನು.

ಜನರು ಅಯ್ಯುವಿನ ಆಸೆಯನ್ನು ಬಿಟ್ಟರು. ಕಣ್ಣುಮುಚ್ಚಿ ತೆಗೆಯುವುದರೊಳಗೆ ಅಯ್ಯುವು ಗುಳ್ಳನ ಹೆಂಡತಿ ಎರಡನೆಯ ಸಲ ತಲೆ ಎತ್ತಿ ಮುಳುಗಿದ್ದ ಸ್ಥಳಕ್ಕೆ ಬಂದನು. ಆ ವೇಳೆಗೆ ಇಪ್ಪತ್ತು ಗಜ ದೂರದಲ್ಲಿ ಅವಳು ಮತ್ತೆ ತಲೆ ಎತ್ತಿದಳು. ಆದರೆ ಈ ಸಲ ಅವಳ ನೆತ್ತಿಯ ಕೂದಲು ಮಾತ್ರ ಮೇಲಕ್ಕೆ ಕಂಡಿತು. ಅಯ್ಯುವು ವಾಯುವೇಗದಲ್ಲಿ ಮುಳುಗಿ ಆ ಸ್ಥಳಕ್ಕೆ ಬಂದನು. ಪ್ರವಾಹವು ಗುಳ್ಳನ ಹೆಂಡತಿಯನ್ನು ಮತ್ತಷ್ಟು ದೂರ ಸಾಗಿಸಿದ್ದಿತು. ಅಯ್ಯು ಹತ್ತಿರಕ್ಕೆ ಬಂದ

ಕೂಡಲೇ ಗುಳ್ಳನ ಹೆಂಡತಿಯು ಅವನನ್ನು ಹಿಡಿದುಕೊಂಡು ನೀರಿನಲ್ಲಿ ತನ್ನೊಂದಿಗೆ ಮುಳುಗಿಸಿಕೊಂಡಳು. ಅಯ್ಯುವು ಅವಳಷ್ಟು ನೀರು ಕುಡಿದು ಸೋತಿರಲಿಲ್ಲವಾದುದರಿಂದ ಒಂದು ಗಳಿಗೆ ಅವಳೊಂದಿಗೆ ನೀರಿನಲ್ಲೇ ಮುಳುಗಿದನು. ಅಷ್ಟು ಹೊತ್ತಿಗೆ ಗುಳ್ಳನ ಹೆಂಡತಿಗೆ ಪ್ರಜ್ಞೆ ತಪ್ಪಿತು. ಅನಂತರ ಅವಳನ್ನು ಎಳೆದುಕೊಂಡು ಬರುವುದು ಅಯ್ಯುವಿಗೆ ಕಷ್ಟವಾಗಲಿಲ್ಲ. ಅವನು ಬಿದ್ದ ಜಾಗದಿಂದ ಮೇಲಕ್ಕೆ ಹತ್ತಿದ ಜಾಗ ಸುಮಾರು ೩೦೦ ಗಜ ದೂರದಲ್ಲಿದ್ದಿತು. ಅಯ್ಯುವು ಗುಳ್ಳನ ಹೆಂಡತಿಯನ್ನು ಹಿಡಿದುಕೊಂಡು ಬರುತ್ತಿರುವುದನ್ನು ತಿಗಳರೂ ಒಕ್ಕಲಿಗರೂ ನೋಡಿದರು. ಆ ಗಳಿಗೆಯಲ್ಲಿ ತಾವು ಆಜನ್ಮವೈರಿಗಳೆಂಬುದು ಅವರ ದೃಷ್ಟಿಯಿಂದ ಮರೆಯಾಗಿ ಊರಿಗೆ ಊರೇ ಆನಂದದ ಕೇಕೆ ಹಾಕಿತು. ಅಯ್ಯುವಿನ ಮನೆಯಿಂದ ಕಂಬಳಿ ರಗ್ಗುಗಳನ್ನು ತರಿಸಿ ಗುಳ್ಳನ ಹೆಂಡತಿಗೆ ಶಾಖವಾಗಿ ಹೊದಿಸಿ ಸುಮಾರು ಒಂದು ಗಂಟೆ ಆರೈಕೆ ಮಾಡಿದ ನಂತರ ಅವಳಿಗೆ ಪ್ರಜ್ಞೆ ಬಂದಿತು. ಆ ವೇಳೆಗೆ ಗುಳ್ಳನು ಅಲ್ಲಿಗೆ ಬಂದನು. ಅವಳಿಗೆ ಪ್ರಜ್ಞೆ ಬಂದಕೂಡಲೇ ಅಯ್ಯುವು ಆನಂದದಿಂದ ಜನರ ಕಡೆ ನೋಡಲು ಮೊದಲು ಕತ್ತೆತ್ತಿದಾಗ ಎಲ್ಲರಿಗಿಂತ ಮುಂಚೆ ಅವನ ಕಣ್ಣಿಗೆ ಬಿದ್ದವನು ಗುಳ್ಳ. ಗುಳ್ಳನು ಹೆಂಡತಿಯನ್ನು ಮೆಲ್ಲನೆ ಮನೆಗೆ ಕರೆದುಕಂಡು ಹೋದನು.

ಒಂದು ವಾರ ಗುಳ್ಳ ಅಯ್ಯುವಿಗೆ ಮುಖವನ್ನೇ ತೋರಿಸಲಿಲ್ಲ. ಅವನಿಗೆ ಬಹಳ ಪಶ್ಚಾತ್ತಾಪವಾಗಿರಬೇಕೆಂದು ಅಯ್ಯು ಯೋಚಿಸುತ್ತಿದ್ದನು. “ಹಾಳು ವ್ಯಾಜ್ಯಕ್ಕೆ ಬೆಂಕಿ ಹಾಕಲಿ, ಸದ್ಯ ಆ ಮಹಾರಾಯ್ತಿ ಬದುಕಿಕೊಂಡಳಲ್ಲ. ಈ ವೈರ ಮಿತಿಯ ಮೇರೆಯನ್ನು ಮೀರಿತು. ನಮ್ಮ ಈ ವೈರಕ್ಕೆ ಆಹುತಿಯಾಗಿಯೇ ಗುಳ್ಳನ ಹೆಂಡತಿ ಪ್ರಾಣವನ್ನು ಕಳೆದುಕೊಳ್ಳುತ್ತಿದ್ದಳು. ಅವಳಿಗೆ ಇರುವಷ್ಟು ವಿವೇಕ ನಮಗೆ ಇಲ್ಲವಲ್ಲ. ನಾವು ಎರಡು ಕಾಲಿನ ದನಗಳು, ಇನ್ನು ಈ ಬಡಿದಾಟ ಸಾಕು. ಎಲ್ಲಾ ವೈರವನ್ನೂ ಕೊನೆಗಾಣಿಸಬೇಕು. ಎಲ್ಲಾ ಕೇಸುಗಳನ್ನೂ ಇಬ್ಬರೂ ವಾಪಸು ತೆಗೆದುಕೊಳ್ಳಬೇಕು. ಗುಳ್ಳನ ಹೆಂಡತಿಯನ್ನು ಬಲಿಕೊಡುವುದಕ್ಕೆ ಮುಂಚೆ ಸದ್ಯ ನಮಗೆ ಈಗ ಜ್ಞಾನೋದಯವಾಯಿತಲ್ಲಾ. ಅದೇ ನಮ್ಮ ಪುಣ್ಯ” ಎಂದು. ಅಯ್ಯುವಿನ ’ಭಾಮೈಕ’ನಾದ ಬುಂಡೆಕ್ಯಾತನು (ಇವನ ಹೆಸರು ಶಿಂಗ್ಲಾಚಾರಿ ಎಂದು. ಜಾಲಹಳ್ಳಿಯವರು ಅವನನ್ನು ಬುಂಡೆಕ್ಯಾತನೆಂದು ಕರೆಯುತ್ತಿದ್ದರು) ಅಯ್ಯುವಿಗೆ ನಿತ್ಯ “ನಿನಗೆ ರೈತರ ಮಂಕು ಚೆನ್ನಾಗಿ ಹಿಡಿಯಿತು. ನಿಮ್ಮ ತಂದೆ ’ಶೂದ್ರಃ ಸರ್ವಸ್ಯ ಘಾತುಕಃ” ಎಂದುಕೊಂಡು ಅವರನ್ನು ಹಿಡಿತದಲ್ಲಿ ಇಟ್ಟುಕೊಂಡು ಹತ್ತು ಸಾವಿರವಿದ್ದ ಆಸ್ತಿಯನ್ನು ಎರಡು ಲಕ್ಷಕ್ಕೆ ಏರಿಸಿದನು. ನೀನು ಒಂದು

ವ್ಯಾಜ್ಯವನ್ನೇ ಗೆಲ್ಲಲಾರದೆ ಹೋದೆ. ನಿಮ್ಮ ತಂದೆ ಇಂತಹ ನೂರು ವ್ಯಾಜ್ಯಗಳನ್ನು ನೀರು ಕುಡಿದಂತೆ ಜೈಸುತ್ತಿದ್ದರು. ಸಾಲದ್ದಕ್ಕೆ ಪ್ರಾಣ ಹೋಗೋದನ್ನೂ ಕಾಣದೆ ಪ್ರವಾಹ ಈಜಿ, ನಿನ್ನ ತಲೆ ಒಡೆಯೋಕೆ ಬಂದೋನ ಹೆಂಡ್ತೀನ ಬದುಕಿಸಿದೆ. ಬೆಂಕಿಗೆ ಬೀಳೋ ಚೇಳನ್ನು ಕೈಯಲ್ಲಿ ಹಿಡಿದರೆ ಅದು ಹಿಡಿದ ಕೈಯನ್ನೇ ಕುಟುಕುವಂತೆ ನೀನು ಅವನ ಹೆಂಡತಿಯನ್ನು ಬದುಕಿಸಿದರೂ ಗುಳ್ಳ ಬೇರೆ ನಿನ್ನ ತಲೆ ಒಡೆಯೋದನ್ನ ಬಿಡೋದಿಲ್ಲ. ಈಗಾಗಲೇ ಗುಳ್ಳ ಹೇಳುತ್ತಿದ್ದ 'ಅಯ್ಯನತಾವ ಕಾಜಗ ಏನೋ ಹಸಗೆಟ್ಟಯ್ತೆ. ಅದಕ್ಕೆ ಹಂಗೆ ರಾಜಿಗೂ ವ್ಯಾಜ್ಯ ಮುಗಿಸೋಕೂ ಹತವಾಡ್ತಾ ಅವ್ನೆ' ಅಂತ. ಈಗ ಮತ್ತೆ ರಾಜಿ ಮಾಡ್ಕೊ ಅಂತ ಹೇಳು. ಆ ಸಿಂಹದ ಹೊಟ್ಟೇಲಿ ಹುಟ್ಟಿದಕ್ಕೆ ಸಾರ್ಥಕವಾಯಿತು. ತಲೆ ಒಡೆಯೋಕೆ ಎತ್ತಿದ ಕೈನ ಸಲಾಮು ಹಾಕೋಕೆ ಬಂದದ್ದು ಅಂತ ಹೇಳೋನು ನೀನು ಗುಳ್ಳನಿಗೆ ದೇವರೇ ಒದಗಿಸಿದ್ದ ಗಂಡಾಂತರ. ಒಂಭತ್ತು ತಿಂಗಳು ಬಿಮ್ಮನಸಿ ಸತ್ತಿದ್ರೆ ಗುಳ್ಳ ಈ ಊರ ಬಿಟ್ಟೇ ಹೋಯ್ತ ಇದ್ದ. ನಿನ್ನ ಮಗ್ಗಲ ಮುಳ್ಳು ನಾಶವಾಗೋದು" ಎಂದು ಬೋಧಿಸುತ್ತಿದ್ದನು. ಅಯ್ಯುವು "ನಿನಗೆ ತಿಳಿಯದು. ರೈತರೊಂದಿಗೆ ಹೊಡೆದಾಟ ಸಾಕಾಗಿದೆ. ಅವರೆಲ್ಲಾ ಠಕ್ಕರೇ ಎಂದು ನೀನು ಹೇಳುವುದನ್ನು ನಾನು ನಂಬುವುದಿಲ್ಲ. ಮನುಷ್ಯ ಸ್ವಭಾವದಲ್ಲಿ ಒಳ್ಳೆಯವನು ಕೆಲವು ಕಾರಣಗಳಿಂದ ಕಠಿಣನೂ ಕ್ರೂರನೂ ಆದರೂ ಸಮಯ ಬಂದಾಗ ಅವನ ಒಳ್ಳೆಯ ಸ್ವಭಾವವೇ ಪ್ರಕಾಶವಾಗುತ್ತದೆ. ಗುಳ್ಳನ ಹೆಂಡತಿ ನೀರಿಗೆ ಬೀಳುವುದಕ್ಕೆ ಮುಂಚೆ ಯಾರಾದರೂ 'ಅವಳು ಸಾಯ್ತಾ ಇದಾಳೆ' ಎಂದಿದ್ದರೆ 'ಸತ್ತರೆ ಸಾಯಲಿ' ಎನ್ನುತ್ತಿದ್ದೆ. ಆದರೆ ಅವಳು ನೀರಿಗೆ ಬಿದ್ದಾಗ ಅವಳನ್ನು ಬದುಕಿಸಬೇಕೆಂಬುದರ ಹೊರತು ಬೇರೆ ಯೋಚನೆ ನನಗೆ ತೋರಲಿಲ್ಲ. ಎಲ್ಲರಿಗೂ ಹಾಗೆಯೇ" ಎಂದನು. ಬುಂಡೆಕ್ಯಾತನು "ಗುಳ್ಳ ನಿನ್ನ ತಲೆ ಕಡಿಯುವುದಕ್ಕೆ ಬಂದಿದ್ದ. ಅವನೇನು, ಅವನ ಹೆಂಡತಿಯೇನು ಸಾಯಲಿ ಎಂಬುದಾಗಿ ನೀನು ಸುಮ್ಮನೆ ಇರಬೇಕಾಗಿತ್ತು. ಮುಂದೆ ಇದು ನಿನ್ನ ಅನುಭವಕ್ಕೇ ಬರುತ್ತದೆ" ಎಂದು ಹೇಳಿ ಸುಮ್ಮನಾದನು.

ಗುಳ್ಳನಿಗೆ ಏನಾಗಿದ್ದರೂ ಖಂಡಿತವಾಗಿಯೂ ಪಶ್ಚಾತ್ತಾಪ ಮಾತ್ರ ಉಂಟಾಗಿರಲಿಲ್ಲ. ಅವನಿಗೆ ಮೊದಲು ನಾಚಿಕೆಯೂ ಅನಂತರ ಮೀತಿ ಮೀರಿದ ಕೋಪವೂ ಉಂಟಾಯಿತು. ಅಯ್ಯು ತನ್ನ ಹೆಂಡತಿಯನ್ನು ನದಿಯಿಂದ ಹಿಡಿದು ಹಾಕಿದ್ದುದರಿಂದ ಊರವರ ಎದುರಿಗೆ ತನ್ನ ಯೋಗ್ಯತೆ ಬಹಳ ಮಟ್ಟಿಗೆ ಕಡಿಮೆಯಾಯಿತೆಂದು ಅವನು ಭಾವಿಸಿದನು. ತಾನು ಆವತ್ತು ಅಯ್ಯುವನ್ನು ತೀರಿಸಿ ತನ್ನ ವೈರಕ್ಕೆ ಕಳಸವಿಡಬೇಕೆಂದು ಮಾಡಿದ್ದಾಗ ಹೆಂಡತಿಯು ಅವಿವೇಕದಿಂದ ತನ್ನ ಉದ್ದೇಶ ಸಾಧಿಸಲಿಲ್ಲವಲ್ಲಾ ಎಂದು ಅವನಿಗೆ ಹೆಂಡತಿಯ ಮೇಲೂ ಕೋಪವುಂಟಾಯಿತು.

ಅವಳು ನೀರಿಗೆ ಬಿದ್ದರೂ ಅವಳನ್ನು ರಕ್ಷಿಸುವ ತ್ರಾಣ ತನ್ನಲ್ಲಿ ಇಲ್ಲವಾಯಿತಲ್ಲಾ ಎಂದುದರಿಂದ ತನ್ನಲ್ಲೇ ಅವನಿಗೆ ತಿರಸ್ಕಾರವುಂಟಾಯಿತು. ಅಯ್ಯು ಹೊರತು ಮತ್ತಾರು ಹೆಂಡತಿಯನ್ನು ಹೊಳೆಯಿಂದ ಹಿಡಿದು ಹಾಕಿದ್ದರೂ ಅವನಿಗೆ ದುಃಖವಿರಲಿಲ್ಲ. “ಅಯ್ಯ ಇದರಲ್ಲೂ ನನ್ನನ್ನು ಕೊಂದ” ಎಂದು ಅವನು ಕೋಪಗೊಂಡನು. “ಗುಳ್ಳ ಅಯ್ಯನ್ನ ಕಡಿಯೋಕೆ ಹೋಗಿದ್ದ. ಅದಕ್ಕೆ ಅವನ ಹೆಂಡ್ತಿ ಹೊಳೆ ಬಿದ್ದಳು” ಎಂಬುದು ಹಳ್ಳಿಯಲ್ಲೂ ಸುತ್ತಮುತ್ತಲೂ ಪ್ರಚಾರವಾಗಿದ್ದುದರಿಂದ ಅವನು ಮನೆಯಿಂದ ಹೊರಕ್ಕೆ ಬರುವುದಕ್ಕೆ ನಾಚಿ ಮನೆಯಲ್ಲಿಯೇ ಕೂತಿದ್ದನು.

ಗುಳ್ಳನು ಒಂದು ವಾರವಾದರೂ ಕಣ್ಣಿಗೆ ಬೀಳದುದರಿಂದ ಅಯ್ಯು ಅವನಿಗೆ ಹೇಳಿಕಳುಹಿಸಿದನು. “ಎಲ್ಲಾ ವ್ಯಾಜ್ಯವೂ ಹರಿದುಹೋಗಲಿ. ಇಬ್ಬರೂ ರಾಜಿಯಿಂದ ಇದ್ದುಬಿಡೋಣ” ಎಂಬುದೇ ಅವನ ಮಾತಾಗಿತ್ತು. ಆದರೆ ಗುಳ್ಳನ ಮನಸ್ಸು ಪರಿಪಕ್ವವಾಗಿರಲಿಲ್ಲ. “ಮೊಖದ್ದಮೆಯಲ್ಲಿ ಸಾಕ್ಷಿ ಅಯ್ಯನಿಗೆ ವಿರೋಧವಾಗಿದೆ. ಇನ್ನೇನು ನ್ಯಾಯಾಧೀಶರು ತೀರ್ಮಾನ ಕೊಡುತ್ತಾರೆ. ಇದಕ್ಕಾಗಿ ನನಗೆ ನಾಲ್ಕು ಸಾವಿರ ಖರ್ಚಾಗಿದೆ. ’ಎಣ್ಣೆ ಬಂದಾಗ ಕಣ್ಣುಮುಚ್ಚಿಕೊಂಡರು’ ಅಂತ ಈಗ ನಾನು ಮೊಖದ್ದಮೆ ಬಿಟ್ಟರೆ ಅಯ್ಯನ ನಾಲಿಗೆ ಮೊಳುದ್ದವಾಗುತ್ತೆ. ಈ ಒಂದು ಹಟ ಸಾಧಿಸಿಯೇ ತೀರಬೇಕು. ಅಯ್ಯ ಬೀಳೋಕೆ ಸಿಡಿಗಲ್ಲು ಒಡ್ಡಿದ್ದೇನೆ. ಹಗ್ಗ ಎಳೆಯೋದೊಂದೆ ಬಾಕಿ. ಎಳೆದ ಕೂಡಲೇ ಅಯ್ಯ ಕಲ್ಲಿನ ಕೆಳಗೆ ಸಿಕ್ಕಿ ಹೆಗ್ಗಣದಂತೆ ಅರೆದು ಹೋಗುತ್ತಾನೆ”, ಎಂದು ಗುಳ್ಳನು ಯೋಚಿಸುತ್ತಿದ್ದನು. “ಅಯ್ಯನೊಂದಿಗೆ ರಾಜಿಯಾಗಿಬಿಡಿ, ಕೋರ್ಟು ವ್ಯಾಜ್ಯ ಸುರುವಾದದ್ದೆ ಆದ್ದು ನಮ್ಮ ಮನೆ ಹಾಳಾಯ್ತು. ಕೇಳಿಲ್ಲವೆ ’ಕೋರ್ಟಿನಲ್ಲಿ ಗೆದ್ದೋನು ಸೋತ. ಸೋತೋನು ಸತ್ತ’ ಅನ್ನೋದ” ಎಂಬುದಾಗಿ ಹೆಂಡತಿ ಹೇಳುತ್ತಿದ್ದ ಮಾತು ಗುಳ್ಳನಿಗೆ ಗಣನೆಗೇ ಬರಲಿಲ್ಲ. ಒಂದು ಸಲ ಅವನು ಕೋಪದಿಂದ “ಹೆಂಗಸಾದ ನಿನಗೆ ಇದ ಕಟ್ಕೊಂಡು ಏನು? ನೀನು ಕಂಡಿರೋದು ಹೊಳೆ ಬೀಳೋದು ತಾನೆ” ಎಂದು ಗದರಿಸಿದನು.

ವ್ಯಾಜ್ಯಗಳನ್ನೆಲ್ಲಾ ರಾಜಿಮಾಡಿಕೊಳ್ಳಬೇಕೆಂದು ಹವಣಿಸುತ್ತಿದ್ದ ಅಯ್ಯುವು ಅವುಗಳ ಕಡೆಗೆ ಲಕ್ಷ್ಯವನ್ನೇ ಕೊಟ್ಟಿರಲಿಲ್ಲ. ಬುಂಡೆಕ್ಯಾತನು ಪ್ರತಿ ದಿನವೂ “ನೀನು ಹೀಗೆ ಸುಮ್ಮನೆ ಕೂತಿದ್ದರೆ ಗುಳ್ಳ ನಿನ್ನ ಕೈಗೆ ಬೇಡಿ ತೊಡಿಸುತ್ತಾನೆ. ಇನ್ನು ನಾಲ್ಕು ದಿನಕ್ಕೆ ಎರಡು ಕಡೆಯೂ ಆರ್ಗುಮೆಂಟ್ ನಡೆಯಬೇಕು. ಮದರಾಸಿನ ಆ ದೊಡ್ಡ ಲಾಯರಿಗಾದರೂ ಬರಿ. ಊರವರೆಲ್ಲಾ ಒಂದಾಗಿ ನಿನಗೆ

ವಿರೋಧವಾಗಿ ಸಾಕ್ಷಿ ಹೇಳಿರುವಾಗ ನೀನು ಬಚಾವಾಗೋದು ಕಷ್ಟ" ಎಂದು ಒತ್ತಾಯಪಡಿಸುತ್ತಿದ್ದನು. ಗುಳ್ಳನು ತನ್ನ ಹತ್ತಿರಕ್ಕೆ ಸುಳಿಯದುದರಿಂದ ಅಯ್ಯುವಿಗೆ ನಿಜವಾಗಿಯೂ ಮೊಖದ್ದಮೆಯ ಯೋಚನೆ ಹತ್ತಿಕೊಂಡಿತು. ಗುಳ್ಳನು ಬಾಕಿ ತಿಗಳರಂತೆ ಅಲ್ಲ. ಅವನೂ ಬಿಳಿಕಾಜಿಗದ ಮೇಲೆ ಕಪ್ಪು ಹಳ್ಳೋದನ್ನ ಕಲತವನೆ. ಸಾಲದುದಕ್ಕೆ ಫೂಟ್ ಲಾಯರಿ. ಈ ಅರ್ಥವಿದ್ಯೆಯಿಂದ ಅವನು ಹೆಚ್ಚಿದ್ದಾನೆ. ಇವನ ಸ್ವಭಾವ ಇಷ್ಟು ಬೇಗ ಬದಲಾಯಿಸುವಂತೆ ಇಲ್ಲ" ಎಂದುಕೊಂಡು ಅಯ್ಯುವು ಬುಂಡಕ್ಯಾತನನ್ನೇ ಮದರಾಸಿಗೆ ಕಳುಹಿಸಿ ದೊಡ್ಡ ಲಾಯರನ್ನೇ ಆರ್ಗುಮೆಂಟಿಗೆ ಗೊತ್ತು ಮಾಡಿದನು. ಗುಳ್ಳನಿಂದ ಹಣವನ್ನು ತಿಂದಿದ್ದ ಲಾಯರೂ ಸಾಕ್ಷಿಗಳೂ ಕೋರ್ಟಿನ ಎಲ್ಲಾ ಗುಮಾಸ್ತರೂ ಬೊಜ್ಜು ಬೆಳಸಿಕೊಂಡು ತಿರುಗುತ್ತಿದ್ದರು. ಗುಳ್ಳನು ಮಾತ್ರ ಹಳೆಯ ಬಟ್ಟೆಗಳನ್ನು ಹಾಕಿಕೊಂಡು ಕೋರ್ಟಿನ ಮುಂದಲ ಮರದ ಕೆಳಗೆ ಮುಖದಲ್ಲಿ ದ್ವೇಷದ ಹೊರತು ಮತ್ತಾವ ಭಾವವನ್ನೂ ತೋರಿಸದೆ ಕುಳಿತಿದ್ದನು. ಆ ದಿನ ಆರ್ಗುಮೆಂಟು ಆಯಿತು. ಎರಡು ಕಡೆಯ ಲಾಯರುಗಳೂ ಬಹಳ ಉಗ್ರವಾಗಿ ವಾದಿಸಿದರು. ಕೋರ್ಟಿನಲ್ಲಿ ಅನೇಕ ಗಾಡಿ ಲಾ ಪುಸ್ತಕಗಳು ಬಂದು ಬಿದ್ದಿದ್ದುವು. ಆರ್ಗುಮೆಂಟು ಮುಗಿದ ನಂತರ ಮದರಾಸಿನ ಲಾಯರು ಅಯ್ಯುವಿನ ಬಳಿಗೆ ಬಂದು "ಗುಳ್ಳನ ಸಾಕ್ಷಿಗಳು ಈ ಮೊಕದ್ದಮೆಯಲ್ಲಿ ನಿನಗೆ ವಿರೋಧವಾಗಿ ಹೇಳುವಷ್ಟು ಒಮ್ಮನಸ್ಸಿನಿಂದ ಸ್ವಲ್ಪವೂ ವ್ಯತ್ಯಾಸ ಬರದಂತೆ ಸಾಕ್ಷಿಗಳು ಹೇಳಿರುವುದನ್ನು ನಾನು ಯಾವ ವ್ಯಾಜ್ಯದಲ್ಲೂ ನೋಡಲಿಲ್ಲ. ಗ್ರಾಮಸ್ಥರೆಲ್ಲಾ ಹೀಗೆ ಒಟ್ಟಾದರೆ ಯಾರಿಗೆ ಬೇಕಾದರೂ ಸಜ ಹಾಕಿಸಬಹುದು. ಇವರೆಲ್ಲ ಪರಮ ದುಷ್ಟರು. ಊರಿಗೆ ಊರೇ ಹೀಗೆ ಘಾತುಕರಾದುದನ್ನು ನಾನು ಎಲ್ಲೂ ಕಂಡಿಲ್ಲ ಅವರನ್ನೆಲ್ಲಾ ನಿರ್ನಾಮ ಮಾಡದ ಹೊರತು ನಿನಗೆ ಶಾಂತಿಯುಂಟಾಗುವುದಿಲ್ಲ" ಎಂದು ಹೇಳಿದರು. ಅಯ್ಯುವು "ಈ ವಾಜ್ಯದ ಮೂಲ ಇವತ್ತಿನದಲ್ಲ. ನಮ್ಮ ತಂದೆ ಇವರನ್ನು ಸದೆ ಬಡಿಯಲು ಪ್ರಾರಂಭಿಸಿದ ದಿನ ಹುಟ್ಟಿದ್ದು ಇದು. ಅಂದು ಉಂಡದ್ದನ್ನು ಇಂದು ಕಕ್ಕಲೇಬೇಕಾಗಿದೆ" ಎಂದುಕೊಂಡು ಸುಮ್ಮನಾದನು. ಬುಂಡೆಕ್ಯಾತನು ಬಂದು ವಾದಿಸಿದಾಗಲೂ ಅಯ್ಯುವು "ಇದು ನಮ್ಮ ತಂದೆ ಅಂದು ನೆಟ್ಟ ಸಸಿಯ ಫಲ. ಇದರ ಬೇರನ್ನು ನಾನು ಕಿತ್ತು ಹಾಕದೆ ಇದ್ದರೆ ನನ್ನ ಮಕ್ಕಳೂ ಈ ಹೊಡೆದಾಟಕ್ಕೆ ಹಕ್ಕುದಾರರಾಗುತ್ತಾರೆ. ಇದನ್ನು ಕಿತ್ತು ಹಾಕುವುದು ನಮ್ಮ ತಂದೆಗೆ ಸುಲಭವಾಗಿದ್ದಿತು. ಅವರು ಮಾಡಲಿಲ್ಲ. ನನಗೆ ಸ್ವಲ್ಪ ಕಷ್ಟವಾಗುತ್ತದೆ. ನಾನೂ ಇದನ್ನು ಬಿಟ್ಟರೆ ನನ್ನ ಮಕ್ಕಳ ಕಾಲಕ್ಕೆ ರೈತರ ತಲೆಗಳೂ ಅವರ ತಲೆಗಳೂ ಉರುಳಬೇಕಾಗಬಹುದು. ನಾವು ದುಷ್ಟರಾದ್ದರಿಂದ ಅವರೂ ದುಷ್ಟರಾಗಿದ್ದಾರೆ. ನಾವು ಒಳ್ಳೆಯವರಾದರೆ ಅವರೂ

ಒಳ್ಳೆಯವರಾಗುವುದು ಖಂಡಿತ” ಎಂದು ಹೇಳಿದನು. ಆರ್ಗುಮೆಂಟೂ ಆಯಿತು. ಜಡ್ಜಮೆಂಟೂ ಆಯಿತು. ಒಬ್ಬರದೂ ತಪ್ಪಿಲ್ಲವೆಂದು ಮೊಖದ್ದಮೆಯು ವಜಾ ಆಯಿತು. ಗುಳ್ಳನ ಆಸ್ತಿ ಎಲ್ಲಾ ಹೋಗಿ, ಅವನು ಭಿಕಾರಿಯಾದನು. ಅಯ್ಯುವಿಗೆ ಗುಳ್ಳನಿಗೆ ತಗುಲಿದುದರ ಎರಡರಷ್ಟು ಖರ್ಚು ತಗುಲಿದರೂ ಅವನು ಹಣದ ಹುತ್ತವಾಗಿದ್ದುದರಿಂದ ಖರ್ಚು ಅವನ ಮೇಲೆ ಕೆಂದಲಿಲ್ಲ.

ಅಯ್ಯುವಿನಲ್ಲಿ ಮೊದಲು ಮೊದಲು “ಒಳ್ಳೆಯತನ” ತೋರಿದಾಗ ಜಾಲಹಳ್ಳಿಯ ರೈತರು ಅದನ್ನು ಗಮನಿಸಲೇ ಇಲ್ಲ. “ಬೂತಯ್ಯನೂ ತನ್ನ ಕೆಲಸವಾಗಬೇಕಾದರೆ ಹೀಗೆ ಇರುತ್ತಿದ್ದ” ಎಂದು ಅವರು ಅಯ್ಯುವನ್ನು ನಂಬಲೇ ಇಲ್ಲ. ಅವರು ಹೇಗೆ ನೋಡಿದರೂ ಅಯ್ಯುವಿನ ಈಚಿನ ನಡವಳಿಕೆಗಳು ಅಯ್ಯುವಿನ ಹಿಂದಲ ಸ್ವಭಾವಕ್ಕೆ ಹೊಂದಿಕೆಯಾಗುವಂತೆ ಇರಲಿಲ್ಲ. ಕೊನೆಗೆ ಅವರು “ಅಯ್ಯು ಇದೊಂದು ಸೋಗು ಹಾಕವ್ನೆ ಬಕ ಮೀನ ಹಿಡಿಯೋ ಹಂಗೆ” ಎಂದುಕೊಂಡು ಸುಮ್ಮನಾದರು. ಆದರೆ ಬೂತಯ್ಯನವರ ಹಿಂದಲ ಲೂಟಿಯಲ್ಲಿ ಸಹಾಯಕರಾಗಿದ್ದ ಶ್ಯಾನುಭೋಗ ಪಟೇಲರಿಗೂ ಜೋಯಿಸ ಪೂಜಾರಿಗಳಿಗೂ ಮುಸಲ್ಮಾನ ಲಾವುಗಾರರಿಗೂ ಅಮೀನ ಸಮನ್ ಪೇದೆಗಳಿಗೂ ಯಾವುದಕ್ಕೂ ಸಾಕ್ಷಿ ಹೇಳಲು ಸಿದ್ಧರಾಗಿದ್ದ ಸದ್ಗೃಹಸ್ಥರಿಗೂ ಅಯ್ಯುವಿನ ಈ ಸಪ್ಪೆತನದಿಂದ ತುಂಬ ರೇಗಿತು. ತಮ್ಮ ಆಸೆಯೇ ಹಾಳಾದಂತೆ ಅವರು ಕೂಗಾಡತೊಡಗಿದರು. “ಹೀಗೆ ಮಾಡಿದರೆ ಇವನು ಆಸ್ತಿಯನ್ನು ಮೂರು ದಿನಗಳಲ್ಲಿ ನೀಗುವುದು ಖಂಡಿತ. ಎಂಥಾ ಬದುಕು. ಎಂಥಾ ಆಸ್ತಿ. ಬೂತಯ್ಯನವರು ಮೂರು ವರ್ಷ ಮೂಗು ಕೆರೆದರೂ ಒಬ್ಬನಿಗೆ ಮೂರು ಕಾಸು ಕೊಟ್ಟವರಲ್ಲ. ಅಂಥ ಆಸ್ತಿ ಈಗ ನಾಯಿಪಾಲು ನೀರುಪಾಲು” ಎಂದು ಅವರು ಬೇಸರಿಕೆ ಪಟ್ಟರು. ಸರ್ಕಾರವು ಅಧಿಕಾರಿಗಳ ಮೂಲಕ ಕಾರ್ಯಕ್ರಮವನ್ನು ನಡೆಸುವಂತೆ ಬೂತಯ್ಯನವರು ತಮ್ಮ ಆಡಳಿತದ ಸಹಾಯಕ್ಕೆ ಮೇಲೆ ಹೇಳಿದವರನ್ನೆಲ್ಲಾ ನಿಯಮಿಸಿಕೊಂಡಿದ್ದರು. ಅವರು ಹೇಳುತ್ತಿದ್ದ ಮಾತುಗಳೆಲ್ಲಾ ಅಯ್ಯುವಿನ ಕಿವಿಗೆ ಬಿದ್ದುವು. “ಅಯ್ಯು ಮುಂದೆ ಏನ್ಮಾಡ್ತಾನೆ, ನೋಡೋಣ” ಎಂದು ರೈತರು ನಿರೀಕ್ಷಿಸುತ್ತಿದ್ದರು.

ಅಯ್ಯುವಿನಲ್ಲಿ ಅಷ್ಟೊಂದು ಪೂರ್ಣವಾದ ಬದಲಾವಣೆಯು ಯಾವಾಗ ಆಯಿತೋ ಅಯ್ಯುವಿಗೇ ತಿಳಿಯದು. ಗುಳ್ಳನ ವ್ಯಾಜ್ಯದಿಂದಲೇ ಅವನು ಕಣ್ಣುಬಿಟ್ಟನು. ತನಗೂ ರೈತರಿಗೂ ಇದ್ದ ಅಜಗಜನ್ಯಾಯವು ಆಗ ಅವನಿಗೆ ತಿಳಿಯಿತು. “ಗುಳ್ಳ ಒಂದು ವ್ಯಾಜ್ಯಕ್ಕೇ ಪಾಪರನಾದ. ನಾನು ಇಂತಹ ನೂರು ವ್ಯಾಜ್ಯಗಳನ್ನಾದರೂ ಸುಲಭವಾಗಿ ಕಾದಬಲ್ಲೆ. ರೈತ ಇಪ್ಪತ್ತು ನಾಲ್ಕು ಗಂಟೆ ದುಡಿದರೂ ಒಂದು ಒಳ್ಳೆಯ ಅಂಗಿಯನ್ನು ಹಾಕಿಕೊಂಡುದನ್ನು ಕಾಣೆ. ಒಂದು ದಿನ ಅವನು

ಕೆಲಸ ಮಾಡದಿದ್ದರೂ ಅವನ ಹೊಟ್ಟೆ ತುಂಬುವುದಿಲ್ಲ. ನಮ್ಮ ಮನೆಯಲ್ಲಿ ಮೂರು ತಲೆಗಳಿಂದಲೂ ದುಡಿದದ್ದನ್ನೇ ಕಾಣೆ. ಆದರೆ ಹಣ ಹುಳಿತುಹೋಗುತ್ತಿದೆ. ಇದು ನಮ್ಮ ಅಪ್ಪ ಹಾಕಿದ ಮೋಡಿ. ಇದಕ್ಕೆ ಪ್ರತಿಮೋಡಿ ಯಾವಾಗ ಬೀಳುತ್ತದೋ ಕಾಣೆ. ಬಿದ್ದಾಗ ಮಾತ್ರ ನಾವು ಉಳಿಯುವಂತೆ ಇಲ್ಲ."

ಹೊಸ ಪೂಜಾರಿ ನಾಯಿತುಳಿಸಿ ಕೊಯ್ದಂತೆ ಗುಳ್ಳನ ಮೊದಲನೆಯ ವ್ಯಾಜ್ಯದಲ್ಲೇ ಅವನ ಕೊಟ್ಟು ನೆಲಸಮವಾಯಿತು. ಚಿನ್ನ ಬಿತ್ತಿದರೆ ಚಿನ್ನ ಬೆಳೆಯುವಂತಿದ್ದ ಖರ್ಜೂರದ ಮಣ್ಣಿನ ಹೊಲಗದ್ದೆಗಳೆಲ್ಲಾ ಲಾಯರ ಫೀಜಿಗೂ ಸಾಕ್ಷಿಗಳ ಲಂಚ ಮತ್ತು ಖುಷಾಮತ್ತಿಗೂ ಹೋಯಿತು. ಉಳಿದ ಬೋರೆಯ ಮೇಲಿನ ತಮಟೆ ಅಗಲದ ಪಾಳುಹೊಲ ಕಂದಾಯದ ಬಾಕಿಗೆ ಹರಾಜಾಗಿ ಸರ್ಕಾರಕ್ಕೆ ಸೇರಿಕೊಂಡಿತು. ಕರು ಸತ್ತರೂ ಸಗಣೀ ನಾತ ತಪ್ಪಲಿಲ್ಲವೆಂಬಂತೆ ವ್ಯಾಜ್ಯ ಕೊನೆಗಂಡರೂ ಲಾಯರ ಫೀಜು ಪೂರ್ತಾ ಪಾವತಿಯಾಗಿರಲಿಲ್ಲ. ಹೇಗಾದರೂ ಮೊಖದ್ದಮೆ ನಡೆದರೆ ಸಾಕೆಂದು ಗುಳ್ಳನು ಕೊಟ್ಟು ಉಳಿದ ಫೀಜಿಗೆ ಲಾಯರಿಗೆ ಒಂದು 'ಟಾಂಪುಸರಿ' ಬರೆದು ಕೊಟ್ಟಿದ್ದನು. ಲಾಯರು 'ಟಾಂಪುಸರಿಯ' ಹಣಕ್ಕೆ ಸಿವಿಲ್ ಕೋರ್ಟಿನಲ್ಲಿ ದಾವಾ ಹಾಕಿದನು. ಗುಳ್ಳನು ಕೋರ್ಟಿನಿಂದ ಬಂದ ಸಮನ್ನಿಗೇ ಸಿಕ್ಕದೆ ತಪ್ಪಿಸಿಕೊಳ್ಳಹತ್ತಿದನು. ಆದರೆ ಬಗ್ಗಿಕೊಂಡು ಉತ್ತರೆ ಕಂದಾಯ ತಪ್ಪುವುದೇ? ವಾರಂಟು ಬಂದಿತು. ಗುಳ್ಳನು ಮೂರು-ನಾಲ್ಕು ಸಲ ವಾರಂಟನ್ನು ತಪ್ಪಿಸಿಕೊಂಡು ತಿರುಗಿದನು. ಕೊನೆಯ ಸಲ ವಾರಂಟು ಬಂದಾಗ ಅಮೀನನು ಮನೆಯ ಬಾಗಿಲಿನಲ್ಲಿ ಕುಳಿತಿದ್ದ ಗುಳ್ಳನನ್ನು ದಸ್ತಗಿರಿ ಮಾಡಿದನು.

ವಿಚಾರ ಊರವರಿಗೆಲ್ಲಾ ತಿಳಿದಂತೆ ಅಯ್ಯುವಿಗೆ ತಿಳಿಯಿತು. ಬುಂಡೆಕ್ಯಾತನು "ಅವನಿಗೆ ದೇವರೇ ಕೊಟ್ಟ. ಆರು ತಿಂಗಳು ಜೈಲು. ಮಣ್ಣು ಹೊತ್ತು ಬರಲಿ. ಹುಳಿ ಮುರಿಯುತ್ತೆ. ಊರಿನ ಶನಿ ತೊಲಗುತ್ತೆ" ಎಂದನು. ಅಯ್ಯುವು ನೋಡೋಣವೆಂದು ಗುಳ್ಳನ ಮನೆಯ ಹತ್ತಿರಕ್ಕೆ ಹೋದನು. ಜಾಲಹಳ್ಳಿಯಲ್ಲಿ ಅಯ್ಯು ಹೊರತು ಉಳಿದವರನ್ನು ಕಂಬಕ್ಕೆ ಕಟ್ಟಿ ಚೆಚ್ಚಿದ್ದರೂ ಒಂದು ಕಾಸೂ ಸಿಕ್ಕುತ್ತಿರಲಿಲ್ಲ. ಆದುದರಿಂದ ಗುಳ್ಳನನ್ನು ವಾರಂಟಿನಿಂದ ಬಿಡುಗಡೆ ಮಾಡಲು ಅಯ್ಯುವಿನ ಹೊರತು ಬೇರೆ ದಾರಿಯಿರಲಿಲ್ಲ. ಆದರೆ ಅಯ್ಯು ಗುಳ್ಳನನ್ನು ಬಿಡುಗಡೆ ಮಾಡಿಸುತ್ತಾನೆಂಬ ನಂಬಿಕೆ ಊರವರಿಗೆ ಖಂಡಿತ ಇರಲಿಲ್ಲ. ಅಯ್ಯುವನ್ನು ದೂರದಿಂದ ನೋಡಿದ ಗುಳ್ಳನು "ನಾನು ಜೈಲಿಗೆ ಹೋಗೋದ ನೋಡೋಕೆ ಅಯ್ಯು ಬರ್ತಾ ಅವನೆ. ಬರಲಿ, ಬರಲಿ. ಅಲ್ಲಿಂದ ವಾಪಸು ಬಂದ ಮೇಲೆ ಅಯ್ಯುವಿಗೆ ಹಬ್ಬ ಮಾಡ್ತೀನಿ" ಎಂಬುದಾಗಿ ಹಲ್ಲು ಕಡಿದನು. ಅಯ್ಯುವು ಬಂದು

ತಾನೇ ಗುಳ್ಳನ ಹಣವನ್ನು ಕೊಡುವುದಾಗಿ ಅಮೀನನಿಗೆ ಹೇಳಿದನು. ಮೊದಲು ಮೊದಲು ಗುಳ್ಳ ಏನು ಮಾಡಿದರೂ ಅಯ್ಯುವಿನ ಹಣದಿಂದ ಬಿಡುಗಡೆ ಹೊಂದಲು ಒಪ್ಪಲಿಲ್ಲ. ಕೊನೆಗೆ ಅಯ್ಯುವು "ನೀನು ನನ್ನ ಮನೆಯಲ್ಲಿ ಕೆಲಸ ಮಾಡಿ ಈ ಹಣವನ್ನು ತೀರಿಸುವಿಯಂತೆ" ಎಂದು ಹೇಳಿದ ಮೇಲೆ ಮಾತ್ರ ಗುಳ್ಳನು ಅಯ್ಯುವಿನಿಂದ ಹಣವನ್ನು ತೆಗೆದುಕೊಂಡನು.

ಗುಳ್ಳನಿಗೆ ಹಣವನ್ನು ಕೊಟ್ಟಾಗ ಅಯ್ಯುವು "ಇವ ಜೈಲಿಗೆ ಹೋಗೋದನ್ನ ತಪ್ಪಿಸಿದೆ. ನನ್ನ ಮನೆಯಲ್ಲಿ ಕೆಲಸ ಮಾಡಿ ಆ ಹಣ ತೀರಿಸುತ್ತಾನಂತೆ. ಏನೋ ಹಣ ತೆಗೆದುಕೊಳ್ಳಲು ಅಂತ ಹೇಳಿದೆ. ಕೆಲಸ ಮಾಡಿದಷ್ಟು ದಿವಸ ಮಾಡಲಿ. ಅಷ್ಟನ್ನೇ ಈ ಹಣಕ್ಕೆ ವಜಾ ಹಾಕಿದರೆ ಆಯಿತು. ಆಮೇಲೆ ಇವನಿಗೆ ಕೆಲಸ ಮಾಡಲು ಇಷ್ಟವಿದ್ದರೆ ಏನಾದರೂ ವರ್ಷಕ್ಕೆ ಇಷ್ಟು ಅಂತ ಗೊತ್ತುಮಾಡಿದರೆ ಅವನ ಜೀವನವೂ ನಡೆಯುತ್ತೆ. ನಮ್ಮ ಕೆಲಸವೂ ಆಗುತ್ತೆ" ಎಂದುಕೊಂಡನು. ಗುಳ್ಳನು "ಅಯ್ಯ ನನಗೆ ಈ ಹಣ ಸಾಲ ಕೊಟ್ಟ. ಅಸಲು ಬಡ್ಡಿ ಎರಡೂ ದುಡಿದೇ ತೀರಿಸಬೇಕು. ಈ ಅಯ್ಯನ ಒಂದು ಕಾಸು ಋಣವೂ ನನಗೆ ಬೇಡ. ಸಾಲಾ ತೀರೋ ಗಂಟ ಅವನ ಮಗನಾಗಿ ದುಡೀತೇನೆ. ಇನ್ನೊಬ್ಬ ಕೊಡೋ ಸಾಲ ಇವನೆ ಕೊಟ್ಟವ್ನೆ. ಇದು ಮುಗಿದ ಮೇಲೆ, ದೇವರ ದಯ ಇದ್ರೆ 'ಗುಳ್ಳ ದ್ವೇಷ ಎಂದಿಗೂ ಮರೆಯೋಲ್ಲ' ಅನ್ನೋದು ಅಯ್ಯನಿಗೆ ಗೊತ್ತಾಗಿಯೇ ಆಗ್ತತೆ" ಎಂದುಕೊಂಡನು. ಅಯ್ಯುವು ಗುಳ್ಳ ಮಾಡಿದಷ್ಟು ಕೆಲಸ ಮಾಡಲಿ ಎಂದು ಸುಮ್ಮನೆ ಇದ್ದರೂ ಗುಳ್ಳನು ಮಾತ್ರ ಒಂದು ಗಳಿಗೆಯೂ ಪೋಲು ಮಾಡದೆ ಇತರ ಆಳುಗಳಿಗಿಂತ ಹೆಚ್ಚು ಶ್ರದ್ಧೆಯಿಂದ ದುಡಿಯುತ್ತಿದ್ದನು. ಉಳಿದ ಆಳುಗಳಿಂದಲೂ ಅಯ್ಯುವು ಎಂದಿಗೂ ಮಾಡಿಸದಷ್ಟು ಕೆಲಸ ಮಾಡಿಸುತ್ತಿದ್ದನು. ಒಂದು ಆಳು ಒಂದು ಗಳಿಗೆ ಸೋಮಾರಿಯಾದರೂ ಗುಳ್ಳನು ಅವನನ್ನು ಒದ್ದು ಅವನಿಂದ ಒಂದಕ್ಕೆ ಎರಡರಷ್ಟು ಕೆಲಸವನ್ನು ತೆಗೆಯುತ್ತಿದ್ದನು. ಅಯ್ಯುವಿನ ಮನೆಯಲ್ಲಿ ಒಂದು ಹುಲ್ಲು ಕಡ್ಡಿ ಪೋಲಾಗುವುದಕ್ಕೂ ಅವನು ಅವಕಾಶ ಕೊಡುತ್ತಿರಲಿಲ್ಲ. ಅವನ ಕೆಲಸ ಆದರೆ ಆಯಿತು ಹೋದರೆ ಹೋಯಿತು ಎನ್ನುವ ತರದ ಕೆಲಸವಾಗಿರಲಿಲ್ಲ. ಮೊದಮೊದಲು ಅಯ್ಯುವಿಗೆ ಗುಳ್ಳನು ಏಕೆ ಇಷ್ಟೊಂದು ಕಷ್ಟಪಡುತ್ತಾನೆ? ಉಳಿದ ಆಳುಗಳ ಜತೆಯಲ್ಲಿ ಸೇರಿಕೊಂಡು ಹೇಗೋ ಹಾಗೆ ಕೆಲಸ ಮಾಡಿಕೊಂಡು ಹೋಗಬಾರದೆ? ಎನ್ನಿಸಿತು. ಗುಳ್ಳನು ಅಯ್ಯುವಿನೊಂದಿಗೆ ಹೆಚ್ಚು ಮಾತನಾಡುತ್ತಿರಲಿಲ್ಲ. ಅವನ ಮುಖದಲ್ಲಿ ಉತ್ಸಾಹವಾಗಲಿ, ಸಂತೋಷವಾಗಲಿ ಕಾಣುತ್ತಿರಲಿಲ್ಲ. ಜೈಲಿನಲ್ಲಿರುವ ಖೈದಿಯು ಜೈಲು ಯಜಮಾನನನ್ನು ನೋಡುವಂತೆ ಅವನು ಯಾವಾಗಲೂ ಅಯ್ಯುವನ್ನು ದ್ವೇಷದಿಂದಲೇ ನೋಡುತ್ತಿದ್ದನು. ಅಯ್ಯ ಕೊಟ್ಟ ಸಾಲ ಬಡ್ಡಿಯೊಂದಿಗೆ ತೀರಿಸಬೇಕು

ಎಂಬುದಷ್ಟೇ ಅವನ ಹಂಬಲವಾಗಿತ್ತು. ಅಯ್ಯು ತನ್ನನ್ನು ಜೈಲಿನಿಂದ ಬಿಡುಗಡೆ ಮಾಡಿದ್ದಾನೆ. ಊರಿನವರ ಎದುರಿಗೆ ತನ್ನ ಮಾನ ಉಳಿಯಿತು ಮುಂತಾದ ಮೃದು ಭಾವನೆಗಳು ಅವನ ಮನಸ್ಸನ್ನು ಹೊಕ್ಕಿರಲೇ ಇಲ್ಲ. ಉಳಿದ ಆಳುಗಳಂತೆ ಅವನು ಅಯ್ಯುವಿನೊಂದಿಗೆ ಕಷ್ಟಸುಖಗಳನ್ನು ಹೇಳಿಕೊಳ್ಳುತ್ತಿರಲಿಲ್ಲ. ಅವರಂತೆ ತಿಂಗಳಿಗೆ ಎರಡು ಮೂರು ದಿನ ಒಂದಿಲ್ಲೊಂದು ನೆವದಿಂದ ಬಿಡುವು ಕೇಳುತ್ತಿರಲಿಲ್ಲ. ಅಯ್ಯುವಿನ ಮನೆಯಲ್ಲಿ ಕೆಲಸ ಮಾಡುತ್ತಾ ಇದ್ದರೂ ಅಯ್ಯುವಿನ ಮೇಲಿನ ಅವನ ದ್ವೇಷ ಸ್ವಲ್ಪವೂ ಕಡಿಮೆಯಾಗಿರಲಿಲ್ಲ. ಸಾಲದ ಹಣ ಅವನು ತೀರಿಸಬೇಕಾದದ್ದು ಇಲ್ಲದಿದ್ದರೆ ಅವನು ಎಂದೋ ಅಯ್ಯುವಿನ ಮೇಲೆ ಬಿದ್ದಿರುತ್ತಿದ್ದನು. ಅಯ್ಯುವು ಹಣದ ಯೋಚನೆಯನ್ನೇ ಮಾಡುತ್ತಿರಲಿಲ್ಲ. ಗುಳ್ಳನು ಕೂಲಿಗಿಂತ ಹೆಚ್ಚಾಗಿ ಇಷ್ಟರ ಮಟ್ಟಿಗೆ ದುಡಿಯುತ್ತಿದ್ದಾನೆಂಬುದೂ ಅವನಿಗೆ ಮೊದಲು ತಿಳಿದಿರಲಿಲ್ಲ. ಗಾಣದ ಎತ್ತಿನಂತೆ ಗುಳ್ಳ ದುಡಿಯುತ್ತಿದ್ದುದನ್ನು ನೋಡಿದಾಗ ಅಯ್ಯುವು, “ಇವನು ಇನ್ನೂ ನಮಗೆ ಹತ್ತಿರದವನಾಗಲಿಲ್ಲ. ಇವನ ಕಿಚ್ಚು ಇನ್ನೂ ಆರಿಲ್ಲ. ದ್ವೇಷ ಸ್ವಲ್ಪವೂ ಕಡಿಮೆಯಾಗಿಲ್ಲ” ಎಂದುಕೊಂಡನು. ಬರಿಯ ಕೆಲಸದ ದೃಷ್ಟಿಯಿಂದ ಹೊರಗಡೆ ನೋಡುವವರಿಗೆ ಗುಳ್ಳನಂತಹ ಆಳೇ ಲೋಕದಲ್ಲಿ ಇಲ್ಲವೆಂದು ತೋರುತ್ತಿದ್ದಿತು. ಅಯ್ಯುವಿನ ಹೆಂಡತಿಗೆ ಕೂಡ “ಇಂತಹ ಆಳು ನಮಗೆ ಯಾವಾಗಲೂ ಸಿಕ್ಕಲಿಲ್ಲ” ಎನ್ನಿಸಿತು. ಜಾಲಹಳ್ಳಿಯ ಉಳಿದ ಎಲ್ಲಾ ರೈತರಿಗೂ ಅಯ್ಯುವಿನ ಮನೆಗೆ ಬರುತ್ತಿದ್ದ ಅವನ ಬಂಧುಗಳಿಗೂ ಹಾಗೆಯೇ ತೋರುತ್ತಿದ್ದಿತು. “ಅಯ್ಯು ಮನೆಯಲ್ಲಿ ಇಲ್ಲದಿದ್ದರೂ ಗುಳ್ಳನೇ ಮನೆಯ ಆಡಳಿತವನ್ನು ನಡೆಸಿಕೊಂಡು ಹೋಗುತ್ತಾನೆ” ಎಂದು ಎಲ್ಲರೂ ಹೇಳುತ್ತಿದ್ದರು. ಮನೆಯಲ್ಲಿ ಗದ್ದೆಯಲ್ಲಿ ವಸೂಲಿಯಲ್ಲಿ ದನಕರುಗಳನ್ನು ನೋಡಿಕೊಳ್ಳುವುದರಲ್ಲಿ ಯಾವ ಕೆಲಸದಲ್ಲೂ ಗುಳ್ಳ ತಾನು ಒಂದು ಆಳಾದರೂ ಎರಡು ಆಳಿನಷ್ಟು ಕೆಲಸ ಮಾಡುತ್ತಿದ್ದನು. ಅವನ ಪ್ರಾಮಾಣಿಕತನವೂ ಹಾಗೆಯೇ ಇದ್ದಿತು. ಅಯ್ಯುವಿನ ಸಾವಿರಾರು ರೂಪಾಯಿಗಳನ್ನು ವಸೂಲು ಮಾಡಿ ಅದನ್ನು ಕಸಕ್ಕಿಂತಲೂ ಕಡೆಯಾಗಿ ಎಣಿಸಿ ಅಯ್ಯುವಿಗೆ ತಲಪಿಸುತ್ತಿದ್ದನು. ಈ ಎಲ್ಲಾ ಕೆಲಸಗಳನ್ನು ಮಾಡುತ್ತಿರುವಾಗ, ಅವನ ಮುಖವನ್ನು ಕುರಿತು ನೋಡಿ ಅದರ ಭಾವಭಂಗಿಗಳನ್ನು ವ್ಯಾಸಂಗ ಮಾಡುವವರಿಗೆ ಮಾತ್ರ ಅಲ್ಲಿ ಒಂದು ಕಿಚ್ಚ ಹಠಸಾಧನೆಯೂ ಗೋಮುಖ ವ್ಯಾಘ್ರ ಸ್ವಭಾವವೂ ಕಾಣುತ್ತಿದ್ದುವು. ಉಳಿದವರಿಗೆ “ನಮಗೂ ಗುಳ್ಳನಂತಹ ಆಳು ಸಿಕ್ಕಿದರೆ ನಾವೂ ಬೂತಯ್ಯನವರ ಎರಡರಷ್ಟು ಒಕ್ಕಲುತನವಾದೇವು” ಎನ್ನಿಸುತ್ತಿತ್ತು.

ಗುಳ್ಳನ ಕೀರ್ತಿ ಹೀಗೆ ಎಲ್ಲೆಲ್ಲೂ ಬೆಳಗಿದರೂ ಬುಂಡೆಕ್ಯಾತ ಮತ್ತು ಅಯ್ಯು ಇವರಿಬ್ಬರಿಗೆ ಮಾತ್ರ ಅದರ 'ಸಾಚಾತನ'ದಲ್ಲಿ ಅನುಮಾನವುಂಟಾಗಿತ್ತು. ಬುಂಡೆಕ್ಯಾತನಿಗೆ ಅನುಮಾನವುಂಟಾಗಲು, ರೈತರಲ್ಲಿ ಅವನಿಗೆ ಇದ್ದ ಸ್ವಾಭಾವಿಕವಾದ ಅನುಭವಜನ್ಯವಾದ ದ್ವೇಷವೇ ಮುಖ್ಯಕಾರಣವಾಗಿತ್ತು. "ಗುಳ್ಳ ಶುದ್ಧ ಕಳ್ಳ. ಸತ್ತರೂ ಅವನನ್ನು ನಂಬಕೂಡದು". ಅವನು "ತಲೆ ಬುಂಡೆ ಕೂದು ಇಟ್ಟರೂ ಅದು ಸೋರೆ ಬುಂಡೆಯೇ" ಎಂಬುದು ಅವನ ಮಾತಾಗಿತ್ತು. ಆದರೆ ರೈತರ ವಿಷಯದಲ್ಲಿ ಅಯ್ಯುವಿನ ಅನುಭವ ಹೆಚ್ಚು. ಅವರ ಸ್ವಭಾವ ಕಷ್ಟಸುಖಗಳನ್ನು ಅವನು ಚೆನ್ನಾಗಿ ಅರಿತಿದ್ದನು. ಅವನಿಗೆ ಬುದ್ಧಿಯ ಪ್ರಾಬಲ್ಯಕ್ಕಿಂತ ಹೃದಯದ ಅನುಭವ ಚೆನ್ನಾಗಿತ್ತು. ಬೂತಯ್ಯನವರು ಆಸ್ತಿಯನ್ನು ಸಂಪಾದಿಸಲು ಪಟ್ಟ ಕಷ್ಟಗಳೂ ತಿಂದ ನೋವುಗಳೂ ಕೊಟ್ಟ ದಂಡಗಳೂ ಅವರ ಹೃದಯದ ತಂಪನ್ನೇ ಬತ್ತಿಸಿದ್ದುವು. ಆ ಹಣದ ಮೇಲೆ ಅಯ್ಯು ಬಂದು ಕುಳಿತಾಗ ಅವನ ಮನುಷ್ಯತ್ವವನ್ನು ಅಮುಕುವ ಅನುಭವಗಳು ಅವನಿಗೆ ಉಂಟಾಗಿರಲಿಲ್ಲ. ಅವನು ಸ್ವಭಾವದಿಂದಲೂ ಯೌವನದಿಂದಲೂ ಉದಾರಿಯೇ ಆಗಿದ್ದನು. ಮಾಡುತ್ತಿದ್ದ ಕೆಲಸಗಳಿಗಿಂತ ಹೆಚ್ಚಾಗಿ ಅದರ ಹಿಂದಲ ಮನೋಭಾವವನ್ನು ನೋಡುವುದು ಅವನಿಗೆ ಪದ್ಧತಿಯಾಗಿತ್ತು. ಗುಳ್ಳನ ಮುಖವನ್ನು ನೋಡಿದಾಗಲೆಲ್ಲಾ ಅವರಿಗೆ ಅಲ್ಲಿ ಅಡಗಿರುವ ದ್ವೇಷ ಕಾಣುತ್ತಿತ್ತು. ಇತರರಿಗೆ ಗುಳ್ಳನ ಪ್ರಾಮಾಣಿಕತೆ ತೋರಿದಾಗ ಅಯ್ಯುವಿಗೆ ಅವನ ದುರಹಂಕಾರ ಕಾಣುತ್ತಿತ್ತು. ಇತರರಿಗೆ ಅವನ ಕಷ್ಟಸಹಿಷ್ಣುತೆ ಕಂಡಾಗ ಅಯ್ಯುವಿಗೆ ಅವನ ಹಠಮಾರಿತನ ಕಾಣುತ್ತಿದ್ದಿತು. ದ್ವೇಷವೇ ಹೊಗೆಯಾಡುತ್ತಿರುವ ಬೆಂಕಿಯಾಗಿ, ವಾಯಿದೆ ಕಳೆಯುವವರೆಗೆ ಮೂಗಿಗೆ ಕವಡೆ ಕಟ್ಟಿಕೊಂಡು ದುಡಿದು, ಒಂದು ವಿಧದಲ್ಲೂ ಅಯ್ಯುವಿನ ಯಾವ ದಾಕ್ಷಿಣ್ಯಕ್ಕೂ ಒಳಗಾಗದೆ, ಹಣ ತೀರಿದ ಕೂಡಲೇ ಒಳಗೆ ತುಂಬಿರುವ ಕಿಚ್ಚನ್ನೆಲ್ಲಾ ಭುಗಿಲೆಂದು ಹೊರಕ್ಕೆ ಗುಳ್ಳನು ಕಾರುವುದರಲ್ಲಿ ಸಂದೇಹವಿಲ್ಲವೆಂದು ಅಯ್ಯುವಿಗೆ ಚೆನ್ನಾಗಿ ಗೊತ್ತಾಗಿದ್ದಿತು.

ಅಯ್ಯುವು ಗುಳ್ಳನಿಗೆ ಅನೇಕ ಆಸೆಗಳನ್ನು ತೋರಿಸಿದನು. "ಇತರ ಆಳುಗಳು ಮಾಡುವುದರ ಎರಡರಷ್ಟು ಕೆಲಸ ನೀನು ಮಾಡಿದ್ದೀಯೆ. ಅವರು ಹತ್ತು ವರ್ಷ ಕೆಲಸ ಮಾಡಿದರೆ ನೀನು ಐದು ವರ್ಷ ಮಾಡಿದಷ್ಟು ಆಗುವುದಿಲ್ಲ. ನಿನ್ನ ಹಣ ತೀರಿತು. ನೀನು ಇನ್ನು ಕೆಲಸ ಮಾಡಬೇಕಾದ್ದಿಲ್ಲ" ಎಂದು ಅಯ್ಯು ಹೇಳಿದುದಕ್ಕೆ ಗುಳ್ಳ "ನಾನೂ ಎಲ್ಲರಂತೆ" ಎಂದುಬಿಟ್ಟನು. ಅಯ್ಯುವು "ಜೀತವನ್ನು ಬಿಡು, ನನ್ನ ಜಮೀನನ್ನೇ ವಾರಕ್ಕೆ ಮಾಡಿಕೋ" ಎಂದಾಗ, ಗುಳ್ಳನು

“ಸ್ವಂತ ಜಮೀನಿದ್ದರೆ ಆರಂಭ, ವಾರವು ಘೋರ” ಎಂದನು. ಗುಳ್ಳನ ಈ ’ಕಡದು’ ಆಚರಣೆಯಿಂದ ಅವನ ಗೌರವ ಊರಿನಲ್ಲಿ ಏರಿತು. “ತಕೊಂಡ ಹಣ ಒಂದು ಕಾಸು ನಿಲ್ಲಿಸದೆ ದಣಿ ಋಣ ತೀರಿಸಿದ” ಎಂಬ ಬಿರುದು ಹಳ್ಳಿಯಲ್ಲಿ ಬಂದರೆ ರೈತರ ದೃಷ್ಟಿಯಲ್ಲಿ ಅವನೇ ಭಾರಿ ಗೃಹಸ್ಥ, ರೈತರು ಅವನನ್ನೇ ಗೃಹಸ್ಥನೆನ್ನುವುದು. ಅಲ್ಲಿ ಉಳಿದ ಯಾವ ಗೃಹಸ್ಥ ಧರ್ಮವೂ ಮನುಷ್ಯನ ಯೋಗ್ಯತೆಗೆ ಬೆಲೆಯನ್ನು ಕೊಡುವುದಿಲ್ಲ.

ಸಾಧನೆಯನ್ನು ಮಾಡುವ ಯೋಗಿಯಂತೆ ಗುಳ್ಳನು ಗೊತ್ತು ಮಾಡಿಕೊಂಡಿದ್ದ ಹತ್ತು ವರ್ಷ ಜೀತವನ್ನು ದೇವರೂ ಮನುಷ್ಯರೂ ಒಪ್ಪುವ ರೀತಿಯಲ್ಲಿ ದುಡಿದು ಹಣವನ್ನು ತೀರಿಸಿಬಿಟ್ಟನು. ಮಾರನೆಯ ದಿನ ಜಾಲಹಳ್ಳಿಯಲ್ಲಿ ಮಾರಿಜಾತ್ರೆ. ಬೂತಯ್ಯನವರು ಬದುಕಿದ್ದಾಗ ರೈತರೊಂದಿಗೂ ತಿಗಳರೊಂದಿಗೂ ಯಾವುದೋ ಏರ್ಪಾಡು ಮಾಡಿಕೊಂಡು ಜಾತ್ರೆಯಲ್ಲಿ ತಾವೂ ಸಹಾಯಕರಾಗಿ ಅದರಿಂದಲೂ ಸ್ವಲ್ಪ ಹಣವನ್ನು ಗಳಿಸುತ್ತಿದ್ದರು. ಅಯ್ಯುವಿಗೆ ಮೊದಲಿನಿಂದಲೂ ಮಾರಿಜಾತ್ರೆ ಎಂದರೆ ಮೈ ಜುಂ ಎನ್ನುತ್ತಿದ್ದಿತು. ಅವನ ಬಾಲ್ಯದಲ್ಲಿ ಒಂದು ಸಲ ಕೋಣನನ್ನು ಜಾತ್ರೆಯಲ್ಲಿ ಕಡಿಯುತ್ತಿದ್ದಾಗ ಅವನು ನೋಡುವುದಕ್ಕೆ ಹೋಗಿದ್ದನು. ಸ್ವಲ್ಪ ಮುಂಚೆ ಕೋಣನನ್ನು ಕಡಿಯುವವನು ಬೂತಯ್ಯನವರ ಹತ್ತಿರ “ಎಂಥಾ ಕೋಣಾನೂ ಒಂದು ಏಟಿಗೆ ಕಡಿಯುವುದಕ್ಕೆ ಆಗುವುದಿಲ್ಲ. ಕತ್ತಿನ ಮೂಳೆ ಮೇಲೆ ಏಟು ಕೊಟ್ಟರೆ ಕತ್ತಿಯೇ ಮೇಲಕ್ಕೆ ಹಾರುತ್ತೆ. ಸರಿಯಾದ ಜಾಗ ನೋಡಿ ಗರಗಸದಲ್ಲಿ ಕುಯ್ಯೋ ಹಾಗೆ ಕತ್ತೀನ ಜಾರಿಸಬೇಕು. ನಾನು ಆಗಲೇ ನೂರು ಕೋಣ ಕಡಿದಿದೇನೆ. ಇನ್ನೂ ಪಟ್ಟು ಸಿಕ್ಕಿಲ್ಲ” ಎಂದಿದ್ದನು. ಅಯ್ಯುವು ಕೋಣನನ್ನು ಕಡಿಯುವ ಕಂಬದಿಂದ ತುಂಬ ದೂರ ನಿಂತಿದ್ದರೂ ಮೊದಲನೆಯ ಕತ್ತಿಯ ಏಟು ಕೋಣನ ಕತ್ತಿಯ ಮೇಲೆ ಬಿದ್ದಕೂಡಲೇ ಅದರಿಂದ ರಕ್ತವು ಚಿಲ್ಲೆಂದು ಚಿಲುಮೆಯಂತೆ ಹಾರಿ ಅಯ್ಯುವಿನ ಮೈಮೇಲೆ ಚೆಲ್ಲಿತು. ಜಾತ್ರೆಯಾಗಲಿ ಆಗದಿರಲಿ, ಅಯ್ಯುವಿಗೆ ಆ ಜ್ಞಾಪಕ ಪದೇ ಪದೇ ಬರುತ್ತಿದ್ದಿತು. ಕೋಣನ ತಲೆಯ ಮೇಲೆ ಹರಳೆಣ್ಣೆ ದೀಪವನ್ನಿಟ್ಟು ಮನೆಮನೆಯಲ್ಲಿ ಕೊಟ್ಟ ಎಣ್ಣೆಯನ್ನು ಅದಕ್ಕೆ ಸುರಿಯುತ್ತಾ ಭಯಂಕರವಾದ ಕೊಂಬು, ತಮಟೆಗಳೊಂದಿಗೆ ಅದರ ಮೆರವಣಿಗೆ ಮಾಡುವುದು; ಇಪ್ಪತ್ತು ಮೂವತ್ತು ಗಡಿಗೆಗಳಲ್ಲಿ ಹೆಂಡವನ್ನು ತಂದು ಅವುಗಳನ್ನು ಮಾರಿಯಮ್ಮನ ಮುಂದೆ ಇಟ್ಟು ಸುತ್ತ ಕುಣಿಯುವುದು; ಮಾರಿಯಮ್ಮನಿಗೆ ಮೊದಲನೆಯ ಆಹುತಿಗೆ ಒಂದು ಕುರಿಯನ್ನು ಸೀಕೊಡುವುದು; ಅದರ ರಕ್ತದಲ್ಲಿ ಅನ್ನವನ್ನು ಕಲಸಿ ರುಚಿ ನೋಡಿ ಊರಿನ ನಾಲ್ಕು ದಿಕ್ಕುಗಳಲ್ಲೂ ಅದನ್ನು ಬಲಿ ಹಾಕುವುದು; ಆ ಭಯಂಕರ ತಮಟೆ; ಕುಡಿದವರ ಅಮಲಿನ ಕಿರಿಚಾಟ;— “ಈ

ಮತ್ತು ಏರಿದವರು ಕೋಣಗಳನ್ನು ಕಡಿಯುವುದಿರಲಿ, ಮನುಷ್ಯರನ್ನು ಕಡಿಯುವುದೂ ಆಶ್ಚರ್ಯವಲ್ಲ" ಎಂದು ಅಯ್ಯುವಿಗೆ ತೋರಿತು. ಆ ವರ್ಷ ಅವನು ಬಹಳ ಉಪಾಯದಿಂದ "ಕೋಣಗಳನ್ನು ಕಡಿಯುವುದನ್ನು ಈ ವರ್ಷ ನಿಲ್ಲಿಸಿ" ಎಂದು ರೈತರನ್ನು ಕೇಳಿಕೊಂಡಿದ್ದನು. ಕಡಿಯಬೇಕೆಂದು ಹೇಳುತ್ತಿದ್ದವರು ನೂರು ಒಕ್ಕಲು. ಬೇಡವೆನ್ನುತ್ತಿದ್ದವನು ಒಬ್ಬ. "ಕೋಣ ಕಡಿಯುವುದನ್ನು ಬಿಟ್ಟರೆ ಊರಿಗೆ ಪರಬಲವಿಲ್ಲ" ಎಂದು ಆ ನೂರು ಒಕ್ಕಲೂ ನಂಬಿದ್ದರು. ಚರ್ಚೆ ನಡೆಯುತ್ತಿದ್ದಾಗ ಅಯ್ಯು ಅಲ್ಲಿ ಇರಲಿಲ್ಲ. "ನನ್ನ ಮಾತು ನಾನು ಹೇಳಿದ್ದೇನೆ. ಅವರು ಇಷ್ಟವಿದ್ದಂತೆ ಮಾಡಲಿ. ಇದು ಅವರ ಜಾತ್ರೆ, ನನ್ನ ಜಾತ್ರೆಯಲ್ಲ" ಎಂದುಕೊಂಡು ಅವನು ಮನೆಯಲ್ಲೇ ಇದ್ದನು. ಆ ವೇಳೆಗೆ ಗುಳ್ಳನು ಅಲ್ಲಿಗೆ ಬಂದನು. "ಜಾತ್ರೆ ಬಿಟ್ರೆ ಊರು ಪ್ರಬಲ ಆಗೋಲ್ಲ, ಅಯ್ಯನ ಮಾಟವೂ ಅದೇಯ. ನಮ್ಮ ಅಪ್ಪ ಅಜ್ಜನ ಕಾಲದಿಂದ ನಡಕೊಂಡು ಬಂದಿರೋ ದೇವರು ದಿಂಡರು ಇವತ್ತು ನಮಗೆ ಆಗದೋರಾದ್ರ? 'ಜಾತ್ರೆ ಬಿಡಲಿ. ಒಕ್ಕಡಿಂದ ಪ್ಲೇಗೋ ಕಾಲರಾನೋ ದೊಡ್ಡರೋಗಾನೋ ಹೊಡೆದು ಈ ಮುಂಡೆ ಮಕ್ಕಳ್ನೆಲ್ಲಾ ಸವರಿಕೊಂಡು ಹೋಗ್ಲಿ ಆಮೇಲೆ ರಾಜ್ಯ ಎಲ್ಲಾ ನಂದೇ' ಅಂತ ಅಯ್ಯ ಹೇಳ್ತಾನೆ. ನೀವು ಮೂಡ ಮುಂಡೇವು. ತಲೆ ಕಡೀತಿನಿ ಅಂದ್ರೆ ಹಂಗೆ ಮಾಡು ನಮ್ಮಪ್ಪ ಅಂತೀರಿ" ಎಂದನು. ಗುಳ್ಳನ ಮಾತು ಜನಕ್ಕೆ ಚೆನ್ನಾಗಿ ಹಿಡಿಯಿತು. "ಅಯ್ಯನ ಬಲಗೈ ಗುಳ್ಳನೇ ಹಂಗೆ ಹೇಳಬೇಕಾದರೆ ಅಯ್ಯನ ಇಚಾರ ತಳಮಟ್ಟ ಅವ ಸೋದಿಸಿ ತಿಳಕೊಂಡೆ ಅವ್ನೆ. ಇಂಥ ಹಿಕ್ಮತ್ತು ಅಯ್ಯಂದು ಅಂತ ನಂಗೆ ಹಿಂದೆಯೇ ತಿಳಿದಿತ್ತು" ಎಂದ ಊರ ಪಟೇಲ. ಗುಳ್ಳನಲ್ಲಿ ತುಂಬಿಕೊಂಡಿದ್ದ ದ್ವೇಷವೆಲ್ಲಾ ಹೊರಕ್ಕೆ ಕಿಚ್ಚುಕಿಚ್ಚಾಗಿ, ಉರಿಉರಿಯಾಗಿ ಬಂದಿತು. ಉದ್ರೇಕದಿಂದ ಅವನ ಮೈ ನಡುಗುತ್ತಿದ್ದಿತು, ನಾಲಗೆ ತೊದಲುತ್ತಿದ್ದಿತು. ಅವನು "ಈ ಅಯ್ಯ ಅನ್ನೋ ಹುಳಾನ ನಾವು ಹೊಸಕಿ ಹಾಕ್ದೆ ಇದ್ರೆ ಇವ ನಮ್ಮ ಗ್ರಾಮ ತಕೋತಾನೆ. ನಮ್ಮ ಅಪ್ಪ ಅಜ್ಜಂದೀರು ದುಡಿದೂ ದುಡಿದೂ ಇವನ ಅಪ್ಪನ ಮನೆ ದೊಡ್ಡದು ಮಾಡಿದರು. ನಾವು ದುಡಿದೂ ದುಡಿದೂ ಇವನ ಮನೆ ಅರಮನೆಯಾಯ್ತದೆ. ಈಗಲೇ ಇವನ ಫೈಸಲ್ ಹತ್ತಿಸದೆ ಬಿಟ್ಟರೆ ನಮ್ಮ ಮಕ್ಕಳೂ ಇವನ ಜೀತ ಮಾಡೋದೆ ಆಯ್ತದೆ. ಈ ನೂರು ಒಕ್ಕಲಲ್ಲಿ ಬೂತಯ್ಯನಿಗೆ ಸಾಲಗಾರರಲ್ಲದೋರು ಯಾರಾದರೂ ಅವ್ರೋ? ಇಲ್ಲ. ಅಯ್ಯ ನಾಳೆ ದಾವಾ ಹಾಕಿದರೆ ನಾವೆಲ್ಲಾ ಊರುಬಿಟ್ಟು ವನವಾಸ ಮಾಡೋದೆ. ಅಯ್ಯನಿಗೆ ಆಧಾರ ಆಗದ್ದು ಅಂಗೈ ಅಗಲ ಜಮೀನು ಈ ಊರಲ್ಲಿ ಇಲ್ಲ. ಆ ಜಮೀನ ಅಯ್ಯನಿಂದ ಬಿಡಿಸದೆ ಹೋದ್ರೆ ನಿಮ್ಮ ಮಕ್ಕಳ ಕೈಗೆ ಕರಟ ತಾನೆ. ನೀವೆಲ್ಲಾ ಮೂಢರು. ಹೆಬ್ಬೆಟ್ಟು ತಿವಿದ ಪತ್ರಗಳು ಅಯ್ಯನ ಮನೇಲಿ ಬಾರಿ ಹುಲ್ಲುಹೊರೆ ಅಷ್ಟು

ಆಯ್ತೆ. ಅಯ್ಯ ನಿಮ್ಮ ಮನೆ, ಜಮೀನು, ಹಣ ಎಲ್ಲಾ ಸಣ್ಣ ಮಾಡಿದ; ಇನ್ನು ಊರನೇ ಸಣ್ಣ ಮಾಡೋಣ ಅಂತ ಜಾತ್ರೆ ಬಿಡಿ ಅಂತಾನೆ. ಅಪ್ಪ ಅಜ್ಜ ಸಂಪಾದಿಸಿದ ಆಸ್ತಿಯೆಲ್ಲಾ ಹೋಯ್ತು. ಪರಾಣಾನೂ ಮಾರಿಯಮ್ಮನ ಕೋಪಕ್ಕೆ ಒಪ್ಪಿಸಿಬಿಡಿ" ಎಂದ. ಗುಳ್ಳನು ಪತ್ರಗಳ ವಿಚಾರ ಹೇಳಿದುದರಿಂದ ಜಾತ್ರೆಗಿಂತ ರೈತರಿಗೆ ಅದೇ ಹೆಚ್ಚಾಯಿತು. "ಅಯ್ಯನ ಕೈಲೆ ನಮ್ಮ ಜೀವ ಅಯ್ತೆ" ಅನ್ನುವುದು ಪ್ರತಿಯೊಬ್ಬನಿಗೂ ಮತ್ತೆ ಮತ್ತೆ ಜ್ಞಾಪಕಕ್ಕೆ ಬಂತು. ಅಯ್ಯುವಿನ ಹಣೇಬರಹ ತೊಡೆದು ಹೋಯಿತು. "ನಾಳೆ ರಾತ್ರಿ ಅಯ್ಯನ ಮನೆ ನುಗ್ಗಿ ಲೂಟ ಮಾಡಬೇಕು. ಅಯ್ಯನೇನಾದರೂ ತುಟಿಕ್ ಪಿಟಿಕ್ ಅಂದರೆ ಅವನನ್ನ ಕಡಿದೇ ಹಾಕಬೇಕು. ಮನೇಲಿ ಯಾರು ತಡೆದರೂ ಅವರನ್ನೂ ಕಡಿದೇ ಹಾಕಬೇಕು. ಮನೆಗೆ ಒಂದಾಳು ದೊಣ್ಣೆ ಕತ್ತಿ ಕೊಡಲಿ, ಸಿಕ್ಕಿದ್ದು ತೆಗೆದುಕೊಂಡು ಬರಬೇಕು. ಬರದಿದ್ದರೆ ಅವರನ್ನೂ ಕಡಿದು ಹಾಕಬೇಕು" ಎಂದು ತೀರ್ಮಾನಿಸಿಕೊಂಡು ರೈತರೆಲ್ಲಾ ತಮ್ಮ ತಮ್ಮ ಮನೆಗಳಿಗೆ ಹೋದರು. ಬೆಳಗಾದನಂತರ ಆ ವರ್ಷ ಎಲ್ಲಾ ವರ್ಷಗಳಿಗಿಂತ ಹೆಚ್ಚು ಕೋಣಗಳನ್ನು ಕಡಿಯುತ್ತಾರೆಂದು ಅಯ್ಯುವಿಗೆ ತಿಳಿಯಿತು. "ಅವರ ಇಷ್ಟ" ಎಂದುಕೊಂಡು ಸುಮ್ಮನಾದನು.

ಜಾಲಹಳ್ಳಿಯಲ್ಲಿ 'ಅಯ್ಯ'ನಾಗಿದ್ದವನು ಅಯ್ಯು ಒಬ್ಬನೆ. ಅವನ ಮನೆಯಲ್ಲಿ ಅವನ ಹೆಂಡತಿಯೂ ಇಬ್ಬರು ಗಂಡುಮಕ್ಕಳೂ ಇದ್ದರು. ಮೊದಲನೆಯ ಹುಡುಗನಿಗೆ ಆರು ವರ್ಷವೂ ಎರಡನೆಯ ಹುಡುಗನಿಗೆ ನಾಲ್ಕು ವರ್ಷವೂ ಆಗಿತ್ತು. ಮನೆಯಲ್ಲಿ ಮೂರು-ನಾಲ್ಕು ಆಳುಗಳು ಯಾವಾಗಲೂ ಜೀತಕ್ಕೆ ಇರುತ್ತಿದ್ದರು. ಮನೆಯಲ್ಲಿ ದನಕರುಗಳೂ ಕರಾವೂ ಭತ್ತ ರಾಗಿ ಕಿರಾಣಿಗಳೂ ಸಮೃದ್ಧಿಯಾಗಿದ್ದುವು. ಅಯ್ಯುವಿನ ಭಾಮೈದ ಬುಂಡೆಕ್ಯಾತನು ಆಗಾಗ್ಗೆ ಬಂದು ಅಲ್ಲಿ ಒಂದು ತಿಂಗಳು ಎರಡು ತಿಂಗಳು ಇರುತ್ತಿದ್ದನು. ಅಯ್ಯುವಿನ ಸಪ್ಪೆತನ ಅವನಿಗೆ ಸೇರುತ್ತಿರಲಿಲ್ಲ. ಮಾರಿ ಜಾತ್ರೆಯ ಹೊತ್ತಿಗೆ ಅವನು ಜಾಲಹಳ್ಳಿಯಿಂದ ತನ್ನ ಊರಿಗೆ ಹೋಗಿ ಸುಮಾರು ಒಂದು ತಿಂಗಳಾಗಿತ್ತು. ಅಯ್ಯುವಿನ ಮನೆ ತೊಟ್ಟಿ ಮನೆ. ಅದರ ಮಧ್ಯಭಾಗದಲ್ಲಿ ಅಂಗಳವಿದ್ದು ಸೂರಿನ ಹಾರನ್ನು ಎಲ್ಲಾ ಕಡೆಗಳಿಂದಲೂ ಆ ಅಂಗಳಕ್ಕೆ ಬಗ್ಗಿಸಿದ್ದರು. ಅಂಗಳದ ಮೇಲುಗಡೆ ಕಬ್ಬಿಣದ ಸಲಾಕಿಗಳನ್ನು ಬಿಗಿದು ಅದರ ಮೂಲಕ ಒಳಕ್ಕೆ ಬರಲು ಸಾಧ್ಯವಾಗದಂತೆ ಮಾಡಿದ್ದರು. ಬಾಗಿಲುಗಳನ್ನು ಅರ್ಧ ಅಡಿ ದಪ್ಪವಾದ ಹಲಗೆಗಳಿಂದ ಮಾಡಿದ್ದುದರಿಂದ ದೇವಸ್ಥಾನದ ಬಾಗಿಲುಗಳಂತೆ ಭಾರವೂ ಬಿಗಿಯೂ ಆಗಿದ್ದುವು. ಗೋಡೆಗಳಿಗೆಲ್ಲಾ ಮರದ ದಿಮ್ಮಿಗಳನ್ನು ಕೊಟ್ಟು ಸುಮಾರು ಒಂದು ಮಾರು ದಪ್ಪವಾಗಿ ಕಟ್ಟಿದ್ದರು. 'ರೈತರೆಲ್ಲಾ ರಾಕ್ಷಸರು' ಎನ್ನುತ್ತಿದ್ದ ಬೂತಯ್ಯನವರು ಅಷ್ಟೊಂದು ಜನರ ಮಧ್ಯೆ ತಾವು ಒಬ್ಬರೇ ಇರಬೇಕಾಗಿದ್ದುದರಿಂದ

ಕೋಟೆಯಂತಹ ಮನೆಯನ್ನು ಕಟ್ಟಿದ್ದರು. ಮನೆ ಕಟ್ಟಿದ ಬಡಗಿಯು "ಈ ಊರಿಗೆ ಮತ್ತೆ ಕೋಟೆ ಕಟ್ಟಬೇಕಾದರೆ ಬೂತಯ್ಯನವರ ಮನೆ ಗೋಡೆ ಒಡೆದರೆ ಸಾಕು ಬೇಕಾದಷ್ಟು ಮಣ್ಣು ಸಿಕ್ಕುತ್ತೆ" ಎಂದು ಹೇಳಿದ್ದನು. ಆದರೆ "ಸಿಡಿಲು ಬಡಿದರೆ ಹಿಡಿದ ಕೊಡೆ ಕಾಯುವುದೆ?" ಊರವರೆಲ್ಲಾ ಒಂದಾಗಿ ಮೇಲೆ ಬೀಳುವುದಕ್ಕೆ ಬಂದ ಕಾಲಕ್ಕೆ ಯಾವ ಗೋಡೆಯೂ ತಡೆಯುವುದಾಗಿರಲಿಲ್ಲ.

ಆ ದಿವಸ ಜನ ಹೆಚ್ಚಾಗಿ ಅಯ್ಯುವಿನ ಮನೆ ಮುಂದೆ ಸುಳಿಯಲಿಲ್ಲ. ಸಾಯಂಕಾಲವಾದ ನಂತರ ಹೊಲೆಯರು ಹೆಂಡವನ್ನು ಕುಡಿದು ಮಾರಿಗುಡಿಯ ಮುಂದೆ ಬಂದು ತಮಟೆಯನ್ನು ಪ್ರಾರಂಭಿಸಿದರು. ಅನೇಕ ತಿಗಳರೂ ಒಕ್ಕಲಿಗರೂ ತಲೆಗೆ ಮುಸುಕು ಹಾಕಿಕೊಂಡು ತಾವೂ ಅದರ ಮರೆಯಲ್ಲಿ ಹೆಂಡವನ್ನು ಕುಡಿದರು. ಜಾತ್ರೆಯ ತಮಟೆಯ ಸದ್ದನ್ನು ಕೇಳಿ ಅಯ್ಯುವಿನ ಹೆಂಡತಿಗೆ ರಣವಾದ್ಯವನ್ನು ಕೇಳಿದಂತೆ ಭಯವಾಯಿತು. ಸ್ವಲ್ಪ ಹೊತ್ತಿಗೆ ಒಬ್ಬ ತಿಗಳನು ಬಂದು ಉಪ್ಪಿನ ಕಾಯನ್ನು ಕೇಳಿದನು. ಅಯ್ಯುವಿನ ಹೆಂಡತಿಯು "ಈಗ ಮಡಿ ಇಲ್ಲ. ಬೆಳಿಗ್ಗೆ ಕೊಡುತ್ತೇನೆ" ಎಂದಳು. ರಾತ್ರಿ ಹತ್ತು ಗಂಟೆಗೆ ಅಯ್ಯುವಿನ ಮಕ್ಕಳು ಮಲಗಿದ್ದುವು. ಆ ದಿನ ಮಾರಿ ಜಾತ್ರೆಯಾದುದರಿಂದ ಯಾವ ಜೀತದ ಆಳೂ ಅಯ್ಯುವಿನ ಮನೆಗೆ ಮಲಗಲು ಬರಲಿಲ್ಲ. ಸುಮಾರು ಹನ್ನೊಂದು ಗಂಟೆಯ ಹೊತ್ತಿಗೆ ಅಯ್ಯುವಿಗೆ ಸ್ವಲ್ಪ ಜೊಂಪು ಬಂದಿತು. ತಮಟೆಯ ಭೋರಾಟದಿಂದ ಅವನಿಗೆ ನಿದ್ರೆ ಬರಲಿಲ್ಲ. ಅವನ ಹೆಂಡತಿಗೂ ನಿದ್ರೆ ಬರಲಿಲ್ಲ. ಅರ್ಧರಾತ್ರಿಯ ಹೊತ್ತಿಗೆ ಯಾರೋ ಬಾಗಿಲನ್ನು ತಟ್ಟಿದರು.

ಅಯ್ಯುವು ಬಾಗಿಲನ್ನು ತೆಗೆಯುವುದಕ್ಕೆ ಎದ್ದನು. ಅವನ ಹೆಂಡತಿಯು "ಭಯವಾಗುತ್ತೆ, ಇಷ್ಟು ಹೊತ್ತಿನಲ್ಲಿ ಯಾಕೆ ತೆಗೆಯಬೇಕು, ಮಲಗಿಕೊಳ್ಳಿ, ನಿದ್ರೆ ಬಂದಿದೆ ಎಂದುಕೊಂಡು ಹೋಗುತ್ತಾರೆ, ಬೆಳಿಗ್ಗೆ ನೋಡೋಣ" ಎಂದಳು. ಅಯ್ಯುವು "ಹುಚ್ಚೀ, ಭಯವೇನು ಬಂತು. ಜಾತ್ರೆಗೆ ಏನಾದರೂ ಬೇಕೇನೊ. ಇವರೆಲ್ಲಾ ನಮ್ಮ ರೈತರು. ಭಯಪಟ್ಟುಕೊಂಡು ಈ ಊರಲ್ಲಿ ಇರುವುದಕ್ಕೆ ಆಗುತ್ತದೆಯೇ? ನೀನು ಮಲಗಿಕೊ" ಎಂದು ಹೇಳಿ, ಲಾಂದ್ರವನ್ನು ದಪ್ಪಮಾಡಿಕೊಂಡು ಬಂದು ಬಾಗಿಲನ್ನು ತೆರೆದನು. ಬಾಗಿಲನ್ನು ಅರ್ಧ ತೆಗೆದ ನಂತರ ಅಯ್ಯುವು ಸ್ವಲ್ಪ ಬೆಚ್ಚಿಬಿದ್ದನು. ಆದರೆ ಅದನ್ನು ತೋರಿಸಿಕೊಳ್ಳದೆ ಬಾಗಿಲನ್ನು ಪೂರ್ತ ತೆಗೆದು ಹೊರಕ್ಕೆ ಬಂದನು. ಅವನ ಕಣ್ಣಿಗೆ ಮೊದಲು ಬಿದ್ದವನು ಗುಳ್ಳ. ಅವನು ಅಯ್ಯುವನ್ನೇ ನುಂಗುವಂತೆ ನೋಡುತ್ತಿದ್ದನು. ಅವನ ಕಣ್ಣಿನಲ್ಲಿ ಆಗ ಕಂಡಷ್ಟು ದ್ವೇಷವೂ ಪಿಶಾಚತನವೂ ರಾಕ್ಷಸಭಾವವೂ ಅಯ್ಯುವಿಗೆ ಮತ್ತಾವಾಗಲೂ ಕಂಡಿರಲಿಲ್ಲ. "ಇದಕ್ಕೋಸ್ಕರವೇ ಈ ಹತ್ತು ವರ್ಷ ನಿನ್ನ ಜೀತ

ಮಾಡಿದೆ" ಎಂದು ಅವನು ತನಗೆ ಹೇಳುತ್ತಿರುವಂತೆ ಅಯ್ಯುವಿಗೆ ತೋರಿತು. ಗುಳ್ಳನ ಕೈಲಿ ದೊಣ್ಣೆಯಾಗಲಿ, ಮಚ್ಚಾಗಲಿ ಇರಲಿಲ್ಲ. ಅವನ ಹಿಂದುಗಡೆ ಊರಿನವರೆಲ್ಲಾ ಸಾಲಾಗಿ ಮಾತನಾಡದೆ ನಿಂತಿದ್ದರು. ಪ್ರತಿಯೊಬ್ಬನ ಕೈಲೂ ಒಂದೊಂದು ಆಯುಧ ಹೊಳೆಯುತ್ತಿತ್ತು. ಒಬ್ಬನು ಮಾರಿ ಕೋಣವನ್ನು ಕಡಿಯುವ ಉದ್ದವಾದ ಕತ್ತಿಯನ್ನೇ ಹೂವಿನ ಹಿಡಿಯೊಂದಿಗೆ ತಂದಿದ್ದನು. ಬಂದಿದ್ದವರಲ್ಲಿ ಮುಕ್ಕಾಲು ಜನ ಕುಡಿದಿದ್ದರು. ಐದು ನಿಮಿಷ ಅಯ್ಯುವೂ ಮಾತನಾಡಲಿಲ್ಲ. ಅವರೂ ಮಾತನಾಡಲಿಲ್ಲ. ಯಾವ ಕ್ಷಣದಲ್ಲೋ ಸಿಡಿಯುವ ಸಿಡಿಮದ್ದುಗಳಂತೆ ಇದ್ದ ಆ ರೈತರು ಗುಳ್ಳನ ಕಡೆಯೇ ನೋಡುತ್ತಾ ಅವನ ಸೂಚನೆಯನ್ನೇ ನಿರೀಕ್ಷಿಸುತ್ತಿದ್ದರು. ಅಯ್ಯನ ಕೈಯಲ್ಲಿ ರಿವಾಲ್ವರ್ ಇದ್ದುದನ್ನು ಗುಳ್ಳನ ಹೊರತು ಮತ್ತಾರೂ ನೋಡಿರಲಿಲ್ಲ.

ಅಯ್ಯುವಿನ ಮನೆಯಲ್ಲಿ ಹತ್ತು ವರ್ಷ ಜೀತ ಮಾಡಿದ್ದ ಗುಳ್ಳನಿಗೆ ಅಯ್ಯುವಿನ ಹತ್ತಿರ ರಿವಾಲ್ವರೂ ಜೋಡುನಲ್ಲಿಯ ಬಂದೂಕೂ ಇರುವುದು ಗೊತ್ತಿದ್ದಿತ್ತು. ಅಯ್ಯು ರಾತ್ರಿ ಹೊತ್ತು ಯಾವಾಗ ಎದ್ದರೂ ರಿವಾಲ್ವರನ್ನು ಕೈಯಲ್ಲಿ ಹಿಡಿದುಕೊಳ್ಳದೆ ಬಾಗಿಲು ತೆರೆಯುತ್ತಿರಲಿಲ್ಲವೆಂಬುದೂ ಅವನಿಗೆ ಗೊತ್ತಿದ್ದಿತು. ಆದರೆ ನೂರು ಜನರ ಆಕ್ರೋಶಕ್ಕೆ ಎದುರಾಗಿ ಒಂದು ರಿವಾಲ್ವರು ಏನು ಮಾಡಬಲ್ಲುದೆಂದು ದ್ವೇಷದಿಂದ ಕುರುಡನಾಗಿದ್ದ ಅವನು ಯೋಚಿಸಿದನು. ಆದರೆ ಅಯ್ಯುವು ಬಾಗಿಲು ತೆಗೆದು ಎದುರಿಗೆ ನಿಂತಾಗ ಗುಳ್ಳನಿಗೆ—ಅವನು ಕುಡಿಯದೆ ಇದ್ದುದರಿಂದ—ಸ್ವಲ್ಪ ಯೋಚನೆಯುಂಟಾಯಿತು. "ಅಯ್ಯ ಬಂದೂಕ ಹಾರಿಸಿದರೆ ಈ ಕುರಿಗಳು ಇಲ್ಲಿ ನಿಲ್ಲೋ ಹಂಗೆ ಇಲ್ಲ. ಆ ಬಂದೂಕದಲ್ಲೇ ಐದು ತೋಟಾ ಇದೆ. ಐದು ಜನ ಪ್ರಾಣ ಒಪ್ಪಿಸ್ತಾರೆ. ಆಮೇಲೋ ಈ ಅಳ್ಳೆದೆಯೋವು ಒಳ್ವಿಕೆ ನುಗ್ಗತವೋ ಇಲ್ಲವೋ. ಆಗೋದಾಗ್ಲಿ, ಐದಾಳು ಸತ್ರು ಚಿಂತೆ ಇಲ್ಲ ನುಗ್ಗಿಯೇ ಬಿಡೋಣ" ಎಂದು ಅವನು ತೀರ್ಮಾನಿಸಿಕೊಂಡನು. ಅಯ್ಯುವಿಗೆ ಗುಳ್ಳನ ಯೋಚನೆ ಅವನ ಮುಖವನ್ನು ನೋಡಿದಾಗಲೇ ತಿಳಿಯಿತು. ಅವನು "ನಾನು ಈ ಐದು ಜನ ಕೊಂದರೆ ತಾನೆ ಫಲವೇನು. ಹೇಗೂ ಉಳಿದ ೯೫ ಜನದ ಪೈಕಿ ಆರನೆಯವನಿಗೆ ನಾನು ಆಹುತಿ. ಬರಲಿ ಏನಾಗುತ್ತೆ ನೋಡೋಣ. ಸಾಯಬೇಕಾದ್ರೆ ಅವರ ಕೊಲ್ಲದೆಯೇ ಸಾಯೋಣ" ಎಂದುಕೊಂಡು ರಿವಾಲ್ವರನ್ನು ಜನರ ಮುಂದೆ ಎಸೆದು ಬಾಗಿಲಿನಿಂದ ಅರುಗಾಗಿ ನಿಂತುಕೊಂಡನು.

ರಿವಾಲ್ವರು ಬಿದ್ದುದನ್ನು ನೋಡಿದ ಕೂಡಲೇ ಬೂತಯ್ಯನವರು "ರಿವಾಲ್ವರ್ ಲೈಸೆನಿ ತೆಗೆದಿಟ್ಟಿದ್ದೇನೆ. ಮನೆಹತ್ರ ಬಂದೊನ್ನ ಸುಟ್ಟು ಹಾಕ್ತೇನೆ" ಎಂಬುದಾಗಿ ಹೇಳುತ್ತಿದ್ದುದು ಜನರ

ಜ್ಞಾಪಕಕ್ಕೆ ಬಂದು ಅವರ ಕೋಪ ಮತ್ತಷ್ಟು ಹೆಚ್ಚಾಯಿತು. ಅವರು ದಡಬಡನೆ ಒಬ್ಬರಾದ ಮೇಲೊಬ್ಬರು ಮನೆಯೊಳಕ್ಕೆ ನುಗ್ಗಿದರು. ಆಯ್ಯು ಮಾತನಾಡಲಿಲ್ಲ. "ಬೇಕಾದವರು ಬೇಕಾದುದನ್ನು ತೆಗೆದುಕೊಳ್ಳಲಿ" ಎಂದು ಸುಮ್ಮನಾದನು. ಅವನ ಹೆಂಡತಿಯೂ ಇಬ್ಬರೂ ಮಕ್ಕಳೂ ಹಾಸಿಗೆಯ ಮೇಲೆ ಎದ್ದು ಕುಳಿತಿದ್ದರು. ನಾಟಕದಲ್ಲಿ ಬರುವ ರಾಕ್ಷಸರ ಪಾತ್ರಗಳಂತೆ ಕತ್ತಿಗಳನ್ನೂ ಮಚ್ಚುಗಳನ್ನೂ ಹಿಡಿದುಕೊಂಡು ಒಳಕ್ಕೆ ನುಗ್ಗಿದ ಆ ಪಂಜಿನ ಕಳ್ಳರನ್ನು ನೋಡಿ ಹುಡುಗರೆರಡೂ ಕಿಟ್ಟನೆ ಕಿರಿಚಿದುವು. ಅಯ್ಯುವಿಗೆ ಭಯವುಂಟಾಗಿತ್ತು. ಆದರೆ ಅವನಿಗುಂಟಾಗಿದ್ದ ಭಯ ಅವನಿಗೋಸ್ಕರ ಅಲ್ಲ. ತನ್ನ ಹೆಂಡತಿ ಮಕ್ಕಳಿಗಾಗಿ. ಬೂತಯ್ಯನವರ ಕಾಲದಲ್ಲೇ ರೈತರು ಎಷ್ಟೋ ಸಲ ಮನೆಯೊಳಕ್ಕೆ ನುಗ್ಗಬಹುದೆಂದು ಅವನು ಯೋಚಿಸಿದ್ದನು. ಒಂದೆರಡು ಸಲ ಇವರು ಯಾಕೆ ನುಗ್ಗಲಿಲ್ಲವೆಂದೂ ಆಶ್ಚರ್ಯಪಟ್ಟಿದ್ದನು. ಆದರೆ ಈಚೆಗೆ ಏಳು-ಎಂಟು ವರ್ಷಗಳಿಂದ ಅವನಿಗೆ ಆ ಭಯ ತಪ್ಪಿತು. ಈಗ ಅದು ಇದ್ದಕ್ಕಿದ್ದಂತೆ ಈ ರೂಪಕ್ಕೆ ಬಂದುದರಿಂದ ಆತನಿಗೆ ಏನೂ ತೋಚದಾಯಿತು. ಅವನು "ಆಗಲಿ ನೋಡೋಣ" ಎಂದುಕೊಂಡು ಸುಮ್ಮನೆ ಕುಳಿತುಕೊಂಡನು. ಬಂದಿದ್ದವರು ಸಿಕ್ಕಿದುದನ್ನೆಲ್ಲಾ ಲೂಟಿ ಮಾಡಿದರು. ಮನೆಯಲ್ಲಿದ್ದ ಸೀರೆ ಪಂಚೆಗಳನ್ನೆಲ್ಲಾ ತೆಗೆದುಕೊಂಡರು. ಪೆಟ್ಟಿಗೆಗಳನ್ನೆಲ್ಲಾ ಒಡೆದು ಇದ್ದ ಸಾಮಾನುಗಳನ್ನೆಲ್ಲಾ ತೆಗೆದುಕೊಂಡರು. ಕೆಲವರು ಪಾತ್ರೆಗಳನ್ನು ಸಹ ತೆಗೆದುಕೊಂಡರು. ಮನೆಯಲ್ಲಿದ್ದ ಎಲ್ಲಾ ಬೆಳ್ಳಿ ಪಾತ್ರೆಗಳೂ ಹಿತ್ತಾಳೆ ಪಾತ್ರೆಗಳೂ ರೈತರ ಪಾಲಾದವು. ಇದ್ದ ಮಡಕೆಗಳೆಲ್ಲಾ ಅವರ ದೊಣ್ಣೆಗಳಿಗೆ ಆಹುತಿಯಾದವು. ಒಬ್ಬನು ಕೂಡಲಿಯಿಂದ ಅಯ್ಯುವಿನ ಕಬ್ಬಿಣದ ಪೆಟ್ಟಿಗೆಗೆ ಒಂದು ಬಿಟ್ಟನು. ಆ ಏಟಿಗೆ ಅದು ಜಗ್ಗದುದರಿಂದ ಇನ್ನೂ ನಾಲ್ಕು-ಐದು ದರೋಡೆಕಾರರು ಕೊಡಲಿಗಳೊಂದಿಗೆ ಅದರ ಹತ್ತಿರಕ್ಕೆ ಬಂದರು. ಅಯ್ಯು ಪೆಟ್ಟಿಗೆಯ ಬೀಗದ ಕೈಯನ್ನು ಅವರ ಮುಂದೆ ಎಸೆದನು. ಅವರಿಗೆ ಬೀಗವನ್ನು ತೆಗೆಯಲು ಬಾರದುದರಿಂದ ತಾನೇ ಬೀಗವನ್ನು ತೆಗೆದುಕೊಟ್ಟನು. ಅದರಲ್ಲಿ ಕಾಗದ ಪತ್ರಗಳ ಗಂಟೂ ಕೆಲವು ಬೆಳ್ಳಿಯ ಪಾತ್ರೆಗಳೂ ಸ್ವಲ್ಪ ಹಣವೂ ಇದ್ದಿತು. ಕಳ್ಳರು ಎಲ್ಲವನ್ನೂ ತೆಗೆದುಕೊಂಡರು. ಅಯ್ಯುವಿನ ಹೆಂಡತಿಯ ಕೈಯಲ್ಲಿದ್ದ ಬಳೆಗಳನ್ನೂ ತೆಗೆದು ಕೆಳಕ್ಕೆ ಹಾಕಿದಳು. ಅದನ್ನು ತೆಗೆದುಕೊಳ್ಳಲು ಒಬ್ಬನು ಮುಂದಕ್ಕೆ ಬಂದನು. ಗುಳ್ಳನು ಹಾ ಎಂದು ಗದರಿಸಿದನು. ಬಳೆಗಳನ್ನು ಯಾರೂ ಮುಟ್ಟಲಿಲ್ಲ. ಗುಳ್ಳನು ಗದ್ದರಿಸಿದುದನ್ನು ಅಯ್ಯುವು ನೋಡಿ "ನೀನು ಇನ್ನೂ ನಮ್ಮವನೆ" ಎಂದುಕೊಂಡನು. ಸಾಯಂಕಾಲ ಉಪ್ಪಿನಕಾಯನ್ನು ಕೇಳಿದ್ದ ತಿಗಳನು ಒಳಕ್ಕೆ ನುಗ್ಗಿ ಉಪ್ಪಿನಕಾಯಿ ಮಡಕೆಯನ್ನೇ

ಹೊತ್ತುಕೊಂಡು ಬಂದನು. ಅದರೊಳಕ್ಕೆ ಪ್ರತಿಯೊಬ್ಬ ರೈತನೂ ಕೈ ಹಾಕಿ ಉಪ್ಪಿನಕಾಯನ್ನು ಪಾಯಸದಂತೆ ಹೀರಿ ಸುರಿದರು. ಅಯ್ಯುವಿನ ಮನೆಯಲ್ಲಿ ಯಾವ ಸಾಮಾನೂ ಉಳಿಯದಂತೆ ರಾಗಿ ಭತ್ತ ಮೊದಲುಗೊಂಡು ರೈತರು ಎಲ್ಲವನ್ನೂ ಲೂಟಿ ಮಾಡಿ ತಮ್ಮ ತಮ್ಮ ಮನೆಗಳಿಗೆ ಸಾಗಿಸಿಬಿಟ್ಟರು. ಅಯ್ಯು ಎಲ್ಲವನ್ನೂ ನೋಡುವ ಮಾತನಾಡದೆ ಕುಳಿತಿದ್ದನು. ಅವನು ಒಂದೇ ಒಂದು ಮಾತನ್ನಾಡಿದ್ದರೂ ಆ ರಾಕ್ಷಸರು ಅವನನ್ನು ಕತ್ತರಿಸಿ ಹಾಕುತ್ತಿದ್ದುದರಲ್ಲಿ ಸಂದೇಹವಿರಲಿಲ್ಲ.

ಆದರೆ ಗುಳ್ಳನೂ ಕೂಡ ನಿರೀಕ್ಷಿಸದಿದ್ದ ಒಂದು ಕೆಲಸ ನಡೆದುಹೋಯಿತು. ಅವರು ದನದ ಕೊಟ್ಟಿಗೆಯನ್ನು ಲೂಟಿ ಮಾಡುತ್ತಿರುವಾಗ ಲಾಂದ್ರವು ಕೆಳಕ್ಕೆ ಉರುಳಿ ಸೀಮೆ ಎಣ್ಣೆ ಚೆಲ್ಲಿ ಹುಲ್ಲಿಗೆ ಹತ್ತಿಕೊಂಡಿತು. ಒಂದೇ ನಿಮಿಷದಲ್ಲಿ ಅದು ಗೋದಲಿಕೆಯಿಂದ ಗೋದಲಿಕೆಗೆ ಹರಡಿ ಕೊಟ್ಟಿಗೆಯಲ್ಲಿ ಸಾವಿರಾರು ದೀವಟಿಗೆಗಳ ಪ್ರಕಾಶವಾಯಿತು. ಹೋಹೋ ಎನ್ನುವುದರೊಳಗಾಗಿ ಕೊಟ್ಟಿಗೆಯ ಬೆಂಕಿ ಸೂರಿಗೆ ತಗಲಿ ಹರಡಲು ಮೊದಲಾಯಿತು. ದನದ ಕೊಟ್ಟಿಗೆಯ ಮುಂಭಾಗವೇ ಮನೆಯಾಗಿದ್ದುದರಿಂದ ಹತ್ತು-ಹದಿನೈದು ನಿಮಿಷಗಳಲ್ಲಿ ಉರಿಯು ಮನೆಯ ಸೂರಿಗೆ ತಗಲಿ ಗಳುಗಳೆಲ್ಲಾ ಛಟಛಟನೆ ಬೇಯಲು ಪ್ರಾರಂಭವಾದುವು. ಬೆಂಕಿ ಆಕಸ್ಮಿಕವಾಗಿ ಉಂಟಾಯಿತೆಂಬುದು ಅಯ್ಯುವಿಗೂ ಗುಳ್ಳನಿಗೂ ತಿಳಿಯಲಿಲ್ಲ. ದರೋಡೆಕೋರರೇ ಇದನ್ನೂ ಮಾಡಿದ್ದಾರೆಂದೂ ಅವರು ತಿಳಿದರು. ಈ ಕಾರಣದಿಂದ ಮನೆಯು ಉರಿಯುತ್ತಿದ್ದರೂ ಹೊರಕ್ಕೆ ಹೊರಡಲು ಅಯ್ಯುವಿಗೆ ಧೈರ್ಯವಾಗಲಿಲ್ಲ. ತನ್ನ ಜತೆಯಲ್ಲಿ ಹೆಂಡತಿ ಮಕ್ಕಳೂ ಇರುವರಲ್ಲಾ ಎಂಬುದೇ ಅವನ ಪರಿತಾಪವಾಗಿತ್ತು. ನಾವು ಹೊರಕ್ಕೆ ಹೊರಟರೆ ಆ ಹೆಂಡಕುಡುಕರು ಎಲ್ಲಿ ತಡೆಯುವರೋ, ನಮ್ಮನ್ನು ಇಲ್ಲೇ ಬೇಯಿಸಬೇಕೆಂಬುದೇ ಅವರ ಯೋಚನೆಯೋ ಎಂದು ಅಯ್ಯು ಹೆದರಿದನು. ಉರಿ ಜೋರಾದುದನ್ನು ಕಂಡಕೂಡಲೇ ರೈತರಿಗೆ ಗಾಬರಿಯಾಯಿತು. ಅವರು ಕಳ್ಳತನಕ್ಕಿಂತ ಹೆಚ್ಚಾಗಿ ಲೂಟಿಗೂ ಸೇಡಿಗೂ ಬಂದಿದ್ದರು. ಪತ್ರಗಳ ಗಂಟನ್ನು ಕದಿಯುವುದೇ ಅವರ ಮುಖ್ಯ ಉದ್ದೇಶವಾಗಿತ್ತು, ಮನೆ ಸುಡುವುದೂ ಎಂದಿಗೂ ಅವರ ಉದ್ದೇಶವಾಗಿರಲಿಲ್ಲ. ಆಕಸ್ಮಿಕವಾಗಿ ಬೆಂಕಿ ಹತ್ತಿದುದನ್ನು ಕಂಡು ರೈತರು ಒಬ್ಬರೊಂದಿಗೊಬ್ಬರು ಹೇಳದೆ ಕೇಳದೆ ಅಯ್ಯುವಿನ ಮನೆಯಿಂದ ಜಾರಿದರು. ಅನಂತರ ಅಯ್ಯುವು ಭಯದಿಂದ ಮಂಕಾಗಿದ್ದ ಹೆಂಡತಿ ಮಕ್ಕಳನ್ನು ಕರೆದುಕೊಂಡು ಬಂದು ಮನೆಯ ಹೊರಗಡೆ ಕೂರಿಸಿ ದನದ ಕೊಟ್ಟಿಗೆಗೆ ಹೋಗಿ ದನಗಳ ಹಗ್ಗವನ್ನು ಬಿಚ್ಚಿ ಓಡಿಸಿದನು. ಸಾಧಾರಣವಾದ ಕಾಲವಾಗಿ

ಊರವರೆಲ್ಲಾ ಸೇರಿದ್ದರೆ ಬೆಂಕಿಯನ್ನು ಆರಿಸುವುದಕ್ಕೆ ಕಷ್ಟವಾಗುತ್ತಿರಲಿಲ್ಲ. ಆದರೆ ಆಗ ಅಯ್ಯು ಒಬ್ಬನೇ ಆದುದರಿಂದ ಅವನು ಏನನ್ನೂ ಮಾಡದೆ ಉರಿಯನ್ನು ನೋಡುತ್ತಾ ಸುಮ್ಮನೆ ಕುಳಿತಿದ್ದನು. ಬೆಳಗಿನ ಜಾವದ ಹೊತ್ತಿಗೆ ಸೂರು, ತೊಲೆ, ಕಂಬ ಎಲ್ಲಾ ಸುಟ್ಟು ಭಸ್ಮವಾಗಿ ಹೋಯಿತು. ಇಲಿಗಳೂ ಹೆಗ್ಗಣಗಳೂ ರಾಶಿರಾಶಿಯಾಗಿ ಬೆಂದು ಹೋದುವು. ಕಣಜದಲ್ಲಿ ಉಳಿದಿದ್ದ ಅಲ್ಪಸ್ವಲ್ಪ ಭತ್ತವು ಅರ್ಧಗಂಟೆಯ ಕಾಲ ಪಟಪಟನೆ ಸಿಡಿಯಿತು. ಆ ರಾತ್ರಿ ಮಾರಿ ಜಾತ್ರೆ ನಡೆಯಲೇ ಇಲ್ಲ. ಕೋಣಗಳೆಲ್ಲಾ ಉಳಿದುಕೊಂಡೇ ಬಿಟ್ಟುವು. ಅಯ್ಯುವಿನ ಮನೆಗೆ ಬೆಂಕಿ ಬಿದ್ದುದರಿಂದ ರೈತರೆಲ್ಲಾ ಹೆದರಿ ಮನೆಯಲ್ಲಿಯೇ ಅಡಗಿಕೊಂಡು ಯೋಚಿಸತೊಡಗಿದರು. ಮೊದಲು ಗೊತ್ತು ಮಾಡಿಕೊಳ್ಳದೆ ಇದ್ದ ಆ ಒಂದು ಕೆಲಸ ನಡೆದುದರಿಂದ ಅವರ ಧೈರ್ಯವೆಲ್ಲಾ ಕರಗಿ ನೀರಾಗಿ ಹೋಗಿತ್ತು.

ರೈತರೆಲ್ಲಾ ಒಗ್ಗಟ್ಟಾಗಿ "ಗಡ್ಡ ಕಿತ್ತರೂ ಬಾಯಿ ಬಿಡೆ" ಎಂದಿದ್ದರೂ ಹೋಬಳಿಯ ಪೋಲಿಸ್ ಸ್ಟೇಷನ್ನಿಗೆ ಬೆಳಿಗ್ಗೆ ವರ್ತಮಾನ ತಿಳಿಯಿತು. ದಫೇದಾರರು ಪೋಲಿಸ್ ಸೂಪರಿಂಟೆಂಡೆಂಟರಿಗೆ ತಿಳಿಸಿದರು; ಜಾಲಹಳ್ಳಿಯಲ್ಲಿ ದೊಡ್ಡ ದೊಂಬಿ ನಡೆದಿದೆ ಎಂದು. ಪೋಲಿಸ್ ಇನಿಸ್ಪೆಕ್ಟರು ಅನೇಕ "ಕನಿಷ್ಟಬಿಲ್ಲೆ" ಗಳೊಂದಿಗೆ ಅಲ್ಲಿಗೆ ಬಂದರು. ಪೋಲಿಸಿನ ಪರಿವಾರ ದೇವತೆಗಳೆಲ್ಲಾ ತಮ್ಮ ಕೈ ಬೆಚ್ಚಗಾಗುವುದೆಂದು ನಂಬಿದ್ದರು. "ದೊಂಬಿ; ಒಬ್ಬೊಬ್ಬನಿಗೆ ಎಂಟು ವರ್ಷ, ಹತ್ತು ವರ್ಷ ಸಜಾ ಬಿಗಿಸುತ್ತೇವೆ" ಎಂದು ಅರಿವೆಕಾಲುಗಳು ರೈತರೊಂದಿಗೆ ಪಟಾಪಟಿಯನ್ನು ಕೊಚ್ಚುತ್ತಿದ್ದರು. ಪೋಲಿಸಿನವರು ಗುಳ್ಳನನ್ನೂ ಗ್ರಾಮದ ಪಟೇಲನನ್ನೂ ಇತರ ಮೂರು ನಾಲ್ಕು ಮಂದಿ ಅಳ್ಳೆದೆಯವರನ್ನೂ ಹಿಡಿದು ಹುಣಿಸೆಹಣ್ಣನ್ನು ಇಡಿಯುವಂತೆ ಚೆನ್ನಾಗಿ ಇಡಿದರು. ಗುಳ್ಳನು ಪೋಲಿಸಿನವರ ಒದೆತಕ್ಕೆ ಜಗ್ಗಲಿಲ್ಲ. ಆದರೆ ಪಟೇಲನೂ ಇತರ ಅಳ್ಳೆದೆಯ ತಿಗಳರೂ ಹೆದರಿ ಹಣ್ಣಾದರು. ಅವರಿಗೆ ಬಿದ್ದ ಏಟುಗಳು ರಾತ್ರಿ ಕತ್ತಿ ಕಠಾರಿಗಳೊಂದಿಗೆ ಹೊರಟಿದ್ದ ದಸ್ಯುಗಳ ಎದೆಯನ್ನು ನಡುಗಿಸಿತು. ಪೋಲಿಸು ಇನಿಸ್ಪೆಕ್ಟರು ಊರವರನ್ನೆಲ್ಲಾ ಸಾಲಾಗಿ ನಿಲ್ಲಿಸಿ ಅಯ್ಯುವಿಗೆ ಹೇಳಿ ಕಳುಹಿಸಿದರು. ಅಯ್ಯುವು ಬಂದ ಕೂಡಲೇ ಇನಿಸ್ಪೆಕ್ಟರು "ಈ ಠಕ್ಕರಲ್ಲಿ ನಿಮ್ಮ ಮನೆ ಸುಟ್ಟವರು ಯಾರು ಗುರುತಿಸಿ?" ಎಂದರು. ಅಯ್ಯುವು ಎಂದಿನಿಂದಲೂ ರೈತರಾಗಿದ್ದ ಮೊದಲ ರಾತ್ರಿ ಕತ್ತಿ ಕೊಡಲಿಗಳೊಡನೆ ತನ್ನ ಮನೆಗೆ ನುಗ್ಗಿದ್ದ ಹೆದರಿದ್ದ ತನ್ನ ನೂರು ರೈತರನ್ನು ನೋಡಿದನು. ಮೊದಲರಾತ್ರಿ ತನ್ನ ಮನೆಗೆ ನುಗ್ಗಿದಾಗ ಅವರೆಲ್ಲ ಪಿಂಡಾರೆಯವರಂತೆ ಕಂಡಿದ್ದರೂ ಉದ್ರೇಕ ಇಳಿದ ಮೇಲೆ ಅತ್ಯಂತವಾಗಿ ಹೆದರಿದ್ದ ಅವರು ತನ್ನಂತೆಯೇ ಬಡಪ್ರಾಣಿಗಳಾಗಿ

ತೋರಿದರು. ರೈತರ ಒಬ್ಬರ ಮುಖದಲ್ಲೂ ಉತ್ಸಾಹವಿರಲಿಲ್ಲ. “ಇದೊಂದು ಸಲ ತಪ್ಪಿಸಿಕೊಂಡರೆ ಸಾಕು. ಮುಂದೆ ಪ್ರಾಣ ಹೋದರೂ ಇಂತಹ ಭಂಡ ಬಾಳನ್ನು ಬಾಳಬಾರದು, ದೇವರೇ !” ಎಂದು ಅವರ ದೈನ್ಯದ ದೃಷ್ಟಿ ಹೇಳುತ್ತಿದ್ದಿತು. ಅಯ್ಯುವು ಗುಳ್ಳನ ಮುಖವನ್ನು ನೋಡಿದನು. ಅದು ಮೊದಲಿನಂತೆ ಕಠೋರವೂ ನಿಷ್ಠುರವೂ ಆಗಿದ್ದಿತು. ಅಲ್ಲಿ ಪಶ್ಚಾತ್ತಾಪದ ಸೂಚನೆ ಏನೂ ತೋರಲಿಲ್ಲ. ಅಯ್ಯುವು ನಿಶ್ಚಯಕ್ಕೆ ಬರಲು ಅದೇ ಸಾಕಾಯಿತು. “ಈ ಬಾರಿ ಜೈಲು ಮಣ್ಣು ಹೊರೋದೆ ನಮ್ಮ ಹಣೆಬರ್ಯ; ಇಷ್ಟಾಳಿಗೂ ಬೇಡಿ ಬಿಗಿಸೋದ್ನ ಅಯ್ಯ ಬಿಡ್ತಾನ್ಯೆ” ಎಂದುಕೊಂಡು ರೈತರು ಅಯ್ಯುವು ತಮ್ಮನ್ನು ಸರ್ಕಾರಕ್ಕೆ ದೂರುವುದನ್ನು ಕೇಳಿ, ಬಂದುದನ್ನು ಅನುಭವಿಸಲು ಸಿದ್ಧರಾದರು. ಅಯ್ಯುವಿನ ಮನಸ್ಸಿನಲ್ಲಿ ಯೋಚನೆ ಹೀಗೆ ನಡೆದಿತ್ತು. “ನನ್ನ ಮನೆಯೇನೋ ಸುಟ್ಟು ಬೂದಿಯಾಯಿತು. ಆದರೆ ಪ್ರಾಣ ಉಳಿದುಕೊಂಡಿತು. ಇಂತಹ ಮನೆ ನೂರಾರು ಕಟ್ಟಬಹುದು. ಆದರೆ ಇವರು ಜೈಲಿಗೆ ಹೋದರೆ ಆಮೇಲೆ ಅದನ್ನು ತಿದ್ದುವುದು ಸಾಧ್ಯವಿಲ್ಲ. ನನ್ನ ಪತ್ರಗಳನ್ನೆಲ್ಲಾ ಕದ್ದಿದ್ದಾರೆ. ಹೋಗಲಿ. ಇವರ ಹಣದಿಂದಲೇ ನಮ್ಮ ಅಪ್ಪ ಈ ಮನೆ ಕಟ್ಟಿದ್ದು. ಮುಂದೆ ನಾನು ಕಟ್ಟುವುದೂ ಇವರ ಹಣದಿಂದಲೇ. ಈಗ ಬ್ಯಾಂಕಿನಲ್ಲಿ ಇಟ್ಟಿರುವ ಹಣವೆಲ್ಲಾ ಇವರದೆ. ಸುತ್ತಲೂ ಸೇರಿರುವ ಸಾವಿರಾರು ರೂಪಾಯಿ ಕಂದಾಯದ ಜಮೀನುಗಳೆಲ್ಲಾ ಇವರದೆ. ಈಗ ಮಾತ್ರ ಇವರನ್ನು ನಾನು ಬಿಟ್ಟರೆ ಗುಳ್ಳನನ್ನು ಹಳ್ಳಿಯವರನ್ನೂ ಎಂದಿಗೂ ತಿದ್ದಲು ಸಾಧ್ಯವಿಲ್ಲ. ಈ ವೈರ ಎಂದಿಗೂ ಹೋಗತಕ್ಕದ್ದಲ್ಲ. ಎಲ್ಲರ ಮೇಲೂ ಕೇಸು ಮಾಡಿ ಏಳು-ಎಂಟು ವರ್ಷ ಸಜಾ ಬಿಗಿಸಿದರೆ ಊರಿನ ಪುಂಡು ಕಡಿಮೆಯಾಗುತ್ತೆ ನಿಜ. ಆದರೆ ಅದರಿಂದ ನಮ್ಮಿಬ್ಬರ ದ್ವೇಷವೂ ಶಾಂತವಾಗುವುದಿಲ್ಲ. ಈಗ ನಾನು ಇವರನ್ನು ಬಿಟ್ಟರೆ ಮುಂದೆ ಇವರು ಒಳ್ಳೆಯವರಾಗುವುದು ಖಂಡಿತ. ಇವರ ಮನಸ್ಸನ್ನು ನಾನು ಈಗ ಪರಿವರ್ತನೆ ಮಾಡಿಕೊಂಡರೆ ಹೋದ ನಷ್ಟವೆಲ್ಲಾ ಬಂದಂತೆ. ಗುಳ್ಳ ರಾತ್ರಿ ಲೂಟಿ ಮಾಡುವಾಗ ನನ್ನ ಹೆಂಡತಿಯ ಒಡವೆಗಳನ್ನು ಮುಟ್ಟಲಿಲ್ಲ. ನಾನು ಅವನ ಹೆಂಡತಿಯನ್ನು ಉಳಿಸಿದುದು ಅವನ ಜ್ಞಾಪಕಕ್ಕೆ ಬಂದಿರಬಹುದು. ಅದರಿಂದಲೇ ಇವನ ಹೃದಯ ಪೂರ್ಣವಾಗಿ ಒಣಗಿಲ್ಲ. ಇವನನ್ನು ತಿದ್ದಬಹುದೆಂದುಕೊಂಡೆ. ಪ್ರೀತಿಯನ್ನು ತೋರಿಸಿದರೆ ದುಷ್ಟನಾದ ಮನುಷ್ಯನೂ ಸಾತ್ವಿಕನಾಗುತ್ತಾನೆ. ನಮ್ಮ ತಂದೆ ಅವತ್ತು ಎಸೆದಿದ್ದ ಕಲ್ಲು ಇವತ್ತು ಹಿಂದಿರುಗಿತು. ಇದನ್ನು ಹೂತುಬಿಡಬೇಕು. ಹಾಗಲ್ಲದೆ ನಾನು ಇದನ್ನು ಮತ್ತೆ ಎಸೆದರೆ ಇದರ ಎರಡರಷ್ಟು ಜೋರಾಗಿ ನನ್ನ ಮಕ್ಕಳಿಗೆ ತಿರುಗಿ ಹೊಡೆಯುವುದು.

ಊರನ್ನೆಲ್ಲಾ ನನ್ನವರನ್ನಾಗಿ ಮಾಡಲು ಇದೇ ಸಮಯ. ನಾವು ಮನುಷ್ಯನಿಗೆ ಒಳ್ಳೆಯದನ್ನು ಮಾಡಿದರೆ ಅವನಲ್ಲಿರುವ ಒಳ್ಳೆಯ ಸ್ವಭಾವವೇ ಅಭಿವೃದ್ಧಿಯಾಗುತ್ತದೆ.

ಅಯ್ಯುವು ಇನಿಸ್ಪೆಕ್ಟರಿಗೆ "ನನ್ನ ಮನೆಗೆ ಯಾರೂ ನುಗ್ಗಿರಲಿಲ್ಲ" ಎಂದನು. ಇನಿಸ್ಪೆಕ್ಟರು ಬೆಚ್ಚಿಬಿದ್ದರು. ತಿಗಳರೂ ಒಕ್ಕಲಿಗರೂ ತಮ್ಮ ಕಿವಿಯನ್ನೇ ತಾವು ನಂಬದೆ ಹೋದರು. ಇನಿಸ್ಪೆಕ್ಟರು "ಏನು?" ಎಂಬುದಾಗಿ ಗದ್ದರಿಸಿದರು. ಅಯ್ಯು ಮತ್ತೆಮೊದಲು ಹೇಳಿದ ಮಾತನ್ನೇ ಹೇಳಿದನು. ಇನಿಸ್ಪೆಕ್ಟರು, ತಾವು ಸಿದ್ಧಪಡಿಸಿದ್ದ ಎಲ್ಲಾ ಮೊಖದ್ದಮೆಗಳೂ, ಇಂತಹ ದೊಂಬಿಯನ್ನು ಮಟ್ಟ ಹಾಕಿದುದಕ್ಕೆ ಬರಬೇಕಾಗಿದ್ದ ಬಡ್ತಿ ಇತ್ಯಾದಿಗಳೂ ಈ ಮಂಕನ ಮಾತಿನಿಂದ ಗಾಳಿಗೆ ತೂರಿ ಹೋದವೆಂದು ತಿಳಿದುಕೊಂಡರು. ಇನಿಸ್ಪೆಕ್ಟರಿಗೆ ಕೋಪವೂ ಹತ್ತಿತು. ಅವರು "ಹಾಗಾದರೆ ನಿನ್ನ ಮನೆ ಸುಟ್ಟವರು ಯಾರು?" ಎಂದು ಗದ್ದರಿಸಿದರು. ಅಯ್ಯುವು "ದನದ ಕೊಟ್ಟಿಗೆಯಲ್ಲಿ ಆಳು ಲಾಂದ್ರವನ್ನು ಮಡಗಿದ್ದ. ಎತ್ತು ಅದನ್ನು ಉರುಳಿಸಿತು. ಬೆಂಕಿ ಹುಲ್ಲಿಗೆ ಹತ್ತಿಕೊಂಡು ಮನೆ ಸುಟ್ಟುಹೋಯಿತು" ಎಂದನು. ಅಯ್ಯುವಿನ ಮುಂದೆ ಇನಿಸ್ಪೆಕ್ಟರ ಆಟ ಸಾಗಲಿಲ್ಲ. ಅವರು ಅದೇ ಮಧ್ಯಾಹ್ನ ಅರಿವೆಕಾಲುಗಳನ್ನೆಲ್ಲಾ ಕರೆದುಕೊಂಡು ಅಯ್ಯುವಿನ ಸ್ವಭಾವಕ್ಕೆ ಆಶ್ಚರ್ಯಪಡುತ್ತಾ "ಈ ಸಲ ಬಚಾವಾದರೆ ಈ ಪಟಿಂಗರು ಅವನನ್ನು ಖೂನಿಮಾಡುವುದು ಖಂಡಿತ" ಎಂದುಕೊಂಡು ಹೊರಟುಹೋದರು. ಗುಳ್ಳ ಮನೆಗೆ ಹೋಗುತ್ತಿರುವಾಗ ಅಯ್ಯುವು ಅವನನ್ನು ನೋಡಿದನು. ಗುಳ್ಳನ ಮುಖದಲ್ಲಿ ಸ್ವಲ್ಪವೂ ದ್ವೇಷವಿರಲಿಲ್ಲ. ಆಶ್ಚರ್ಯವು ಮೂಡಿ ಮಾಯವಾಗಿ ಕೃತಜ್ಞತೆಯೂ ದೈನ್ಯವೂ ಅಲ್ಲಿ ತುಂಬಿದ್ದವು. ಗುಳ್ಳನನ್ನು ಆ ರೀತಿ ಅಯ್ಯುವು ಎಂದೂ ಕಂಡಿರಲಿಲ್ಲ. ಗುಳ್ಳನ ಹೃದಯದಲ್ಲಿ ಯಾವುದೋ ಒಂದು ಸತ್ಪ್ರೇರಣೆಯು ವಿಕಾಸ ಹೊಂದಿದ್ದಂತೆ ತೋರುತ್ತಿದ್ದಿತು. ಅವನಲ್ಲಿದ್ದ ದ್ವೇಷವು ನೂರು ವರ್ಷ ಅವನಿಗೆ ಸಜಾ ಬಿಗಿದಿದ್ದರೂ ಹೋಗುತ್ತಿರಲಿಲ್ಲ. ಆದರೆ ಅಯ್ಯುವಿನ ಒಂದೇ ಒಂದು ಕೆಲಸದಿಂದ, "ಮನುಷ್ಯ ಸ್ವಭಾವ ಕೊನೆಯಲ್ಲಿ ಒಳ್ಳೆಯದೇ" ಎಂಬ ಅವನ ದೃಢವಾದ ನಂಬಿಕೆಯಿಂದ ಆ ದ್ವೇಷವು ಸೂರ್ಯನ ಎದುರಿನಲ್ಲಿ ಇಬ್ಬನಿಯಂತೆ ಕರಗಿ ಹೋಯಿತು. ಅಯ್ಯು ಆಗ "ಇನ್ನು ನೀನು ನಮ್ಮವನೆ" ಎಂದುಕೊಂಡನು. ಇನಿಸ್ಪೆಕ್ಟರ ವಿಚಾರಣೆ ನೋಡಲು ಊರಿನ ಎಲ್ಲಾ ಗಂಡು ಹೆಣ್ಣು ಮಕ್ಕಳೂ ಸೇರಿದ್ದರು. ತನ್ನ ಒಂದು ಮಾತಿನಿಂದ ಅವರಿಗೆ ಉಂಟಾದ ಸಂತೋಷವನ್ನು ಕಂಡು ಅಯ್ಯುವಿಗೂ ಆನಂದವಾಯಿತು. ಊರಿಗೆ ಊರೇ ಆನಂದದಲ್ಲಿ ತೇಲಾಡುತ್ತಿದ್ದಿತು. ಇಂತಹ ನಲ್ಮೆಯನ್ನು ಅವರಿಗೆ ಉಂಟುಮಾಡಲು ತನಗೆ ಸಾಧ್ಯವಾಯಿತಲ್ಲಾ ಎಂಬುದಾಗಿ ಅಯ್ಯುವಿನ ಮನಸ್ಸಿಗೂ ಬಹಳ ತೃಪ್ತಿಯುಂಟಾಗಿದ್ದಿತು.

ಗುಳ್ಳನು ಮೊದಲುಗೊಂಡು ಊರಿನ ಯಾವ ರೈತನಿಗೂ ಅಯ್ಯುವಿನ ಎದುರಿಗೇ ಬರಲು ನಾಚಿಕೆಯಾಗಿದ್ದಿತು. “ಅಯ್ನೋರು ನಮ್ಮ ತಲೆ ಹೋಗುವಾಗ ತಮ್ಮ ತಲೆ ಕೊಟ್ಟುಬಿಟ್ರು” ಎಂಬುದೇ ಎಲ್ಲೆಲ್ಲೂ ಮಾತಾಗಿತ್ತು. ಆ ರಾತ್ರಿ ಬುಂಡೆಕ್ಯಾತನು ಜಾಲಹಳ್ಳಿಗೆ ಬಂದನು. ಅಯ್ಯುವಿನ ಮನೆ ಸುಟ್ಟು ನಿಂತುದನ್ನೂ ಅಯ್ಯುವು ಇನಿಸ್ಪೆಕ್ಟರಿಗೆ ಹೇಳಿದ್ದ ಮಾತನ್ನೂ ಕೇಳಿ ತನ್ನನ್ನೇ ತಾನು ತಿಂದುಕೊಳ್ಳುವಷ್ಟು ಕೋಪ ಅವನಿಗೆ ಉಂಟಾಯಿತು. “ಈ ಸಲ ಅವರು ನಿನ್ನ ಭಯದಿಂದ ನಿನ್ನ ಹೆಂಡ್ತಿ ಮಕ್ಕಳನ್ನು ಖೂನಿ ಮಾಡಲಿಲ್ಲ. ನೀನು ಇಂತಹ ಅಳ್ಳೆದೆಯವನು ಅಂತ ತಿಳಿದರೆ ಯಾವುದು ಮಾಡಿದರೂ ದಕ್ಕುತ್ತೆ ಅಂದ್ಕೊಂಡು ಮುಂದಲಸಲ ಖೂನೀನೂ ಮಾಡ್ತಾರೆ. ಇವರನ್ನು ಭಯದಲ್ಲಿ ಇಡದೆ ಹೋದರೆ ಇವರು ನಿನ್ನನ್ನು ಸುಮ್ಮನೆ ಬಿಡ್ತಾರೆ. ನಿನ್ನ ತಂದೆಯವರ ಕಾಲದಲ್ಲಿ ಒಬ್ಬ ರೈತನಾಗಲಿ ನಿಮಗೆ ಎದುರಾಗಿ ಮಾತನಾಡಿದ್ದುಂಟೇ? ಕೋರ್ಟಿನ ಭಯ ಅಂದರೆ ಅವರು ಹಾಗೆ ಇಟ್ಟಿದ್ದರು. ಇಂತಹ ಸಮಯದಲ್ಲಿ ಎಲ್ಲರಿಗೂ ಬರೆ ಎಳೆದಿದ್ದರೆ ಅವರು ಎಂದೆಂದಿಗೂ ನಿನ್ನ ತಂಟೆಗೆ ಬರುತ್ತಿರಲಿಲ್ಲ. ಈಗಲೂ ಮುಂದೆ ನಿನಗೆ ಇವರಿಂದ ಕೇಡು ತಪ್ಪಿದ್ದಲ್ಲ. ಈ ನಿನ್ನ ಸಪ್ಪೆತನದಿಂದ ನೀನು ನ್ಯಾಯದ ನಡೆಗೆ ಅಡ್ಡಬಂದೆ. ನೀನು ಹೆದರಿದೆ ಎಂದು ತಿಳಿದರೆ ಅಲ್ಲಿಗೆ ಮುಗಿಯಿತು ನಿನ್ನ ಪಾರುಪತ್ಯ. ನಿನ್ನನ್ನು ಬೇರುಸಹಿತ ಹೀರಿ ಬಿಡುತ್ತಾರೆ” ಎಂದನು. ಅಯ್ಯುವು ಅವನ ಹತ್ತಿರ ಹೆಚ್ಚಾಗಿ ವಾದ ಮಾಡಲಿಲ್ಲ. “ನೀನು ಹೇಳುವಂತೆ ಇವರು ದುಷ್ಟರು. ಆ ದೌಷ್ಟ್ಯ ಇವರಿಗೆ ನಮ್ಮ ಘಾತಕತನದಿಂದಲೇ ಉಂಟಾಗಿದೆ. ಅವರ ಮನಸ್ಸಿನ ಒಳ್ಳೆಯ ಭಾವಗಳನ್ನು ವಿಕಾಸಗೊಳಿಸಲು ನನಗೆ ತೋರಿದ ದಾರಿಯನ್ನು ನಾನು ಅನುಸರಿಸಿದೆ. ಇದರ ಪರಿಣಾಮ ನನಗೆ ಕೆಡುಕೇ ಆಗುವುದಿದ್ದರೆ ನೀನು ಹೇಳಿದ ದಾರಿಯನ್ನು ಅನುಸರಿಸಿದರೆ ಅದರ ಪರಿಣಾಮ ಇನ್ನೂ ಹೆಚ್ಚು ಕೆಡಕಾಗುತ್ತೆ. ನಮ್ಮ ಜನರಲ್ಲಿ ನಾವು ನಂಬಿಕೆಯನ್ನಿಟ್ಟರೆ ನಮಗೆಂದಿಗೂ ಕೇಡುಂಟಾಗುವುದಿಲ್ಲ” ಎಂದು ಹೇಳಿ ಸುಮ್ಮನಾದನು. ಬುಂಡೆಕ್ಯಾತನು ಅಯ್ಯುವಿಗೆ ಏನೇನೋ ಹೇಳಿ ನೋಡಿದನು. ’ರೈತರು ಕದ್ದಿರುವ ಪತ್ರಗಳೆಲ್ಲಾ ರಿಜಿಸ್ಟರ್ ಆಗಿವೆ. ಅವುಗಳ ನಕಲುಗಳನ್ನಾದರೂ ತೆಗೆದುಕೊಂಡು ದಾವಾ ಹಾಕು’ ಎಂಬುದಾಗಿ ಅವನು ಬಲಾತ್ಕರಿಸಿದನು. ಅಯ್ಯುವು “ಅವರ ದುಡ್ಡು ಅವರಿಗೇ ಸೇರಿತು. ಅವರಾಗಿಯೇ ಪತ್ರವನ್ನೋ ಹಣವನ್ನೋ ತಂದುಕೊಟ್ಟರೆ ತೆಗೆದುಕೊಳ್ಳುತ್ತೇನೆ, ಇಲ್ಲದಿದ್ದರೆ ಇಲ್ಲ” ಎಂದನು. ಕಳವಾದ ಬೆಳ್ಳಿ ಪಾತ್ರೆಗಳನ್ನಾದರೂ ತರಿಸೆಂದು ಬುಂಡೆಕ್ಯಾತನು ಹೇಳಿದುದಕ್ಕೆ ಅಯ್ಯುವು “ಅವರ ಮನೆಯಲ್ಲೂ

ಕೆಲವು ಪಾತ್ರೆಗಳಿರಲಿ" ಎಂದುಬಿಟ್ಟನು. ಬುಂಡೆಕ್ಯಾತನು "ನಿನ್ನ ಮುಂದೆ ತಲೆ ಚಚ್ಚಿಕೊಂಡರೂ ಒಂದೇ" ಎಂದುಕೊಂಡು ಸುಮ್ಮನಾದನು.

ಜಾಲಹಳ್ಳಿಯಲ್ಲಿ ಅಯ್ಯುವಿನ ಮನೆಮುಂದೆ ನದಿ ಹರಿಯುತ್ತಿದ್ದಿತೆಂದು ಮೊದಲೇ ಹೇಳಿದ್ದೇವೆ. ನದಿಯ ತೀರದಲ್ಲಿ ನದಿಯ ಪಾತ್ರಕ್ಕಿಂತಲೂ ಸ್ವಲ್ಪ ಹಳ್ಳದಲ್ಲಿ ವಿಸ್ತಾರವಾದ ಒಂದು ಬೈಲು ಇದ್ದಿತು. ಸಾವಿರಾರು ವರ್ಷಗಳ ಹಿಂದೆ ಯಾವಾಗಲೋ ಕಲ್ಪಾಂತರದಲ್ಲಿ ಪ್ರಾಯಶಃ ನದಿಯ ದಡವನ್ನು ಒಡೆದುಕೊಂಡು ಆ ಕಡೆ ಸ್ವಲ್ಪ ದೂರ ನುಗ್ಗಿ ಮತ್ತೆ ತನ್ನ ಮೊದಲಿನ ದಾರಿಯನ್ನು ಹಿಡಿದಂತೆ ತೋರುತ್ತಿದ್ದಿತು. ಬೂತಯ್ಯನವರ ಕಾಲದಲ್ಲೂ ಮಳೆಗಾಲದಲ್ಲಿ ಅಲ್ಲಿ ಸಮುದ್ರದಂತೆ ನೀರು ನುಗ್ಗಿ ಮೆಕ್ಕಲು ಮಣ್ಣನ್ನು ವಿಪರೀತವಾಗಿ ರಾಸಿ ಹಾಕಿ ಬೇಸಗೆಯಲ್ಲಿ ನೀರು ಇಂಗಿಹೋಗುತ್ತಿದ್ದಿತು. ಆ ಮೆಕ್ಕಲು ಗೊಬ್ಬರವನ್ನೂ ಒಂದೇ ಸಮನಾಗಿದ್ದ ಬಯಲನ್ನೂ ನೋಡಿ, ದುಡ್ಡು ಮಾಡುವುದರಲ್ಲಿ ಪ್ರಚಂಡರಾದ ಬೂತಯ್ಯನವರಿಗೆ ಅದರಲ್ಲಿ ಪೂರಾ ಆಸೆಯುಂಟಾಯಿತು. ಆ ಬಯಲಿನಲ್ಲಿ ವರ್ಷದಲ್ಲಿ ನಾಲ್ಕು - ಐದು ತಿಂಗಳು ಮಳೆಗಾಲದಲ್ಲಿ ಒಂದಾಳುದ್ದ - ಒಂದೂವರೆಯಾಳುದ್ದ ನೀರು ನಿಂತಿರುತ್ತಿದ್ದಿತು. ಉಳಿದ ಕಾಲದಲ್ಲಿ ಅದು ಒಣಗಿದ ನದಿಯ ಪಾತ್ರದಂತೆ ತೋರುತ್ತಿದ್ದಿತು. ತಿಗಳರೂ ಒಕ್ಕಲಿಗರೂ ನದಿಯಿಂದ ಸ್ವಲ್ಪ ಮೇಲಕ್ಕೆ ಎತ್ತರವಾದ ಅರೆಗಳ ಮೇಲೆ ಮನೆಗಳನ್ನು ಕಟ್ಟಿಕೊಂಡಿದ್ದರು. ಅವರಾರಿಗೂ ಆ ನದಿಯ ಬಯಲು ಉಪಯೋಗಕ್ಕೆ ಬರಬಹುದೆಂದು ತೋರಲಿಲ್ಲ. ಅವರಿಗೆ ಅದೂ ನದಿಯ ಪಾತ್ರವಾಗಿಯೇ ತೋರಿತು. ಆದರೆ ಹಣಸಂಪಾದನೆಯಾಗಬಹುದೆಂದು ತೋರಿದಾಗ ಬೂತಯ್ಯನವರು ನೀರಿನ ಮೇಲೆ ನಡೆದು ನೆಳಲನ್ನು ಬೇಕಾದರೂ ಹಿಡಿಯುತ್ತಿದ್ದರು. ನದಿಯ ದಡವನ್ನು ಒಡೆದುಕೊಂಡು ಬೈಲಿನ ಕಡೆಗೆ ಹರಿದ ಸ್ಥಳ ದೊಡ್ಡ ಕಾಲುವೆಯಂತೆ ಕಿರಿದಾಗಿದ್ದಿತು. ಆ ಕಿರಿಬಾಯಲ್ಲಿ ಮಳೆಗಾಲದಲ್ಲಿ ನೀರು ನುಗ್ಗಿ ವಿಸ್ತಾರವಾದ ಬಯಲನ್ನು ಕೆರೆಯಂತೆ ತುಂಬುತ್ತಿದ್ದಿತು. ಬೂತಯ್ಯನವರು ನದಿಯ ಆ ಬಾಯಿಗೆ ಕಟ್ಟೆ ಹಾಕಿ ಮಳೆಗಾಲದಲ್ಲೂ ನೀರಿನ ಪ್ರವಾಹವನ್ನು ತಡೆದು, ಯಾತದಿಂದ ತಮಗೆ ಬೇಕಾದಷ್ಟು ನೀರನ್ನು ಬಿಟ್ಟುಕೊಂಡು ಆ ಬಯಲನ್ನು ಸಾಗುವಳಿ ಮಾಡಬೇಕೆಂದು ನಿಶ್ಚಯಿಸಿದರು. ಮೊದಲು ಮೊದಲು ಬೂತಯ್ಯನವರ ಈ ಯೋಚನೆಯನ್ನು ಕೇಳಿದವರಾರೂ ಅವರು ನಿಜವಾಗಿಯೂ ನದಿಗೆ ಕಟ್ಟೆ ಹಾಕಬೇಕೆಂದು ಯೋಚಿಸುತ್ತಿರುವರೆಂದು ನಂಬಲಿಲ್ಲ. ರೈತರಂತೂ ಆ ರೀತಿ ನದಿಗೆ ಕಟ್ಟೆಯನ್ನು ಹಾಕಿ ಅದರ ದಾರಿಯನ್ನು ತಡೆದರೆ ಅದು ಒಂದಿಲ್ಲ ಒಂದು ದಿನ ಸೇಡನ್ನು ತೀರಿಸಿಕೊಂಡೇ ಬಿಡುವುದೆಂದು ಹೆದರುತ್ತಿದ್ದರು.

ಬೂತಯ್ಯನವರು ಪ್ರಕೃತಿಯ ಸೇಡಿಗೂ ಮನುಷ್ಯನ ಸೇಡಿಗೂ ಹೆದರುವವರಾಗಿರಲಿಲ್ಲ. ಅವರು ಇಂಜಿನಿಯರುಗಳನ್ನೂ ಓವರ್‌ಸಿಯರುಗಳನ್ನೂ ಕೇಳಿ ಅನೇಕ ಸಾವಿರ ರೂಪಾಯಿಗಳನ್ನು ಖರ್ಚು ಮಾಡಿ ನದಿಯು ಕವಲೊಡೆಯುತ್ತಿದ್ದ ಕಾಲುವೆ ಬಾಯಿಗೆ ಬಂದಾಗ ಕಲ್ಲಿನ ಕಟ್ಟೆಯನ್ನು ಹಾಕಿದರು. ಅದರಲ್ಲಿ ಎಂಟು-ಹತ್ತು ಯಾತಗಳನ್ನು ಇರಿಸಿದರು. ಮೊದಲು ನದಿಯ ನೀರು ನಿಲ್ಲುತ್ತಿದ್ದ ಬೈಲನ್ನೆಲ್ಲಾ ಗದ್ದೆಗಳನ್ನು ಮಾಡಿದರು. ಜಾಲಹಳ್ಳಿಯ ಸುತ್ತ ನೂರು ಮೈಲಿ ಎಲ್ಲಿ ನೋಡಿದರೂ ಅಂತರ "ತಾಕು" ದೊರೆಯುತ್ತಿರಲಿಲ್ಲ. ಜಮೀನು ಹಳ್ಳತಿಟ್ಟುಗಳಿಲ್ಲದೆ ಎಲ್ಲಿಂದ ಎಲ್ಲಿಯವರೆಗೆ ನೋಡಿದರೂ ಒಂದೇ ಸಮನಾಗಿ ಗಾಜಿನಂತೆ ತೋರುತ್ತಿದ್ದಿತು. ನದಿಯ ಆಸರೆಯಲ್ಲಿದ್ದುದರಿಂದ ಹನ್ನೆರಡು ತಿಂಗಳೂ ನೀರು ಬೇಕಾದಂತೆ ದೊರೆಯುತ್ತಿದ್ದಿತು. ಆ ವಿಶಾಲವಾದ ಬಯಲಿಗೆ "ಜಾಲಹಳ್ಳಿಯ ಕಾಡು" ಎಂದೇ ಹೆಸರಾಯಿತು. ಅಲ್ಲಿ ವರ್ಷಕ್ಕೆ ಎರಡು ಬೆಳೆ ಭತ್ತ ಸರಾಗವಾಗಿ ಬರುತ್ತಿದ್ದಿತು. ಕಬ್ಬು, ಬಾಳೆ ಅಲ್ಲಿ ಬೆಳೆಯುತ್ತಿದ್ದಂತೆ ಆ "ಪ್ರಾಂತ" ದಲ್ಲೇ ಬೆಳೆಯುತ್ತಿರಲಿಲ್ಲ. ಮಣ್ಣು ಹಿಡಿದರೆ ಹೊನ್ನು ಆಗುತ್ತಿದ್ದ ಆ ಜಮೀನು ಸಾಗುವಳಿಗೆ ಸಿಕ್ಕಿದರೆ ಸಾಕೆಂದು ರೈತರು ಹಂಬಲಿಸುತ್ತಿದ್ದರು. ಅನೇಕ ವರ್ಷಗಳಿಂದ ನದಿಯ ಮೆಕ್ಕಲು ಬಂದು ಕೂರುತ್ತಿದ್ದುದರಿಂದ ಆ ಜಮೀನಿಗೆ ಗೊಬ್ಬರವೇ ಬೇಕಿರಲಿಲ್ಲ. ವಿಭೂತಿ ಹಾಕಿಕೊಂಡು ಗದ್ದೆಯ ಮೇಲೆ ತಿರುಗದೆ ಇದ್ದರೂ ಹದಿನಾರಾಣೆಯ ಪೈರು ಬರುತ್ತಿದ್ದಿತು. ಮೊದಲು ಬೂತಯ್ಯನವರ ಸಾಹಸವನ್ನು ಹುಚ್ಚು ಸಾಹಸವೆಂದು ಹೇಳಿದ ಜಾಲಹಳ್ಳಿಯ ಎಲ್ಲಾ ರೈತರೂ ಆ ಜಮೀನನ್ನು ಸಾಗುವಳಿ ಮಾಡಿ ಅದರಲ್ಲಿ ಕಬ್ಬನ್ನೂ ಭತ್ತವನ್ನೂ ಬೆಳೆಯುತ್ತಿದ್ದರು. ಇದರಿಂದ ಬೂತಯ್ಯನವರ ಕೀರ್ತಿಯು ಹೆಚ್ಚಾಯಿತು. ಅವರ ಉತ್ಪತ್ತಿ ಒಂದಕ್ಕೆ ನಾಲ್ಕು ಆಯಿತು. ಕಟ್ಟೆಯನ್ನು ನೋಡಿದವರೆಲ್ಲಾ ಅವರ ಸಾಹಸವನ್ನು ಕೊಂಡಾಡುತ್ತಿದ್ದರು. ತರಿ ಜಮೀನಿನ ಕಂದಾಯವನ್ನು ಆ ಜಮೀನುಗಳಿಗೆ ಸರ್ಕಾರದವರು ತಗುಲಿಸಿದುದರಿಂದ ಸರ್ಕಾರದ ಉತ್ಪತ್ತಿಯೂ ಹೆಚ್ಚಾಯಿತು. ಜಮೀನಿನ ಮಧ್ಯದಲ್ಲಿದ್ದರೆ ಒಳ್ಳೆಯದೆಂದುಕೊಂಡು ಬೂತಯ್ಯನವರು ಊರೊಳಗಿದ್ದ ತಮ್ಮ ಮನೆಯನ್ನು ಬಿಟ್ಟು ಜಾಲಹಳ್ಳಿ ಕಾಡಿನಲ್ಲೇ ಒಂದು ಮನೆಯನ್ನು ಕಟ್ಟಿಕೊಂಡು ಇರತೊಡಗಿದರು. ಅಷ್ಟೇನೂ ಧನಿಕರಲ್ಲದ ಬೂತಯ್ಯನವರ ಪೂರ್ವಿಕರ ಹಳ್ಳಿಯ ಮನೆಗಿಂತ ಆ ಹೊಸ ಮನೆಯೇ ತುಂಬಾ ಚೆನ್ನಾಗಿದ್ದಿತು. ಬೂತಯ್ಯನವರು ಸಾಯುವವರೆಗೆ ಆ ಮನೆಯಲ್ಲಿಯೇ ಇದ್ದರು. ಆಗ ಊರೊಳಗೆ ಇದ್ದ ಮನೆಯು ದನದ ಕೊಟ್ಟಿಗೆಯಾಗಿದ್ದಿತು. ಬೂತಯ್ಯನವರು ಸತ್ತ ನಂತರ ಅಯ್ಯುವು ಹಳ್ಳಿಯೊಳಗೆ ರೈತರ ಮಧ್ಯದಲ್ಲೇ ಇರುವುದು ಒಳ್ಳೆಯದೆಂದುಕೊಂಡು ಗದ್ದೆ ಬಯಲಿನ

ಮನೆಯಿಂದ ಊರೊಳಗಿನ ಮನೆಗೆ ಬಂದಿದ್ದನು. ರೈತರಲ್ಲಿ ಕೆಲವರೂ ಅಲ್ಲೇ ಗುಡಿಸಲುಗಳನ್ನು ಹಾಕಿಕೊಂಡಿದ್ದವರು ಅಯ್ಯುವಿನ ಜತೆಯಲ್ಲಿ ಊರೊಳಕ್ಕೆ ಬಂದರು. ತನ್ನ ಮನೆಯ ರೈತರ ಕೋಪಕ್ಕೆ ಆಹುತಿಯಾದ ಮಾರನೆಯ ದಿನವೇ ಅಯ್ಯುವು ಮತ್ತೆ ಗದ್ದೆ ಬಯಲಿನ ಹಿಂದಲ ಮನೆಗೆ ಹೋದನು. ಊರೊಳಗೆ ತನ್ನ ಹಳೆಯ ಮನೆ "ರಿಪೇರಿ"ಯಾದ ನಂತರ ಮತ್ತೆ ಅಲ್ಲಿಗೇ ಬರಬೇಕೆಂಬುದು ಅವನ ಉದ್ದೇಶವಾಗಿತ್ತು.

ಬೂತಯ್ಯನವರು ಜಾಲಹಳ್ಳಿ ಕಾಡನ್ನು ಸೃಷ್ಟಿಸಿ ಕಾವೇರಿಗೆ ಕಟ್ಟೆಯನ್ನು ಹಾಕಿದುದು ಸರಿಯಷ್ಟೆ, ಮಳೆಗಾಲದಲ್ಲಿ ನದಿಯ ಪ್ರವಾಹವು ಭೋರ್ಗರೆಯುತ್ತಾ ಕಟ್ಟೆಗೆ ರಾಚುತ್ತಿದ್ದಿತು. ಮಳೆಗಾಲ ನಾಲ್ಕು ತಿಂಗಳೂ ಒಂದು ಗಳಿಗೆಯೂ ಬಿಡುವಿಲ್ಲದೆ ಅಲೆಗಳೂ ಸುಳಿಗಳೂ ಕಲ್ಲಿನ ಕಟ್ಟೆಯನ್ನು ಬಡಿಯುತ್ತಿದ್ದುವು. ಬಿರುಗಾಳಿಯು ಯಾವಾಗಲೂ ಕಿರೋ ಎಂಬುದಾಗಿ ಕೂಗುತ್ತಿದ್ದಿತು. ರಾತ್ರಿಯ ಕಾಲದಲ್ಲಿ ಸುತ್ತ ಅನೇಕ ಮೈಲಿಗಳವರೆಗೆ ನದಿಯು ಕಟ್ಟೆಯನ್ನು ಬಡಿಯುವ ಸದ್ದು ಕೇಳಿಸುತ್ತಿದ್ದಿತು. ಬೂತಯ್ಯನವರು ಕಲ್ಪಾಂತದವರೆಗೆ ಕಟ್ಟೆಗೆ ಭಯವಿಲ್ಲವೆಂದು ಹೇಳುತ್ತಿದ್ದರೂ, ನದಿಯ ಹೊಡೆತವನ್ನು ಜ್ಞಾಪಿಸಿಕೊಂಡ ಕೂಡಲೇ ಮಳೆಗಾಲ ಪೂರ್ತಿಯಾಗುವವರೆಗೆ ಯಾರಿಗಾದರೂ ಆ ಬಯಲಿನಲ್ಲಿ ಇರಲು ಎದೆಯು ನಡುಗುತ್ತಿದ್ದಿತು. ಕಟ್ಟೆ ಏನಾದರೂ ಒಡೆದಿದ್ದರೆ ಹತ್ತೇ ನಿಮಿಷಗಳೊಳಗೆ ನದಿಯ ಪ್ರವಾಹವೆಲ್ಲಾ ಪೂರ್ಣವಾಗಿ ಆ ಬಯಲಿಗೆ ನುಗ್ಗಿ ಅದನ್ನು ಅನೇಕ ತಿಂಗಳುಗಳವರೆಗೆ ಒಂದೂವರೆ ಆಳುದ್ದ ನೀರಿನಲ್ಲಿ ಮುಳುಗಿಸುತ್ತಿದ್ದಿತು. ಬೂತಯ್ಯನವರ ಹೆಂಡತಿ ಬದುಕಿದ್ದಾಗ ಅವರಿಗೆ ಆ ಕಟ್ಟೆಯ ಭಯ ಬಹಳವಾಗಿತ್ತು. ನದಿಯ ಬಾಯಿನ ತುತ್ತನ್ನು ಕಸುಕೊಂಡುದರಿಂದ ಅದು ಒಂದಿಲ್ಲೊಂದು ರೀತಿಯಿಂದ ತಮ್ಮನ್ನು ನುಂಗುವುದೆಂದು ಅವರು ಹೇಳುತ್ತಿದ್ದರು. ಕಗ್ಗತ್ತಲೆಯ ರಾತ್ರಿಯಲ್ಲಿ ಸುತ್ತಲೂ ಅನೇಕ ಮೈಲಿಗಳವರೆಗೆ ನಿಶ್ಶಬ್ದವಾಗಿರುವಾಗ ಬಿರುಗಾಳಿಯೂ ಸುಂಟರಗಾಳಿಯೂ ತಾವೇ ತಾವಾಗಿ ಲೋಕವನ್ನೇ ಒಂದು ಕಡೆಯಿಂದ ಚಾಪೆಯನ್ನು ಸುತ್ತಿದಂತೆ ಸುತ್ತಿಕೊಂಡು ಹೋಗುತ್ತಿರುವಾಗ ಸ್ವಲ್ಪವೂ ಬಿಡುವಿಲ್ಲದೆ ನಾಲ್ಕು - ಐದು ತಿಂಗಳು ಹಗಲು, ರಾತ್ರಿ ನದಿಯ ಪ್ರವಾಹವು ಕಟ್ಟೆಯನ್ನು ಒತ್ತಿ ಬಡಿಯುತ್ತಿರುವುದನ್ನು ಕೇಳಿ ಅವರ ಎದೆ ನಡುಗುತ್ತಿದ್ದಿತು. ಆದರೆ ಬೂತಯ್ಯನವರು ಭಯವನ್ನೇ ಕಾಣದವರಾದುದರಿಂದ ಅವರು ಈ ಕಟ್ಟೆಗೆ ಎಂದಿಗೂ ಚ್ಯುತಿಯಿಲ್ಲ ಎಂಬುದಾಗಿ ಹೇಳಿದ್ದಾಗ ರೈತರಿಗೆ ಕಟ್ಟೆಯಿಂದ ಅಪಾಯವಿಲ್ಲವೆಂದು ನಂಬಿಕೆಯಾಗಿದ್ದಂತೆ ಬೂತಯ್ಯನವರ ಹೆಂಡತಿಗೂ ನಂಬಿಕೆಯಾಗಿದ್ದಿತು. ಆದರೂ ಮಳೆಗಾಲದ

ರಾತ್ರಿಗಳಲ್ಲಿ ಭಯ ಅವರನ್ನು ಏನು ಮಾಡಿದರೂ ಬಿಟ್ಟಿರಲಿಲ್ಲ. ಆ ಮನೆಯ ಭಯ ಅಲ್ಲಿ ವಾಸ ಮಾಡುವವರಿಗೆ ಗೊತ್ತಾಗುತ್ತಿದ್ದಂತೆ ಇತರರಿಗೆ ಗೊತ್ತಾಗುತ್ತಿರಲಿಲ್ಲ. ಅಯ್ಯುವಿನ ಮನೆಸುಟ್ಟಾಗ ಮಳೆಗಾಲವು ಪ್ರಾರಂಭವಾಗಿದ್ದರೂ ಅವನಿಗೆ ಕಟ್ಟೆಯ ಭಯ ಸ್ವಲ್ಪವೂ ಇರಲಿಲ್ಲ. ರೈತರಿಗೂ ಮೊದಲು ಒಂದೆರಡು ವರ್ಷ ಇದ್ದ ಭಯ ಕಟ್ಟೆ ಕಟ್ಟಿ ೩೫ ವರ್ಷಗಳು ಶಾಶ್ವತವಾಗಿ ನಿಂತಮೇಲೆ ಇರಲಿಲ್ಲ.

ಅದು ೧೯೨೪ನೆಯ ಇಸವಿಯ ಮಳೆಗಾಲ. ಅಯ್ಯುವು ಮೈಸೂರಲ್ಲಿ ಖಾಯಿಲೆ ಬಿದ್ದಿದ್ದ ಚಿಕ್ಕಮ್ಮನನ್ನು ನೋಡಿಕೊಂಡು ಬರಲು ಅಲ್ಲಿಗೆ ಹೋದನು. ಮನೆಯಲ್ಲಿ ಅಯ್ಯುವಿನ ಹೆಂಡತಿಯೂ ಎರಡು ಮಕ್ಕಳೂ ಬುಂಡೆಕ್ಯಾತನೂ ಮಾತ್ರ ಇದ್ದರು. ಅಯ್ಯು ಮೈಸೂರಿನಿಂದ ಎರಡೇ ದಿನಗಳಲ್ಲಿ ಹಿಂದಿರುಗಬೇಕೆಂದು ಹೋಗಿದ್ದನ್ನು ಚಿಕ್ಕಮ್ಮನ ಕಾಯಿಲೆ ಹೆಚ್ಚಾದುದರಿಂದ ಕೆಲವು ದಿನ ಅಲ್ಲೇ ಇರಬೇಕಾಯಿತು. ಬುಂಡೆಕ್ಯಾತನು ಊರಲ್ಲಿ ಇರುವನೆಂಬ ಧೈರ್ಯದಿಂದ ಅವನು ನಿರಾಲೋಚನೆಯಿಂದ ಇದ್ದನು. ೧೯೨೪ನೆಯ ಇಸವಿಯ ಮಳೆಗಾಲವನ್ನೂ ಅಂತಹ ಪ್ರವಾಹವನ್ನೂ ಮತ್ತೆ ನಾವು ನಮ್ಮ ಜೀವಮಾನದಲ್ಲಿ ಕಾಣುವುದಿಲ್ಲವೆಂದು ತೋರುತ್ತದೆ. ಆಗ ಬೆಟ್ಟ ಗುಡ್ಡಗಳೆಲ್ಲಾ ಕೆರೆಗಳಾದವು. ಮಳೆ ಕುಂಭದ್ರೋಣವಾಗಿ ಸುರಿಯಿತು. ಆಕಾಶದ ಬಾಗಿಲು ತೆರೆದುಕೊಂಡು ಮುಚ್ಚುವುದನ್ನು ಮರೆತಂತೆ ತೋರಿತು. ಕೆರೆಗಳೆಲ್ಲಾ ತುಂಬಿ ಕೋಡಿ ಹರಿದುವು. ಅನೇಕ ಕೆರೆಗಳು ಒಡೆದೇ ಹೋದುವು. ನದಿಯು ಮೇರೆ ತಪ್ಪಿ ದಡವನ್ನು ಮೀರಿ ಸಮುದ್ರದಂತೆ ಹರಿಯಿತು. ಕಾವೇರಿ ನದಿಯ ಆ ಆರ್ಭಟಕ್ಕೆ ಜನರು ನಡುಗಿದರು. ಅನೇಕ ಕಡೆ ಗದ್ದೆ ಹೊಲಗಳ ಮೇಲೆ ನುಗ್ಗಿ ಅಲ್ಲಿ ಹತ್ತಾಳು ಗಾತ್ರದ ಮರಳರಾಸಿಯನ್ನೇ ಬಿಟ್ಟಿತು. ಕೆಲವೆಡೆ ಹತ್ತಾಳು ಆಳದ ಕೆರೆಗಳನ್ನೇ ಕೊರೆಯಿತು. ಇದ್ದ ಪಾತ್ರವನ್ನು ಮುಚ್ಚಿ ಹೊಸ ಪಾತ್ರವನ್ನೇ ಮಾಡಿಕೊಂಡು ಉರುಳಿತು. ಸಹಸ್ರಾರು ಹಳ್ಳಿಗಳು ನೆಲಸಮವಾದುವು. ಕಾಡಿನ ಮರಗಳೆಲ್ಲಾ ಬೇರುಸಹಿತ ತೇಲಿಹೋದುವು. ಲಕ್ಷಾಂತರ ದನಗಳೂ ಆಡು ಕುರಿಗಳೂ ನೀರಿನ ಗೋರಿಯನ್ನು ಕಂಡುವು. ರಸ್ತೆಗಳಲ್ಲೆಲ್ಲಾ ಕತ್ತುದ್ದ ನೀರು ಹರಿಯುತ್ತಿದ್ದಿತು. ಅನೇಕ ಕಡೆ ಸೇತುವೆಗಳು ಒಡೆದು ಪುಡಿಯಾದುವು. ಟೆಲಿಗ್ರಾಫ್ ಕಂಬಗಳೆಲ್ಲಾ ನೀರಲ್ಲಿ ಈಜುತ್ತಿದ್ದುವು. ರೈಲು ಕಂಬಿಗಳೂ ಸ್ಥಳವನ್ನು ಬಿಟ್ಟು ಕದಲಿದುವು. ನದಿಯ ಆಚೆ ಈಚೆ ದಡಗಳಲ್ಲಿ ಅನೇಕ ಮೈಲಿಗಳವರೆಗೆ ನೀರಿನ ಹೊರತು ಮತ್ತೇನೂ ಕಾಣುತ್ತಿರಲಿಲ್ಲ. ಪ್ರವಾಹ ಬಂದ ಕಡೆ ಮಳೆ ಇಲ್ಲದಿದ್ದರೂ ಮತ್ತೆಲ್ಲೋ ಮೇಲೆ ಮಳೆಯಾಗಿ ಅನಿರೀಕ್ಷಿತವಾದ ಎಡೆಗಳಲ್ಲೆಲ್ಲಾ ಜಲಸಮಾಧಿಯಾಯಿತು. ಇಷ್ಟೆಲ್ಲಾ ಒಂದು ರಾತ್ರಿಯೇ ನಡೆದುಹೋಯಿತು.

ಬೂತಯ್ಯನವರು ಬದುಕಿದ್ದಾಗ, ಅವರ ಅನ್ಯಾಯಗಳು ಅತಿಯಾದಾಗ ರೈತರು "ಹೊಳೆಗೂ ಇವರ ಮೇಲೆ ಸಿಟ್ಟು ಬರವೊಲ್ಲದಲ್ಲ" ಎಂದು ಕೊರಗುತ್ತಿದ್ದರು. ಆದರೆ ಆ ಹೊಳೆಯ ಸಿಟ್ಟು ಈ ರೂಪದಲ್ಲಿ ಬರಬಹುದೆಂದು ಅವರು ನಂಬಲಿಲ್ಲ. ಬೂತಯ್ಯನವರು ಜನರನ್ನೂ ದೇವರನ್ನೂ ಮಂಕಿನಲ್ಲಿ ಕೆಡವಿದಂತೆ ಹೊಳೆಗೂ ಮಾಟ ಮಾಡಿರುವರೆಂದು ರೈತರು ನಂಬಿದ್ದರು. ಆದರೆ ಸಮುದ್ರವೇ ಹೊಳೆಯಾಗಿ ಜಗತ್ತನ್ನೇ ಮುಕ್ಕಳಿಸಲು ಬರುವಾಗ ಕಟ್ಟೆ-ಗಿಟ್ಟೆಗಳು ಗುತ್ತಿಗಿಂತಲೂ ಕಡೆಯೆಂಬುದು ಯಾರಿಗೂ ಹೊಳೆದಿರಲಿಲ್ಲ. ಪ್ರಳಯವಾದ ಆ ರಾತ್ರಿ ಸುಮಾರು ಒಂದು ಗಂಟೆ ಹೊತ್ತಿನಲ್ಲಿ ಬೂತಯ್ಯನವರ ಕಟ್ಟೆ ಕಿತ್ತುಹೋಯಿತು. ಬುಂಡೆಕ್ಯಾತನು ಇದೇನು ಸದ್ದೆಂದು ಬಾಗಿಲಿಗೆ ಬರುವ ವೇಳೆಗೆ ಸಮುದ್ರ ಅವನ ಮನೆಯ ಮೇಲೆ ಬರುತ್ತಿದ್ದಿತು. ಒಂದೇ ಒಂದು ಗಳಿಗೆ ಬುಂಡೆಕ್ಯಾತನು ಏಳುವುದು ಸಾವಕಾಶವಾಗಿದ್ದರೂ ನೀರು ಮನೆಯೊಳಗೆ ಪೂರ್ತ ನುಗ್ಗುತ್ತಿದ್ದಿತು. ಕಟ್ಟೆ ಒಡೆದಿದೆ ಎಂಬುದು ಬುಂಡೆಕ್ಯಾತನಿಗೆ ಹೊಳೆದ ಕೂಡಲೇ ಅವನ ಎದೆಯೂ ಒಡೆಯಿತು. ಒಂದೇ ಗಳಿಗೆಯಲ್ಲಿ ಅಯ್ಯುವಿನ ಹೆಂಡತಿಯನ್ನೂ ಇಬ್ಬರು ಮಕ್ಕಳನ್ನೂ ಎಬ್ಬಿಸಿಕೊಂಡು ಮನೆಯಲ್ಲಿ ಅತ್ಯಂತ ಎತ್ತರವಾದ ಬಿಸಿಲಿನ ಮಚ್ಚಿಗೆ ಹೋದನು. ಜಾಲಹಳ್ಳಿ ಕಾಡು ಕಣ್ಣು ಮುಚ್ಚಿ ತೆಗೆಯುವುದರೊಳಗೆ ನೀರಿನಿಂದ ತುಂಬಿಹೋಯಿತು. ನದಿಯ ನೀರೆಲ್ಲವೂ ಆ ಕಡೆ ನುಗ್ಗಿದುದರಿಂದ ಎರಡು ಮೈಲಿ ದೂರದ ನೀರು ಹೊರತು ಮತ್ತೇನೂ ಕಾಣುತ್ತಿರಲಿಲ್ಲ. ಅಯ್ಯುವಿನ ಮನೆ ಪೂರ್ತ ಮುಳುಗಿ ಹೋಗಿದ್ದಿತು. ಮಾಳಿಗೆ ಮತ್ರಾ ಮುಳುಗಿರಲಿಲ್ಲ. ಆದರೆ ನೀರು ನುಗ್ಗುತ್ತಿದ್ದುದರಿಂದ ಮಾಳಿಗೆಯು ಮುಳುಗಬಹುದೆಂದು ಬುಂಡೆಕ್ಯಾತನು ಹೆದರಿದನು. ಅಯ್ಯುವಿನ ಹೆಂಡತಿಗೆ ಭಯದಿಂದ ಹುಚ್ಚು ಹತ್ತಿದಂತಾಗಿದ್ದಿತು. ಮಕ್ಕಳು ಚಳಿಗೂ ಗಾಳಿಗೂ ಕಿರೋ ಎಂದು ಕಿರುಚುತ್ತಿದ್ದುವು. ಬುಂಡೆಕ್ಯಾತನಿಗೆ ಕೈಕಾಲು ಬಲವೇ ಹೋಯಿತು. ಎಲ್ಲಿ ನೋಡಿದರೂ ನೀರೇ! ಅವನಿಗೆ ನೀರಿನ ಹೊರತು ಮತ್ತೇನೂ ಎಲ್ಲೂ ಕಾಣಲಿಲ್ಲ. ಬೆಳಗಿನವರೆಗೆ ಆ ಮನೆ ನಿಲ್ಲುವಂತೆ ತೋರಲಿಲ್ಲ. ಗೋಡೆಗಳೆಲ್ಲಾ ನೀರಿನಲ್ಲಿ ಮುಳುಗಿದ್ದುದರಿಂದ ಒಂದೆರಡು ಗಂಟೆಗಳೊಳಗೆ ಅವು ಕುಸಿದು ಬೀಳುವುದರಲ್ಲಿ ಸಂದೇಹವಿರಲಿಲ್ಲ. ಒಂದು ವೇಳೆ ಬೆಳಗಿನವರೆಗೂ ಮನೆ ನಿಂತಿದ್ದರೂ ಬೆಳಗಾದ ಮೇಲೂ ಎರಡು ಮೈಲಿ ನೀರನ್ನು ದಾಟಿಕೊಂಡು ಇವರನ್ನು ಸಂರಕ್ಷಿಸಲು ಯಾರೂ ಬರುವವರಾಗಿರಲಿಲ್ಲ. ಎಲ್ಲಿಂದ ಎಲ್ಲಿಯವರೆಗೆ ನೋಡಿದರೂ ಸಮುದ್ರವೇ ಕಾಣುತ್ತಿದ್ದುದರಿಂದ ನೀರಿಗೆ ಇಳಿಯಲು ಎಲ್ಲರೂ ಹೆದರುವರೆಂಬುದು ಬುಂಡೆಕ್ಯಾತನಿಗೆ ಗೊತ್ತಾಗಿದ್ದಿತು. ಮಕ್ಕಳನ್ನು ತಬ್ಬಿಕೊಂಡು ಬಿದ್ದು ಬಿದ್ದು ಅಳುತ್ತಿದ್ದ ತಂಗಿಗೆ ಅವನು

“ಬೆಳಗಿನವರೆಗೆ ನಾವು ಉಳಿಯುವಂತಿಲ್ಲ. ಒಂದೆರಡು ಗಂಟೆಯಲ್ಲಿ ಜಾಲಹಳ್ಳಿಯ ರೈತರು ಯಾರಾದರೂ ಹರಗಲನ್ನು ತಂದರೆ ನಾವು ಬದುಕಿಕೊಳ್ಳಬಹುದು, ಇಲ್ಲದಿದ್ದರೆ ನಾವು ನೀರಿನ ಪಾಲು. ರೈತರಿಗೆ ನಾವು ಹೀಗೆ ತೇಲಿಹೋಗುತ್ತಿರುವುದು ಗೊತ್ತಾಗುವುದು ಹೇಗೆ? ಗೊತ್ತಾದರೂ ಆ ಘಾತಕರು ನಮ್ಮ ಪ್ರಾಣವನ್ನು ಉಳಿಸಲು ಒಂದು ಕಡ್ಡಿಯನ್ನೂ ಅಲ್ಲಾಡಿಸುವುದಿಲ್ಲ” ಎಂದನು. ಜಗತ್ತಿಗೆ ಅಂದೆ ಪ್ರಳಯವಾಗುವಂತೆ ತೋರಿತು. ಅಯ್ಯುವಿನ ಹೆಂಡತಿ ಸಾಯುವುದಕ್ಕೆ ಸಿದ್ಧಳಾದಳು. ಬೂತಯ್ಯನವರ ಯಾವ ಆಸ್ತಿಯೂ ಅವರನ್ನು ಉಳಿಸುವುದಾಗಿರಲಿಲ್ಲ.

ಜಾಲಹಳ್ಳಿ ಕಾಡಿನ ಕಟ್ಟೆ ಒಡೆದುದು ಅದರ ಸದ್ದಿನಿಂದ ಗುಳ್ಳನಿಗೆ ಕೇಳಿಸಿತು. ಅವನಿಗೆ ಆ ರಾತ್ರಿ ಚೆನ್ನಾಗಿ ನಿದ್ರೆ ಹತ್ತಿರಲಿಲ್ಲ. ಮನೆ ಸುಟ್ಟ ಈಚೆಗೆ ಅವನಿಗೆ ನಿದ್ರೆ ಚೆನ್ನಾಗಿ ಬರುವುದೇ ಕಡಿಮೆಯಾಗಿದ್ದಿತು. ಅಯ್ಯುವಿನ ಸ್ವಭಾವವನ್ನೇ ಕುರಿತು ಅವನು ಯೋಚನೆ ಮಾಡುತ್ತಿದ್ದನು. ಕಟ್ಟೆ ಒಡೆದ ಸದ್ದು ಕೇಳಿದ ಒಂದೆರಡು ನಿಮಿಷ ಅದು ಯಾವ ಸದ್ದೆಂಬುದು ಅವನಿಗೆ ಹೊಳೆಯಲಿಲ್ಲ. ಇದು ಕಟ್ಟೆ ಎಂದು ಅವನ ಮನಸ್ಸಿಗೆ ಬಂದಕೂಡಲೇ ಅವನ ಮೈ ಬೆವರಿತು. ಅಯ್ಯುವಿನ ಹೆಂಡತಿ ಮಕ್ಕಳು ಆ ಮನೆಯಲ್ಲಿ ಇರುವುದು ಅವನಿಗೆ ಗೊತ್ತಿದ್ದಿತು. ಆ ಬಯಲಿನ ಆಳವೂ ಅಲ್ಲಿಗೆ ನುಗ್ಗುವ ನೀರಿನ ಗಾತ್ರವೂ ಅವನಿಗೆ ಗೊತ್ತಿದ್ದುದರಿಂದ ಅಯ್ಯುವಿನ ಮನೆಯು ಅದರಲ್ಲಿದ್ದವರೊಂದಿಗೆ ಕೊಚ್ಚಿಕೊಂಡು ಹೋಗಿರುವುದು ಖಂಡಿತವೆಂದು ಅವನಿಗೆ ನಂಬಿಕೆಯಾಯಿತು. ಅಯ್ಯುವಿಗಾಗಿ ಅವನಿಗೆ ಬಹಳ ಸಂಕಟವಾಯಿತು. ಗುಳ್ಳನು ಕೂಡಲೇ ಹಾಸಿಗೆಯಿಂದ ಎದ್ದನು. ಒಂದು ನಿಮಿಷದೊಳಗಾಗಿ ಊರಿಗೇ ಊರೇ ಎಚ್ಚರಗೊಂಡಿತು. ಅವರೆಲ್ಲರೂ ಪಂಜುಗಳನ್ನು ಹಿಡಿದುಕೊಂಡು ಜಾಲಹಳ್ಳಿ ಕಾಡಿನ ಕಡೆ ಹೊರಟರು. ಜಾಲಹಳ್ಳಿ ಸ್ವಲ್ಪ ಎತ್ತರವಾದ ಬೋರೆಯ ಮೇಲೆ ಇದ್ದಿತೆಂದು ಮೊದಲೇ ಹೇಳಿದ್ದೇವೆ. ಬೋರೆಯಿಂದ ಕೆಳಗೆ ಇಳಿದ ಕೂಡಲೇ ನೀರು ಪ್ರಾರಂಭವಾಯಿತು. ಅವರಿಗೆ ಪರಿಚಿತವಾಗಿದ್ದ ಹೊಲ ಗದ್ದೆ ತೋಪುಗಳೆಲ್ಲಾ ಕತ್ತುದ್ದ ನೀರಿನಲ್ಲಿ ನಿಂತಿದ್ದುವು. ರೈತರಾರಿಗೂ ಆ ನೀರಿನಲ್ಲೂ ಕತ್ತಲೆಯಲ್ಲೂ ಮುಂದೆ ಹೋಗಲು ಧೈರ್ಯವುಂಟಾಗಲಿಲ್ಲ. ನದಿ ಯಾವುದು? ಅದು ಒತ್ತಿರುವ ನೀರು ಯಾವುದು? ಎಂಬುದೇ ತಿಳಿಯದಷ್ಟು ಪ್ರವಾಹ ವಿಸ್ತಾರವಾಗಿತ್ತು. ಬೂತಯ್ಯನವರ ಕಾಲದಲ್ಲಿ “ಹೊಳೆಗೂ ಸಿಟ್ಟು ಬರುವೊಲ್ಲದಲ್ಲ” ಎನ್ನುತ್ತಿದ್ದ ರೈತರು ಅಯ್ಯುವಿನ ಹೆಂಡತಿ ಮಕ್ಕಳನ್ನು ಉಳಿಸಲು ತಮ್ಮ ಪ್ರಾಣವನ್ನು ಬೇಕಾದರೂ ಕೊಡಲು ಸಿದ್ಧರಾಗಿದ್ದರು.

ರಾತ್ರಿ ಕಗ್ಗತ್ತಲಾಗಿತ್ತು. ಅಪಾಯ ಅವರ ಬುದ್ಧಿ ಸಾಹಸಗಳನ್ನೂ ಮೀರಿದ್ದಿತು. ಅಯ್ಯುವಿನ ಮನೆಯ ದಿಕ್ಕನ್ನು ಊಹಿಸುವುದೂ ಕಷ್ಟವಾಗಿತ್ತು. ನೀರಿನೊಳಕ್ಕೆ ಒಂದು ಸಲ ಇಳಿದ ಮೇಲೆ ಮತ್ತೆ ಮೇಲೆ ಸುರಕ್ಷಿತವಾಗಿ ಹತ್ತುವ ನಂಬಿಕೆ ಯಾರಿಗೂ ಇರಲಿಲ್ಲ. ಅಯ್ಯುವು ಜನರ ಮನಸ್ಸನ್ನು ಆ ರೀತಿ ಪರಿವರ್ತಿಸದೆ ಇದ್ದಿದ್ದರೆ ರೈತರು ಹಾಸಿಗೆಯನ್ನೇ ಬಿಟ್ಟು ಏಳುತ್ತಿರಲಿಲ್ಲ. ಮನುಷ್ಯನ ಒಳ್ಳೆಯ ಸ್ವಭಾವವೇ ಕೊನೆಯಲ್ಲಿ ಜಯಿಸುತ್ತದೆ ಎಂಬ ಅಯ್ಯುವಿನ ನಂಬಿಕೆ ರೈತರಿಗೂ ನಿದರ್ಶನಕ್ಕೆ ಬಂತು. ಅಯ್ಯುವಿನ ಮನೆಯೂ, ಅವನ ಹೆಂಡತಿ ಮಕ್ಕಳೂ ಅಷ್ಟು ಹೊತ್ತಿಗೇ ಕೊಚ್ಚಿಕೊಂಡು ಹೋಗಿರುವುದು ಖಂಡಿತವೆಂದು ರೈತರಿಗೆ ನಂಬಿಕೆಯಾದರೂ ಅವರನ್ನು ಉಳಿಸಲು ಸಾಹಸ ಮಾಡಲೇಬೇಕೆಂದು ಅವರು ನಿಶ್ಚಯಿಸಿದರು. ಅರ್ಧಗಂಟೆಯೊಳಗಾಗಿ ಹಾಲವಾಣ ಬೊಂಬುಗಳಿಂದ ಒಂದು ತೆಪ್ಪವನ್ನು ಕಟ್ಟಿದರು. ಭೂಮಿಯು ನುಂಗುವುದಕ್ಕೆ ಬಂದಾಗ ಮನೆ ರಕ್ಷಿಸಬಲ್ಲದೆ? ತೆಪ್ಪವು ಸ್ವಾಧೀನ ತಪ್ಪಿ ನೀರುಪಾಲಾಗುವುದೆಂದು ಅರ್ಧ ರೈತರು ಹೆದರಿದರು. ತೆಪ್ಪದ ಮೇಲೆ ಹೊರಟ ನಾಲ್ಕು ಜನರಂತೂ ತಮ್ಮ ಜೀವದ ಆಸೆಯನ್ನೇ ಬಿಟ್ಟರು. ತೆಪ್ಪವೂ ಅವರೂ ಹಿಂದಿರುಗುವರೆಂದು ಯಾರೂ ನಿರೀಕ್ಷಿಸಲಿಲ್ಲ. ಹೋಗಕೂಡದೆಂದು ಯಾರೂ ಒಂದು ಮಾತನ್ನೂ ಹೇಳಲಿಲ್ಲ. ಅಯ್ಯುವಿನ ಹೆಂಡತಿ ಮಕ್ಕಳನ್ನು ಉಳಿಸಲು ಮಾಡಬೇಕಾದ ಸಾಹಸವನ್ನು ನಿರ್ವಂಚನೆಯಿಂದ ಮಾಡಲೇಬೇಕೆಂದು ಅವರು ನಿಶ್ಚಿಯಿಸಿದರು. ತೆಪ್ಪದಲ್ಲಿ ಕುಳಿತ ನಾಲ್ವರ ಪೈಕಿ ಗುಳ್ಳನೇ ಮೊದಲನೆಯವನೂ ಮುಖಂಡನೂ ಆಗಿದ್ದನು. ಪಂಜಿನ ಬೆಳಕಿನಲ್ಲಿ ಅವರು ನಿಧಾನವಾಗಿ ತೆಪ್ಪವನ್ನು ನಡೆಸಿಕೊಂಡು ಹೊರಟರು. ಕತ್ತಲೆಯಲ್ಲಿ ಅವರಿಗೆ ಅಯ್ಯುವಿನ ಮನೆಯು ಯಾವ ಜಾಗದಲ್ಲಿ ಇರಬಹುದೆಂಬುದರ ಗುರುತು ಹತ್ತಲಿಲ್ಲ. ಅನೇಕ ಕಡೆ ತೆಪ್ಪವು ಗುತ್ತಿಗಳಿಗೂ ಮುಳುಗಿದ್ದ ಮೋಟು ಮರಗಳಿಗೂ ತಗುಲಿ ತಲೆಕೆಳಗಾಗುವುದರಲ್ಲಿದ್ದಿತು. ಮಧ್ಯದಲ್ಲಿ ಒಂದು ಸಲ ಗುಳ್ಳನು ಒಂದು ಕೂಗನ್ನು ಹಾಕಿದನು. ಮನುಷ್ಯನ ಧ್ವನಿಯು ಕೇಳೀತೇ ಎಂದು ಕಾತರಿಸುತ್ತಿದ್ದ ಬುಂಡೆಕ್ಯಾತನು ಮತ್ತೊಂದು ಕೂಗಿನಲ್ಲಿ ಪ್ರತ್ಯುತ್ತರವನ್ನು ಕೊಟ್ಟನು. ಹೀಗೆ ಸುಮಾರು ಎರಡು ಗಂಟೆ ಉತ್ತರ ಪ್ರತ್ಯುತ್ತರಗಳು ಬರಿಯ ಧ್ವನಿಯಲ್ಲೇ ನಡೆದು ತೆಪ್ಪವು ಎಡಕ್ಕೂ ಬಲಕ್ಕೂ ತಿರುಗಿ ಕೊನೆಗೆ ಅಯ್ಯುವಿನ ಮನೆಯ ಹತ್ತಿರಕ್ಕೆ ಹೋಯಿತು. ಅಯ್ಯುವಿನ ಹೆಂಡತಿ ಮಕ್ಕಳೂ, ಬುಂಡೆಕ್ಯಾತನೂ ತೆಪ್ಪದಲ್ಲಿ ಕುಳಿತರು. ನೀರಿನ ಸೆಳೆತ ನದಿಯ ಕಡೆಗೆ ಇದ್ದಿತು. ನದಿಯ ವೇಗಕ್ಕೆ ತೆಪ್ಪವು ಸಿಕ್ಕಿದ್ದರೆ ಅದರ ಗತಿ ದೇವರೇ ಗತಿ. ಅದು ವೇಗಕ್ಕೆ ಸಿಕ್ಕದಂತೆ ಒತ್ತು ನೀರಿನಲ್ಲಿ ಅದನ್ನು ಹಿಂದಕ್ಕೆ ತರಬೇಕಾದರೆ ಜನಸಹಾಯ ತೆಪ್ಪಕ್ಕೆ ಹೆಚ್ಚಾಗಿ ಬೇಕಾಗಿದ್ದಿತು. ಆದರೆ ತೆಪ್ಪವು

ಅಷ್ಟು ಜನರ ಭಾರವನ್ನು ತಡೆಯುವಷ್ಟು ಬಲವಾಗಿರಲಿಲ್ಲ. ನದಿಯ ಕಡೆಯ ವೇಗವನ್ನು ತಪ್ಪಿಸಿ ನಿಲ್ಲುನೀರಿನ ಕಡೆಗೆ ತೆಪ್ಪವನ್ನು ತಿರುಗಿಸುವುದು ಬಹಳ ಕಷ್ಟವಾಯಿತು. ಗುಳ್ಳನೂ ಉಳಿದ ಮೂರು ಜನ ರೈತರೂ ಜೀವದ ಆಸೆ ಬಿಟ್ಟು ಹುಟ್ಟಿಗಣೆಗಳ ಜತೆಯಲ್ಲಿ ಹೆಣಗಿದರು. ತೆಪ್ಪಕ್ಕೆ ಭಾರವು ಹೆಚ್ಚಾದುದರಿಂದ ಸ್ವಲ್ಪ ಸ್ವಲ್ಪ ದೂರ ಬಂದನಂತರ ರೈತರು ಒಬ್ಬೊಬ್ಬರಾಗಿ ತೆಪ್ಪದಿಂದ ಜಾರಿ ನೀರಿನಲ್ಲಿ ನಿಂತಿದ್ದ ಮರಗಳ ತುದಿಗಳನ್ನು ಏರಿದರು. ಕೊನೆಗೆ ಬುಂಡೆಕ್ಯಾತನೂ ತೆಪ್ಪದಿಂದ ಇಳಿದು ಮರವನ್ನು ಏರಬೇಕಾಯಿತು. ಗುಳ್ಳನೂ ಅಯ್ಯುವಿನ ಹೆಂಡತಿಯೂ ಮಕ್ಕಳೂ ಮಾತ್ರವೇ ತೆಪ್ಪದಲ್ಲಿ ಉಳಿದರು. ಗುಳ್ಳನ ಮೈಯಲ್ಲಿ ಬೆವರು ಹರಿಯುತ್ತಿದ್ದಿತು. ಬೆಳಗಿನ ಜಾವಕ್ಕೆ ತೆಪ್ಪವು ಜಾಲಹಳ್ಳಿಗೆ ಬಂದಿತು. ಗುಳ್ಳನು ಮತ್ತೆ ಹೋಗಿ ನೀರಿನಲ್ಲಿ ಮರಗಳ ಮೇಲೆ ಕುಳಿತಿದ್ದ ನಾಲ್ವರನ್ನು ಕರೆದುಕೊಂಡು ಬಂದನು. ಬೆಳಗಾದ ಮೇಲೆ ನೋಡಿದಾಗ ಅಯ್ಯುವಿನ ಜಾಲಹಳ್ಳಿ ಕಾಡಿನ ಮನೆ ಇರಲಿಲ್ಲ. ತೇಲಿಹೋಗಿದ್ದಿತು. ಕಟ್ಟೆ ಒಡೆದ ಸಮಾಚಾರ ತಿಳಿದು ಅಯ್ಯು ಮಾರನೇದಿನ ಜಾಲಹಳ್ಳಿಗೆ ದೌಡಾಯಿಸಿ ಕೊಂಡು ಬಂದನು.

* * * *

ಇದು ನಡೆದು ಈಗ ಹದಿನಾಲ್ಕು ವರ್ಷಗಳಾದುವು. ಅಯ್ಯುವಿನ ಮನೆಯಿಂದ ಕಳವಾದ ಪತ್ರಗಳೆಲ್ಲಾ ಒಂದೊಂದಾಗಿ ಅವನ ಮನೆಗೆ ರೈತರಿಂದಲೇ ಬಂದುವು. ಅವನ ಆಸ್ತಿ ವೈವಟ್ಟು ಬೂತಯ್ಯನವರ ಕಾಲದಲ್ಲಿ ಇದ್ದುದಕ್ಕಿಂತ ಸ್ವಲ್ಪವೂ ಕಡಿಮೆಯಾಗಿಲ್ಲ. ಅವನಿಗೆ ರೈತರ ಭಯವೂ ರೈತರಿಗೆ ಅವನ ಭಯವೂ ಇಲ್ಲ. ಗುಳ್ಳನು ಈಗಲೂ ಅವನ ಮನೆಯ ಆಳು. ಊರಲ್ಲಿ ಯಾರ ಬಾಯಲ್ಲಿ ಕೇಳಿದರೂ “ಬೇಕಾದ್ದು ಬರಲಿ ಅಯ್ಯೋರು ಆತ್ಕೊತಾರೆ” ಎಂಬುದೇ ಮಾತಾಗಿದೆ.

# ದೊಳ್ಳನ ಹರಕೆ

ಕೋಟೆಕೊರದ ದೊಳ್ಳ, ಕತ್ತರಿಗಟ್ಟದ ಜಾತ್ರೆ ದಿವಸ ನಂಟರು ಇಷ್ಟರೊಡನೆ ಸುಖವಾಗಿ ಹೇಮಾವತೀ ತೀರದ ತೋಪಿನಲ್ಲಿ ಮಾವಿನ ಮರದ ನೆರಳಿನಲ್ಲಿ ಉಂಡು ಮಲಗಿದ್ದ ಕತ್ತರಿಗಟ್ಟದ ಜಾತ್ರೆಗಾಗಿ ಅವನ ನೆಂಟರೆಲ್ಲಾ ಹೇಮಾವತೀ ತೀರದ ಈ ಹರಕೆ ಊಟಕ್ಕೆ ಬಂದು ಸೇರಿದ್ದರು. ಹತ್ತು ಹದಿನೈದು ಕುಕ್ಕುಟಗಳ ಕತ್ತನ್ನು ಮುರಿದುದಾಗಿತ್ತು. ದೊಳ್ಳ ಇದ್ದದ್ದರಲ್ಲಿ ಅನುಕೂಲಶಾಲಿಯಾಗಿದ್ದುದರಿಂದ ಅವನ ಊಟ ಬಾಕಿ ಭಕ್ತರ ಊಟಕ್ಕಿಂತ ಚೆನ್ನಾಗಿದ್ದಿತು. ಸಮೇರಾಯ ದೇವರನ್ನು ತೆಗೆದುಕೊಂಡು ಬಂದು ದೊಳ್ಳನೂ ಅವನ ಮನೆಯವರೂ ಅಡಿಗೆ ಮಾಡುತ್ತಿದ್ದ ಮರದ ಕೆಳಗೆ ದೇವರನ್ನು ಇಟ್ಟು ಮೂರು ಸಲ ತುತ್ತೂರಿಯನ್ನು ಊದಿ, ದೊಳ್ಳನಿಗೆ “ತ್ಯಾರ್ಥ”ವನ್ನು ಕೊಟ್ಟು ನಾಮವನ್ನು ಇಕ್ಕಿ ’ಎಡೆ’ಯ ರುಚಿನೋಡಿ ದಕ್ಷಿಣೆಯನ್ನು ತೆಗೆದುಕೊಂಡು ಹೋದನು. ಬಂದಿದ್ದ ನೆಂಟರೆಲ್ಲಾ ಉಂಡ ಆಯಾಸದಿಂದಲೂ ಕುಡಿದ ಹೆಂಡದ ಮತ್ತಿನಿಂದಲೂ ನೆರಳಿನಲ್ಲಿ ಮಲಗಿ ತೆಳ್ಳಗೆ ನಿದ್ರೆ ಹೋಗುತ್ತಿದ್ದರು. ಆದರೆ ದೊಳ್ಳನಿಗೆ ಮಾತ್ರ ನಿದ್ರೆ ಬಂದಿರಲಿಲ್ಲ. ಅವನ ಮನಸ್ಸಿಗೆ ಸಮಾಧಾನವಿರಲಿಲ್ಲ. ಅವನ ದೇಹಕ್ಕೆ ಸುಖವಿರಲಿಲ್ಲ. ಒಳ್ಳೆಯ ಊಟವನ್ನು ಹೊಡೆದು ಚೆನ್ನಾಗಿ ಹೆಂಡವನ್ನು ಕುಡಿದಿದ್ದರೂ ಅವನು ಯೋಚನೆ ಮಾಡುತ್ತಾ ಹೊರಳಾಡುತ್ತಿದ್ದನು. ಅವನ ಅಸೌಖ್ಯದ ಕಾರಣ ಅವನಿಗೆ ಗೊತ್ತಿಲ್ಲದೆ ಇರಲಿಲ್ಲ. ಅದು ಅವನೇ ತನ್ನ ಕೈಯಿಂದ ತಾನು ಮಾಡಿಕೊಂಡುದಾಗಿತ್ತು.

ಹೋದ ಸಲ ಹಸಿರು ಬಂಡಿ ಹಬ್ಬಕ್ಕೆ ಪ್ರತಿಯೊಂದು ಹಳ್ಳಿಗೂ ನಾಲ್ಕು, ಆರು, ಎಂಟರಂತೆ ಹಂದಿಗಳು ಬೇಕಾದುವು. ಕೋಟೆಕೋರದ ಸುತ್ತ ಇಪ್ಪತ್ತು ಮೈಲಿವರೆಗೆ ಯಾರಲ್ಲಿಯೂ ಒಂದು ಹಂದಿಯೂ ಇರಲಿಲ್ಲ. ದೊಳ್ಳನ ಹತ್ತಿರ ಮಾತ್ರ ಸುಮಾರು ನೂರು ಹಂದಿಗಳು ಇದ್ದವು. ಜನರು ಅವನು ಹೇಳಿದ ಬೆಲೆಯನ್ನು ಕೊಟ್ಟು ಹಂದಿಗಳನ್ನು ಕೊಂಡುಕೊಂಡು ಹೋದರು. ಒಂದೊಂದು ಹಂದಿಗೆ ೨೦-೩೦-೪೦ ರಂತೆ ಬೆಲೆಯಾಯಿತು. ದೊಳ್ಳನಿಗೆ ಸಾವಿರಾರು ರೂಪಾಯಿ ಕೈಸೇರಿತು. ಊರೊಳಗಿನ ಹಳೆ ಮನೆಯನ್ನು ಬಿಟ್ಟು ದೊಳ್ಳನು ಊರ ಹೊರಗೆ ಹೊಲದಲ್ಲಿ ಊರಿಗೆಲ್ಲಾ ದೊಡ್ಡದಾಗಿ, ಸುಮಾರು ೩ ಮೈಲಿ ದೂರದವರೆಗೆ ಕಾಣುವಂತೆ ಎತ್ತರವಾದ ಹೊಸ ಮನೆಯನ್ನೂ ಹಂದಿ ರೊಪ್ಪವನ್ನೂ ಕಟ್ಟಿದನು. ಆದರೆ ಒಂದು ಅವಿವೇಕವು ನಡೆಯಿತು. ಇದ್ದಕ್ಕಿದ್ದಂತೆ ದುಡ್ಡು ಸೇರಿದ ಮದದಲ್ಲಿ ದೊಳ್ಳನು, ಜೋಯಿಸರಿಂದ ಶಾಸ್ತ್ರವನ್ನು ಕೇಳಿ ಸರಿಯಾದ ಶಾಂತಿ

ಮುಂತಾದುವುಗಳನ್ನು ಮಾಡದೆ ಮನೆಯ ತಳಪಾಯವನ್ನು ತೆಗೆಸಿದನು. ಅಂತಹ ಅವಿವೇಕದಿಂದ ಉಂಟಾಗಬಹುದಾದ ಫಲ ಗೊತ್ತೇ ಇದೆ. ಆ ಮನೆಯ ನೆಲದಲ್ಲಿ ಒಂದು ಜಡೆಮುನಿ ದೆವ್ವವು ನೂರಾರು ವರುಷಗಳಿಂದ ವಾಸ ಮಾಡಿಕೊಂಡಿದ್ದುದಕ್ಕೆ ಕಿರುಕುಳವುಂಟಾಯಿತು. ಅದು ಕೋಪದಿಂದ ಮೊರೆಯುತ್ತಾ ಮನೆ ಕಟ್ಟಿ ಮುಗಿಯವವರೆಗೆ ಸುಮ್ಮನಿದ್ದು ಯಾರಿಗೂ ಕಾಣದಂತೆ ಬಂದು ದೊಳ್ಳನ ದೇಹದೊಳಗೆ ಸೇರಿಕೊಂಡಿತು. ಅಂದಿನಿಂದ ಅದು ದೊಳ್ಳನ ಮೇಲೆ ವೈರವನ್ನು ಸಾಧಿಸಿ ಅವನ ಜೀರ್ಣಶಕ್ತಿಯನ್ನೇ ಹಾಳು ಮಾಡಿತು. ದೊಳ್ಳನು ಯಾವುದಾದರೂ ಒಳ್ಳೆಯ ಊಟವನ್ನು ಮಾಡಿದ ದಿನವಂತೂ ಜಡೆಮುನಿಯ ದೆವ್ವ ಅವನ ಮೇಲೆ ಇನ್ನೂ ಹೆಚ್ಚಾಗುತ್ತಿದ್ದಿತು. ಒಳ್ಳೆಯ ಆಹಾರವನ್ನು ಕಂಡರೆ ಜಡೆಮುನಿಯ ಹೊಟ್ಟೆ ಉರಿಯುತ್ತಿದ್ದಿತು. ಅಂತಹ ದಿನಗಳಲ್ಲಿ ಅದು ದೊಳ್ಳನ ಎದೆಯ ಮೇಲೂ ಹೊಟ್ಟೆಯ ಮೇಲೂ ಕುಳಿತುಕೊಂಡು ಅವನನ್ನು ಹಿಂಸಿಸುತ್ತಿದ್ದಿತಲ್ಲದೆ ಅವನ ಕನಸುಗಳಲ್ಲೂ ಕೂಡ ವಿಕಾರವಾದ ರೂಪವನ್ನು ತಾಳಿ ಅವನನ್ನು ಹೆದರಿಸುತ್ತಿದ್ದಿತು.

ತಂತ್ರಗಾರನಾದ ದೊಳ್ಳ ಜಡೆಮುನಿದೆವ್ವದ ಕಾಟದಿಂದ ತಪ್ಪಿಸಿಕೊಳ್ಳಲು ಒಂದು ಉಪಾಯವನ್ನು ಕಂಡುಹಿಡಿದಿದ್ದನು. ಆ ಉಪಾಯದಲ್ಲಿ ಯಾವಾಗಲೂ ಅವನಿಗೆ ಜಯವುಂಟಾಗುತ್ತಿದ್ದಿತು. ಅವನ ಪ್ರತಿ ಸಂಕ್ರಮಣದ ದಿನವೂ ಊರ ಮುಂದಲ ಮಾರ್‍ಯಮ್ಮನಿಗೆ ಒಂದು ಆಡನ್ನು ಬಲಿ ಕೊಡುತ್ತಿದ್ದನು. ಸಂಕ್ರಮಣದ ಮೊದಲ ದಿವಸ ಉಪವಾಸ ಮಾಡುತ್ತಿದ್ದನು. ಆ ದಿವಸವಂತೂ ಜಡೆಮುನಿಯು ಅವನ ತಂಟೆಗೆ ಬರುತ್ತಿರಲಿಲ್ಲ. ಅದು ಅವನ ಮೈಯಿಂದ ಬಿಟ್ಟು ಹೋಗಿರುವುದು ಅವನಿಗೇ ಗೊತ್ತಾಗು ತಿದ್ದಿತು. ಹೀಗೆ ಜಡೆಮುನಿಯು ನಾಲ್ಕಾರು ದಿವಸ ಹೊರಗಡೆ ಇದ್ದು ಸಮಯ ನೋಡಿ ಮತ್ತೆ ದೊಳ್ಳನ ದೇಹದೊಳಗೆ ಸೇರಿಕೊಂಡು ತನ್ನ ಹಿಂಸೆಯ ಕಾವ್ಯವನ್ನು ಪ್ರಾರಂಭಿಸುತ್ತಿದ್ದಿತು.

ಕತ್ತರಿಗಟ್ಟದ ಜಾತ್ರೆಯ ದಿನ ದೊಳ್ಳ ಮಾವಿನ ಮರದ ನೆರಳಿನಲ್ಲಿ ಹೊರಳಾಡುತ್ತಿರುವಾಗ ಜಡೆಮುನಿ ತನ್ನ ಹೊಟ್ಟೆಯೊಳಗೆ ಅಗೆಯುತ್ತಿರುವುದು ಅವನಿಗೆ ಪೂರ್ಣವಾಗಿ ಅನುಭವಕ್ಕೆ ಬಂದಿತು. ಇದು ತನ್ನನ್ನು ಕಾಡಲು ಕಾರಣವೇನಿರಬಹುದೆಂದು ಅವನು ಯೋಚಿಸುತ್ತಿರುವಾಗ ಇದ್ದಕ್ಕಿದ್ದಂತೆ ಅವನಿಗೆ ಒಂದು ಸಂಗತಿ ಹೊಳೆಯಿತು. ಇದು ಯಾಕೆ ತನಗೆ ಈವರೆಗೆ ಹೊಳೆಯಲಿಲ್ಲವೆಂದು ದೊಳ್ಳನಿಗೆ ತನ್ನಲ್ಲಿಯೇ ತಿರಸ್ಕಾರವುಂಟಾಯಿತು. ಜಡೆಮುನಿಯು ಮಾರ್‍ಯಮ್ಮನ ಸೇವಕ. ಮಾರ್‍ಯಮ್ಮನಿಗೆ ಪ್ರತಿ ಸಂಕ್ರಮಣವೂ ಒಂದೊಂದು ಆಡನ್ನು

ಅರ್ಪಿಸುವುದರಿಂದ ತಿಂಗಳಿಗೆ ೮-೧೦ ದಿನ ಜಡೆಮುನಿಯ ಕಾಟ ತಪ್ಪುತ್ತೆ. ಆದರೆ ಇದರ ಕಾಟವನ್ನು ಪೂರ್ಣವಾಗಿ ತಪ್ಪಿಸಿಕೊಳ್ಳಬೇಕಾದರೆ ಮಾರ್‍ಯಮ್ಮನನ್ನು ಪೂರ್ಣವಾಗಿ ತೃಪ್ತಿಪಡಿಸಬೇಕು. ಅಂದರೆ ಮಾರಿಜಾತ್ರೆ ಮಾಡಬೇಕು ಎಂಬುದು ದೊಳ್ಳನಿಗೆ ಥಟಾರನೆ ಸ್ಫೂರ್ತಿಯಂತೆ ಹೊಳೆಯಿತು.

ಕೋಟೆಕೊರದಲ್ಲಿ ಮಾರಿಜಾತ್ರೆ ನಿಂತುಹೋಗಿ ೧೫ ವರುಷಗಳಾಗಿದ್ದುವು. ಬಯಲಿನಲ್ಲಿರುವ ಊರು ಮುಂದಲ ಆಂಜನೇಯನ ದೇವಸ್ಥಾನದಲ್ಲಿ ನೆಲದ ಮೇಲೆ ಬಿದ್ದಿದ್ದ ಒಂದು ಸಣ್ಣ ಶಾಸನವನ್ನು ಆ ಊರ ಜೋಯಿಸರು ಸುಮ್ಮನೆ ಒಂದು ದಿನ ಹೊರಗಡೆ ತಂದು ನೆಟ್ಟರು. ಮಾರನೆ ದಿನ ಗೌಡಗಳೆಲ್ಲಾ ಸೇರಿ ಮಾರ್‍ಯಮ್ಮ ಇಲ್ಲಿ ಮೂಡಿದೆ ಎಂದುಕೊಂಡು ನೆಟ್ಟ ಕಲ್ಲಿನ ಸುತ್ತ ೩-೪ ದೊಡ್ಡ ಕಲ್ಲನ್ನು ನೆಟ್ಟು ಪೂಜೆ ಮಾಡಿಬಿಟ್ಟರು. ಆಂಜನೇಯನ ಹೊರಗೋಡೆಯೇ ಮಾರ್‍ಯಮ್ಮನಿಗೂ ಗೋಡೆಯಾಯಿತು. ಸ್ವಲ್ಪ ಹೆಚ್ಚು ಕಡಿಮೆ ಒಂದೇ ದೇವಸ್ಥಾನದಲ್ಲಿ ಎರಡು ದೇವರು ಇದ್ದಂತೆ ಆಯಿತು. ಆಂಜನೇಯನ ಮುಖ ಪಶ್ಚಿಮದ ಕಡೆಗಿತ್ತು. ಮಾರ್‍ಯಮ್ಮನ ಮುಖ ದಕ್ಷಿಣದ ಕಡೆಗೇ ಇತ್ತು. ದೇವರು ಸ್ಥಾಪನೆಯಾದ ಮಾರನೆ ವರುಷ ಗೌಡರೆಲ್ಲಾ ಸೇರಿ ಮಾರಿಜಾತ್ರೆ ಮಾಡಬೇಕೆಂದು ಕೋಣಗಳನ್ನು ಹರಕೆ ಬಿಟ್ಟರು. ಶಾಸನದ ಕಲ್ಲೇ ಇವರಿಗೆ ದೇವರು ಎಂದು ಒಳಗೊಳಗೇ ನಗುತ್ತಿದ್ದ ಬ್ರಾಹ್ಮಣರಿಗೆ ಹನುಮಂತರಾಯನ ಮುಂದೆ ಕೋಣಗಳನ್ನು ಎಲ್ಲಾದರೂ ಕಡಿಯುವುದುಂಟೆ ಎಂದು ಗಾಬರಿಯಾಯಿತು. ಆದರೆ ಗೌಡರಿಗೆ, ಹೊಸದಾಗಿ ಉದ್ಭವಿಸಿದ ಮಾರ್‍ಯಮ್ಮನಲ್ಲಿ ಉತ್ಸಾಹ ಹೆಚ್ಚಾಗಿದ್ದುದರಿಂದ ಅವರು ಮಾರಿಜಾತ್ರೆಯನ್ನು ನಡೆಸಿಯೇ ಬಿಟ್ಟರು. ಹನುಮಂತರಾಯನ ಮುಂದೆ ಭಾರಿ ಕೋಟೆಕಂದಕದ ಹಳ್ಳ ಬಿದ್ದಿದ್ದುದರಿಂದ ಕೋಣಗಳನ್ನೂ ಕುರಿಗಳನ್ನೂ ಮಾರ್‍ಯಮ್ಮನ ಎದುರಿಗೇ ಕಡಿದರು. ಪ್ರತಿವರುಷವೂ ತಪ್ಪದೆ ಮಾರಿ ಜಾತ್ರೆ ನಡೆಸಬೇಕೆಂದು ತೀರ್ಮಾನಿಸಿಕೊಂಡರು.

ಆದರೆ ಕುಳವಾಡಿಗಳಿಗೆ ಮಾಮೂಲಾಗಿ ಕೊಡಬೇಕಾಗಿದ್ದ ಮಿರಾಸೆಗಳನ್ನು ಕೊಡದಿದ್ದುದರಿಂದ ಅವರಿಗೂ ಗೌಡಗಳಿಗೂ ಮನಸ್ತಾಪವುಂಟಾಯಿತು. ಮಾರಿ ಜಾತ್ರೆಯಲ್ಲಿ ನಡೆಯಬೇಕಾದ 'ರಕ್ತಬಲಿ' ಎಂಬುದು ಕುಳವಾಡಿಗಳಿಂದಲೇ ನಡೆಯಬೇಕು. ಮುಂದಲ ವರುಷದಿಂದ ಅವರು ಮಾರಿಜಾತ್ರೆಗೆ ಒಪ್ಪಲಿಲ್ಲ. "ಈವತ್ತು ಮುಂದಕ್ಕೆ ಹಾಕಿದ್ದು ನಾಳೆಯೂ ಮುಂದಕ್ಕೆ ಹಾಕಿದಂತೆ" ಗೌಡಗಳಿಗೂ ಕುಳವಾಡಿಗಳಿಗೂ ಉಂಟಾಗಿದ್ದ ಮನಸ್ತಾಪ ಹರಿಯಲೇ ಇಲ್ಲ. ಅದು ಹರಿಯದಂತೆ ಬ್ರಾಹ್ಮಣರೂ ಸಹ ಒಬ್ಬರ ಮೇಲೆ ಒಬ್ಬರನ್ನು ಎತ್ತಿ ಕಟ್ಟುತ್ತಿದ್ದರು. ಈ

ರೀತಿ ೧೫ ವರುಷಗಳು ಮಾರಿಜಾತ್ರೆ ನಡೆಯಲೇ ಇಲ್ಲ. ಕೋಟೆಕೊರದ ಪ್ರಾಣಿದಯಾ ಸಂಘದವರು ತಮ್ಮ ಸಾಹಸದಿಂದಲೇ ಅಲ್ಲಿ ಮಾರಿಜಾತ್ರೆ ನಿಂತಿತೆಂದು ಹೇಳುತ್ತಿದ್ದರು. ಬ್ರಾಹ್ಮಣರು ತಮ್ಮ ಚಾಣಕ್ಯ ತಂತ್ರದಿಂದಲೇ ನಿಂತಿತೆಂದು ಹೇಳುತ್ತಿದ್ದರು. ಆದರೆ ಜಾತ್ರೆ ನಿಂತಿದ್ದುದು ಹೊಲೆಯರಿಗೆ ಸಲ್ಲಬೇಕಾದ ಮಿರಾಸೆ ಸಲ್ಲದೆ ಇದ್ದುದರಿಂದ.

ಮಾವಿನ ಮರದ ನೆರಳಿನಲ್ಲಿ ಯೋಚಿಸುತ್ತಾ ಮಲಗಿದ್ದ ದೊಳ್ಳನಿಗೆ, ಮಾರಿಯಮ್ಮನಿಗೆ ತಪ್ಪಿ ನಡೆದುದರಿಂದಲೇ ತನಗೆ ಈ ರೀತಿಯಾದ ದೆವ್ವದ ಕಾಟವುಂಟಾಗಿದೆ ಎಂದು ಮಂದಟ್ಟಾಯಿತು. "ನಮ್ಮ ಹಿರೀಕರಿಗೆ ಆದ್ದು ನಮಗೂವೆ. ಮನುಷ್ಯರಿಗೆ ಸಿಟ್ಟು ಬಂದರೆ ಚಿಂತೆಯಿಲ್ಲ. ಮಾರಿಗೆ ಸಿಟ್ಟು ಬಂದರೆ ಊರು ತೊಡೀತಾಳೆ. ಹೇಗಾದರೂ ಮಾಡಿ ಈ ಸಲ ಮಾರಿ ಜಾತ್ರೆ ನಡೆಸಲೇಬೇಕು" ಎಂದು ಅವನು ಹರಕೆ ಮಾಡಿಕೊಂಡನು. ಈ ಮಾರಿ ಜಾತ್ರೆಯಲ್ಲಿ ಅವನಿಗೆ ಹೆಚ್ಚು ಉತ್ಸಾಹ ಉಂಟಾಗಲು ಕಾರಣ ಹನುಮಂತರಾಯನ ಗುಡಿಯ ಮುಂದಿದ್ದ ವಿಶಾಲವಾದ ಬಯಲು. ೧೫ ವರುಷಗಳಿಂದ ಈಚೆಗೆ ಗ್ರಾಮ ಪಂಚಾಯ್ತಿಯವರು ಪ್ರತಿವರುಷವೂ ನೂರಾರು ರೂಪಾಯಿಗಳನ್ನು ಖರ್ಚುಮಾಡಿ ಕೋಟೆ ಕಂದಕಗಳನ್ನೆಲ್ಲಾ ಮುಚ್ಚಿದ್ದರು. ದೊಳ್ಳನಿಗೆ ಆ ಬಯಲು ಕೋಣಗಳನ್ನೂ ಕುರಿಗಳನ್ನೂ ಕಡಿಯಲು ಬಹಳ ಪ್ರಶಸ್ತವಾದ ಸ್ಥಳವಾಗಿ ತೋರಿತು. ಆದರೆ ಮಾರಿಗುಡಿಯ ಮುಂದೆ ನೆಲ ಅಷ್ಟು ವಿಶಾಲವಾಗಿರಲಿಲ್ಲ.

ಮಾರನೇ ದಿನವೇ ದೊಳ್ಳನು ಗೌಡುಗಳ ಮತ್ತು ಹೊಲೆಯರ ಸಭೆ ಸೇರಿಸಿದನು. "ಊರಿನ ದೇವರಿಗೆ ತಪ್ಪಿ ನಡೆದುದರಿಂದ ನಮಗೆ ಆಗಬಾರದುದೆಲ್ಲಾ ಆಗುತ್ತಿದೆ. ದೇವರುಗಳಿಗೆ ಕೋಪ ಬಂದರೆ ಮನುಷ್ಯರನ್ನು ಸುಮ್ಮನೆ ಬಿಟ್ಟಾರೆ? ಹದಿನೈದು ವರುಷಗಳಿಂದ ನಮ್ಮ ಊರಿಗೆ ಒಂದಿಲ್ಲ ಒಂದು ರೋಗ ಬರುತ್ತಲೇ ಇದೆ. ದೇವರುಗಳು ಕಣ್ಣುಮುಚ್ಚಿಕೊಂಡು ಕುಳಿತಿರುವುದಿಲ್ಲ. ಅವರು ಕೈಲಿ ಹರಿಯದವರಲ್ಲ ಆಗ ಪ್ಲೇಗನ್ನು ಕಳುಹಿಸಿದರು; ಆಮೇಲೆ ಕಾಲರಾ ಬಂತು. ಬೆಂಕಿಜ್ವರ, ದನಗಳ ದೊಡ್ಡರೋಗ, ಸುಂಕು ಪ್ರತಿವರುಷವೂ ದೇವರುಗಳು ತಮ್ಮ ಆಕ್ರೋಶವನ್ನು ತೋರಿಸುತ್ತಲೇ ಇದ್ದಾರೆ. ನಾವು ಮೂಢಜನಗಳಾದುದರಿಂದ ತಿಳಿವಳಿಕೆ ಇಲ್ಲದೆ ನಮ್ಮನಮ್ಮಲ್ಲೇ ಹೊಡೆದಾಡುತ್ತಿದ್ದೇವೆ. ಈ ಸಲ ಮಾರಿಜಾತ್ರೆ ನಡೆಸಬೇಕೆಂದು ಹರಕೆ ತೊಟ್ಟಿದ್ದೇನೆ. ಕುಳವಾಡಿಗಳಿಗೆ ಕೊಡಬೇಕಾದ ಮಿರಾಸೆ ಸರಿಯಾಗಿ ಸಲ್ಲಿಸುತ್ತೇನೆ. ಪಟ್ಟದ ಕೋಣದ ಜತೆಗೆ ೪ ಕೋಣ ನನ್ನ ಹರಕೆ" ಎಂದು ಎಲ್ಲರನ್ನೂ ಹುರಿದುಂಬಿಸಿದನು. ಗೌಡಗಳೂ ಕುಳವಾಡಿಗಳೂ ಈ

೧೫ ವರುಷಗಳೂ ಮಾರಿಜಾತ್ರೆ ಮಾಡದುದು ತಪ್ಪೆಂದು ಒಪ್ಪಿಕೊಂಡರು. ಮಾರಿಯಮ್ಮನ ಮುಖವು ದಕ್ಷಿಣಕ್ಕೆ ಇದ್ದರೂ, ಪಶ್ಚಿಮಕ್ಕೆ ಮುಖ ಮಾಡಿಕೊಂಡಿದ್ದ ಹನುಮಂತರಾಯನ ಎದುರಿನ ಬೈಲಿನಲ್ಲೇ ಕೋಣಗಳನ್ನೂ ಕುರಿಗಳನ್ನೂ ಕಡಿಯಬೇಕೆಂದು ತೀರ್ಮಾನವಾಯಿತು. ಅಡಿಗೆಯ ಏರ್ಪಾಡುಗಳನ್ನೆಲ್ಲಾ ಕೇಳಿ ನೆರೆದಿದ್ದವರಿಗೆಲ್ಲಾ ಬಾಯಲ್ಲಿ ನೀರು ಕರೆಯಿತು. ರಣೋತ್ಸಾಹವುಂಟಾಯಿತು.

ಆದರೆ ಬ್ರಾಹ್ಮಣರಿಗೂ ಪ್ರಾಣಿದಯಾಸಂಘದವರಿಗೂ ಬಹಳ ಬೇಜಾರಾಯಿತು. ಪ್ರಾಣಿದಯಾಸಂಘದ ಮಾತು ಇರಲಿ. ಅವರು ಹೇಳಿದುದು ಗೊತ್ತೆ ಇದೆ. ಬ್ರಾಹ್ಮಣರು "ನೀವು ಆಂಜನೇಯನ ಎದುರಿಗೆ ಕೋಣಗಳನ್ನು ಕಡಿಯ ಕೂಡದು. ಮಾರಿಯಮ್ಮನ ಎದುರಿಗೆ ಬೇಕಾದದ್ದು ಮಾಡಿಕೊಳ್ಳಿ" ಎಂದರು. ದೊಳ್ಳ "ಮಾರಿಗುಡಿ ಎದುರಿಗೆ ಜಾಗ ಇಲ್ಲ. ಅದು ತಿರುಗಾಡುವ ರಸ್ತೆ. ಅಂಜನೇಯ ಮಾರ‍್ಯಮ್ಮ ಎಲ್ಲಾ ಒಂದೇ. ಇಬ್ಬರೂ ನಮಗೆ ದೇವರೆ. ಒಂದು ದೇವರಿಗೆ ಆದುದು ಮತ್ತೊಂದು ದೇವರಿಗೆ ಆಗಿಯೇ ಆಗುತ್ತದೆ" ಎಂದನು.




ಬ್ರಾಹ್ಮಣರು ಪುಳಿಚಾರು. ಹಿಂದೆ ಊರ ಮುಂದೆ ಅವರು ಕಟ್ಟಿಸಿದ್ದ ಹೊಸ ಶಿವ ದೇವಾಲಯದಲ್ಲಿ ಶಿವನ ಪ್ರತಿಷ್ಠೆ ಮಾಡುವ ಮೊದಲ ರಾತ್ರಿಯೇ ಒಕ್ಕಲಿಗರೆಲ್ಲಾ ಸೇರಿ ಕನ್ನಂಬಾಡಿಯ ಅಮ್ಮನನ್ನು ಇಟ್ಟು ಪ್ರತಿಷ್ಠಿಸಿ ಬಿಟ್ಟಿದ್ದರು. ಬೆಳಗಾದ ಮೇಲೆ ಬ್ರಾಹ್ಮಣರು ಸಕಲ ಸಿದ್ಧತೆಗಳೊಂದಿಗೆ ಹೋಗಿ ನೋಡಿದಾಗ ತಮ್ಮಡಿಯು ಕನ್ನಂಬಾಡಿಯ ಅಮ್ಮನ ಪೂಜೆ

ಮಾಡುತ್ತಿದ್ದನು. ಮೇಲಿನ ಅಧಿಕಾರಿಗಳೊಂದಿಗೆ ಹೇಳಿಕೊಂಡಾಗ ಅವರು 'ಬ್ರಾಹ್ಮಣರಿಗೇನು ಎಲ್ಲೆಲ್ಲೂ ದೇವಸ್ಥಾನಗಳಿವೆ. ಒಕ್ಕಲಿಗರಿಗೆ ಇದು ಇರಲಿ. ಊರಿಗೆ ಕ್ಷೇಮ' ಎಂದು ಹೇಳಿದರು. ಈಗ ದೊಳ್ಳನು ಆಂಜನೇಯನ ಎದುರಿನ ಬೈಲಿನಲ್ಲೇ ಕೋಣಗಳನ್ನು ಕಡಿಯಬೇಕೆಂದು ತೀರ್ಮಾನಿಸಿದ್ದುದರಿಂದ ಬ್ರಾಹ್ಮಣರಿಗೆ ದಿಕ್ಕೇ ತೋಚದ ಹೋಗಿತ್ತು. ಸಾವಿರಾರು ಜನರ ಮುಂದೆ ತಮ್ಮ ಹತ್ತು ಜನದ ಮಾತು ಏನೂ ನಡೆಯುವುದಿಲ್ಲವೆಂದು ಅವರಿಗೆ ಅನುಭವವಾಗಿತ್ತು. ಆದರೂ ಅವರು ಎದ್ದರೆ ಆಳಲ್ಲ ಎಂಬಂತೆ "ಬೇಕಾದ್ದಾದರೂ ಆಂಜನೇಯನ ಎದುರಿಗೆ ಮಾರಿಜಾತ್ರೆಗೆ ಬಿಡುವುದಿಲ್ಲ" ಎಂದರು. ದೊಳ್ಳನು "ಬೇಕಾದ್ದಾದರೂ ಮಾಡಿಯೇ ಮಾಡುತ್ತೇನೆ" ಎಂದನು. ಅಂತೂ ಎರಡು ಕಡೆಯೂ ವೈರ ಮಸೆಯಿತು. ಬ್ರಾಹ್ಮಣರಿಗೂ ಒಕ್ಕಲಿಗರಿಗೂ ನಡುವ ಹಸಿ ಹುಲ್ಲನ್ನು ಹಾಕಿದರೂ ಹತ್ತಿಕೊಳ್ಳುತ್ತದೆ, ಎಂಬಷ್ಟು ತೀವ್ರದ್ವೇಷವುಂಟಾಯಿತು. ಈ ಹೊಡೆದಾಟದಲ್ಲಿ ಯಾರಿಗೆ ಜಯವಾಗುತ್ತದೆ ಎಂಬುದರಲ್ಲಿ ಸಂದೇಹವಿರಲಿಲ್ಲ. ಹಳ್ಳಿಯಲ್ಲಿ ಬ್ರಾಹ್ಮಣರಿಗೆ ಯಾವಾಗಲೂ ಜಯವಾದುದನ್ನು ಯಾರೂ ಕಾಣರು. ಮಾರಿ ಜಾತ್ರೆಗೆ ಅಥವಾ ಎರಡು ತಿಂಗಳ ಮುಂಚೆ (ಸಾಧಾರಣವಾಗಿ ಕಾರ್ತಿಕ ಮಾಸದಲ್ಲಿ) ಕೋಣಗಳನ್ನು ಕಡಿಯಲು ಕಟ್ಟುವ ರಣಗಂಬವನ್ನು ನೆಡುವ ಪದ್ಧತಿ. ಆ ದಿನ ಬೆಳಿಗ್ಗೆ ಆ ಕಂಬವನ್ನು ನೆಡುವ ವಿಚಾರದಲ್ಲಿ ಬ್ರಾಹ್ಮಣರಿಗೂ ಒಕ್ಕಲಿಗರಿಗೂ ಅನೇಕ ಘಂಟೆಗಳ ಕಾಲ ಚರ್ಚೆ ನಡೆದು ಕೈ ಕೈ ಹತ್ತುವ ಸಂಭವ ಬಂದಿದ್ದು ಕೊನೆಗೆ "ಇದು ಹನುಮಂತ ರಾಯನ ಹಬ್ಬವಲ್ಲ. ಮಾರಿಯಮ್ಮನ ಹಬ್ಬ. ಆದುದರಿಂದ ಮಾರಿಯಮ್ಮನ ಎದುರಿಗೇ ಕಂಬವನ್ನು ನೆಟ್ಟು ಅಲ್ಲಿಯೇ ಕೋಣಗಳನ್ನು ಕಡಿಯಬೇಕೆಂಬ" ತೀರ್ಮಾನಕ್ಕೆ ಒಕ್ಕಲಿಗರೆಲ್ಲಾ ಒಪ್ಪಿದರು. ಕೂಡಲೇ ಒಕ್ಕಲಿಗರು ನೆರೆದಿದ್ದವರ ಎದುರಿಗೆಲ್ಲಾ ರಣಗಂಬವನ್ನು ಮಾರಿಯಮ್ಮನ ಎದುರಿಗೇ ನೆಟ್ಟರು.

ಇದಾವುದರಿಂದಲೂ ದೊಳ್ಳನಿಗೆ ಸಮಾಧಾನವಾಗಲಿಲ್ಲ. ಕೋಣಗಳನ್ನು ಆಂಜನೇಯನ ಎದುರಿನ ಹೊಸದಾದ ವಿಶಾಲವಾದ ಬಯಲಿನಲ್ಲಿ ಕಡಿದು ಅವುಗಳ ತಲೆಗಳನ್ನು ಸಾಲಾಗಿ ಇಟ್ಟು ಅವುಗಳ ಮೇಲೆ ದೀಪಗಳನ್ನು ಇಟ್ಟರೆ ಒಳ್ಳೆಯ ಪ್ರದರ್ಶನವಾಗುವುದೆಂದು ಅವನು ಚೆನ್ನಾಗಿ ತಿಳಿದಿದ್ದನು. ಅವನು "ಇದು ಊರು ಒಟ್ಟಿನ ಹಬ್ಬ. ಬ್ರಾಹ್ಮಣರಿಗೂ ಇದು ಹಬ್ಬವೇ. ಆಂಜನೇಯನಿಗೂ ಇದು ಹಬ್ಬವೇ. ಈ ಬಯಲಿನಲ್ಲಿ ಮಾಡಲು ಬ್ರಾಹ್ಮಣರು ಅವಕಾಶ ಕೊಡದಿರುವುದು ಅವರ ಕಿರುಕುಳ ಸ್ವಭಾವವನ್ನು ತೋರಿಸುತ್ತದೆ. ಹಿಂದೆ ಇವರ ದೇವಸ್ಥಾನದಲ್ಲಿ ಕನ್ನಂಬಾಡಿ ಅಮ್ಮನನ್ನು ಮಡಗಿದಾಗ ಇವರು ಕಡಿದುದಾದರೂ ಏನು? ಇರಲಿ" ಎಂದು

ಮೊರೆಯುತ್ತಿದ್ದನು. ಆದರೆ ಪ್ರತಿದಿನವೂ ಹಗಲೂ ರಾತ್ರಿ ಆಂಜನೇಯ ದೇವಸ್ಥಾನದಲ್ಲಿ ಅರ್ಚಕನೂ ಪರಿಚಾರಕನೂ ಇರುತ್ತಿದ್ದುದರಿಂದ ದೊಳ್ಳನಿಗೆ ಅವರ ಕಣ್ಣು ತಪ್ಪಿಸಿ ಯಾವ ಕೆಲಸ ಮಾಡಲೂ ಆಸ್ಪದವಾಗಲಿಲ್ಲ. ಆದರೆ ಅವನ ಅಶಾಂತಿಯನ್ನು ನೋಡಿ ಅವನು ಏನೋ ಕೀಟಲೆ ಮಾಡುವನೆಂದು ಬ್ರಾಹ್ಮಣರೆಲ್ಲ ಯೋಚಿಸುತ್ತಿದ್ದರು. ಆದರೆ ಪಂಚಾಯ್ತಿಗೆ ದೊಳ್ಳನೂ ಒಪ್ಪಿದ್ದುದರಿಂದ ಆ ಕೀಟಲೆ ಯಾವ ರೂಪವನ್ನು ತೆಗೆದುಕೊಳ್ಳಬಹುದೆಂಬುದನ್ನು ಊಹಿಸಲು ಅವರು ಶಕ್ತರಾಗಿರಲಿಲ್ಲ.

ಮಾರಿ ಜಾತ್ರೆಗೆ ಒಂದು ತಿಂಗಳ ಮುಂಚೆ ಒಂದು ಶನಿವಾರ ರಾತ್ರಿ ಕೋಟೆಕೊರದ ಬ್ರಾಹ್ಮಣರಿಗೆ ಬಹಳ ದುರ್ದಿನವಾಗಿತ್ತು. ಊರಿನ ಪ್ರಮುಖರಾದ ತರುಣ ಜಮೀನ್‌ದಾರರೊಬ್ಬರು ಆ ಸಾಯಂಕಾಲ ಊರಿಗೆ ಹತ್ತು ಮೈಲಿಯ ಆಸ್ಪತ್ರೆಯಲ್ಲಿ ಮೃತರಾದರು. ಬಸ್ಸಿನಲ್ಲಿ ಅವರ ಶವವನ್ನು ತಂದು ಊರಿನ ಸ್ಮಶಾನದಲ್ಲಿ ಇಟ್ಟು ದೂರದ ಬಂಧುವೊಬ್ಬನಿಗೆ ಹೇಳಿ ಕಳುಹಿಸಿ ಊರಿನವರೆಲ್ಲಾ ಸ್ಮಶಾನದ ತೋಪಿನಲ್ಲೇ ರಾತ್ರಿಯನ್ನು ಕಳೆಯಲು ಕುಳಿತಿದ್ದರು. ಸತ್ತವನಿಗೆ ಅಣ್ಣತಮ್ಮಂದಿರು ಯಾರೂ ಇರಲಿಲ್ಲ. ಬಂಧುವು ಬರಬೇಕಾದರೆ ಮಾರನೇ ದಿನ ಬೆಳಿಗ್ಗೆ ಆಗಬೇಕಾಗಿತ್ತು. ಯುವತಿಯಾದ ಹೆಂಡತಿ, ಮೂರು ಸಣ್ಣಮಕ್ಕಳು ಇವರ ಗೋಳು ಅಸಾಧ್ಯವಾಗಿತ್ತು. ಊರಿಗೆಲ್ಲಾ ಮಂಕು ಕವಿದಿದ್ದಿತು. ಊರಿನ ಬ್ರಾಹ್ಮಣರೆಲ್ಲಾ ಮನೆಗೆ ಒಂದು ಆಳಿನಂತೆ ಸ್ಮಶಾನದಲ್ಲಿ ಸೇರಿ ಹೆಣವನ್ನು ಕಾದು ಮರುದಿವಸ ಬೆಳಿಗ್ಗೆ ಶವಸಂಸ್ಕಾರವನ್ನು ಮಾಡಿ ಮನೆಗಳಿಗೆ ಬಂದರು. ಊರು ಬಿಕೋ ಎನ್ನುತ್ತಿದ್ದಿತು. ರಾತ್ರಿ, ಬ್ರಾಹ್ಮಣರು ಸ್ಮಶಾನದಲ್ಲಿರುವಾಗ ಯಾರೋ ಮಾರಿಯಮ್ಮನ ಮುಂದೆ ಇದ್ದ ರಣಗಂಬವನ್ನು ಆಂಜನೇಯನ ಮುಂದಲ ಬಯಲಿನಲ್ಲಿ ಕಿತ್ತು ನೆಟ್ಟಿದ್ದರು.

ಬೆಳಿಗ್ಗೆ ಅರ್ಚಕನು ಆಂಜನೇಯನ ದೇವಸ್ಥಾನಕ್ಕೆ ಬಂದಾಗ ಅವನಿಗೆ ಎದುರಿಗೆ ನಿಂತಿದ್ದ ರಣಗಂಬವನ್ನು ನೋಡಿ ಎದೆ ನಡುಗಿತು. ಅಷ್ಟು ಹೊತ್ತಿಗೆ ಆ ದಾರಿಯಲ್ಲಿ ಎಲ್ಲಿಗೋ ಹೋಗುತ್ತಿರುವವನಂತೆ ದೊಳ್ಳನೂ ಬಂದನು. ಅವನ ಕೈಯಲ್ಲಿ ಹಣೆ ಮಟ್ಟದ ಕಪ್ಪಾದ ಬಲವಾದ ದೊಣ್ಣೆ ಇದ್ದಿತು. ಕಣ್ಣುಗಳು ಕೆಂಪಾಗಿ ಮಾತನಾಡಿಸುವವರ ಮೇಲೆ ಅವನು ಬೀಳುವಂತೆ ತೋರುತ್ತಿದ್ದನು. ಅರ್ಚಕನು ದೊಳ್ಳನೊಂದಿಗೆ "ಇದೇನಯ್ಯಾ, ಅವತ್ತು ಪಂಚಾಯ್ತಿ ತೀರ್ಮಾನಕ್ಕೆ ಒಪ್ಪಿ ಮಾರ್‍ಯಮ್ಮನ ಮುಂದೆ ನೆಟ್ಟಿದ್ದ ರಣಗಂಬವನ್ನು ಈಗ ಇಲ್ಲಿ ನೆಟ್ಟಿದ್ದೀಯ?" ಎಂದನು. ದೊಳ್ಳನು "ನಾನು ನೆಡಲಿಲ್ಲ, ಅದೇ ಬಂದಯ್ತೆ" ಎಂದನು. ಅರ್ಚಕನು "ನಾವೆಲ್ಲಾ ಮಸಾಣದಲ್ಲಿ

ಹೆಣಕಾಯ್ತ ಇರುವಾಗ ನೀನು ಕಳ್ಳನಂತೆ ಹೀಗೆ ಮಾಡಬಹುದೇ?" ಎಂದನು. ದೊಳ್ಳನಿಗೆ ಕೈತೀಟೆ ತೀರಿಸಿಕೊಳ್ಳಲು ಒಳ್ಳೆ ಸಮಯ ಸಿಕ್ಕಿದಂತಾಯಿತು. ಅವನು "ಏ ಪೂಜಾರಿ, ಕಳ್ಳ ನಾನಲ್ಲ ನೀನು" ಎಂದು ಹೇಳಿ ಕೈಯಲ್ಲಿದ್ದ ದೊಣ್ಣೆಯನ್ನು ಎತ್ತಿ ಅರ್ಚಕನ ತಲೆಯಮೇಲೆ ಬಿಟ್ಟುಬಿಟ್ಟನು. ಆ ಏಟು ಏನಾದರೂ ಅರ್ಚಕನ ತಲೆಗೆ ಬಿದ್ದಿದ್ದರೆ ಅವನ ತಲೆಯು ಒಡೆದು ಚೂರಾಗುತ್ತಿದ್ದುದರಲ್ಲಿ ಸಂದೇಹವಿರಲಿಲ್ಲ. ಆದರೆ ದೊಳ್ಳನು ದೊಣ್ಣೆಯನ್ನು ಎತ್ತಿದ ಕೂಡಲೇ ನಡುಗುತ್ತಿದ್ದ ಅರ್ಚಕನು ತಲೆಯನ್ನು ಕೆಳಕ್ಕೆ ಬಗ್ಗಿಸಿ ಕುಳಿತೇಬಿಟ್ಟನು. ದೊಣ್ಣೆಯ ಏಟು ಹಿಂದಲ ಹನುಮಂತರಾಯನ ಗದ್ದಕ್ಕೆ ಫಳಾರನೆ ಬಿದ್ದಿತು. ಎಣ್ಣೆ ಮಜ್ಜನದಿಂದ ಕಪ್ಪಾಗಿದ್ದ ದೇವರ ಗದ್ದದಿಂದ ಆರುಕಾಸಿನಗಲದ ಬಳಾಪಿನ ಕಲ್ಲಿನ ಚೂರು ಹಾರಿಹೋಗಿ ಆ ಜಾಗವು ಬೆಳ್ಳಗೆ ಆಯಿತು. ದೊಳ್ಳನು ಎರಡನೆಯ ಏಟನ್ನು ಕೊಟ್ಟು ಅರ್ಚಕನ ತಲೆಯನ್ನು ಹಾರಿಸಲು ಪ್ರಯತ್ನಿಸುವಷ್ಟರಲ್ಲಿ ಜೋಯಿಸರು ದೇವಸ್ಥಾನದ ಹತ್ತಿರಕ್ಕೆ ಬಂದರು. ಆ ಕಡೆಯಿಂದ, ಮೊದಲೇ ಏರ್ಪಾಡಾಗಿದ್ದಂತೆಯೋ ಎಂಬಂತೆ ಅನೇಕ ಒಕ್ಕಲಿಗರು ಕೈಯಲ್ಲಿ ದೊಣ್ಣೆಗಳನ್ನು ಹಿಡಿದುಕೊಂಡು ಬಂದರು. ಅವರೆಲ್ಲಾ ಹೊಡೆದಾಟವನ್ನು ನಿರೀಕ್ಷಿಸಿಕೊಂಡು ಅದಕ್ಕೆ ಸಿದ್ಧರಾಗಿಯೇ ಬಂದಿದ್ದಂತೆ ತೋರಿತು. ಬ್ರಾಹ್ಮಣರೆಲ್ಲಾ ಒಂದಾಗಿದ್ದರೂ ಅವರ ಎದುರಿಗೆ ಇವರ ಆಟ ಏನೂ ನಡೆಯುತ್ತಿರಲಿಲ್ಲ. ಜೋಯಿಸರು ಅರ್ಚಕನಿಗೆ ಮೆತ್ತಗೆ "ಕಲ್ಲನ್ನು ಇಲ್ಲಿ ನೆಟ್ಟು ಈ ದೇವರನ್ನು ಎಬ್ಬಿಸಿದೆ. ಇದು ಇಷ್ಟಕ್ಕೆ ಬಂತು. ಈಗ ಸದ್ಯಕ್ಕೆ ನೀನು ಸುಮ್ಮನಿರು" ಎಂದು ಹೇಳಿ ಮುಂದೆ ಬಂದು "ಏನಯ್ಯ ಸಮಾಚಾರ? ಯಾಕೆ ಎಲ್ಲಾ ಇಲ್ಲಿ ನಿಂತಿದ್ದೀರಿ? ನಡೆಯಿರಿ. ನಮ್ಮ ಪೂಜೆಯೂ ಆಯಿತು. ಎಲ್ಲಿ ಎಲ್ಲರಿಗೂ ತೀರ್ಥಕೊಡಿರಿ, ಅರ್ಚಕರೆ" ಎಂದರು. ಅನಂತರ ಅರ್ಚಕನು ಎಲ್ಲರಿಗೂ ತೀರ್ಥವನ್ನು ಕೊಟ್ಟನು. ದೊಳ್ಳನೂ ತೀರ್ಥವನ್ನು ತೆಗೆದುಕೊಂಡನು. ರೈತರು ಯಾವುದೋ ಉದ್ದೇಶದಲ್ಲಿ ಭಂಗವನ್ನು ಹೊಂದಿದ್ದವರಂತೆ ದುಮ್ಮಾನದಿಂದ ಮನೆಗಳಿಗೆ ಹೋದರು. ಜೋಯಿಸನ ಸಲಹೆಯಂತೆ ಬ್ರಾಹ್ಮಣರು ಯಾರೂ ರಣಗಂಬವು ಬದಲಾವಣೆಯಾದ ವಿಷಯವನ್ನು ಪ್ರಸ್ತಾಪಿಸಲಿಲ್ಲ. ಅವರೆಲ್ಲಾ ಹನುಮಂತರಾಯನ ಗುಡಿಯ ಮುಂದೆ ತಿರುಗುವುದನ್ನೇ ಬಿಟ್ಟರು. ಅರ್ಚಕ ಒಬ್ಬನ ಹೊರತು ಮತ್ತಾರೂ ಹನುಮಂತರಾಯನ ಗುಡಿಯ ಮುಂದೆ ಕಣ್ಣಿಗೆ ಬೀಳುತ್ತಿರಲಿಲ್ಲ. ದೊಳ್ಳನು "ಅಯ್ಯಗಳಿಗೆ ನಮ್ಮಲ್ಲಿ ಬೇಜಾರು ಬಂತು. ಜಾತ್ರೆ ಆಗುವುದಕ್ಕೆ ಮುಂಚೆಯೇ ಅವರಿಗೆ ಗಾಬರಿಯಾಗಿರಬಹುದು. ಅದಕ್ಕೆ ಈ ಕಡೆ ತಿರುಗೋದನ್ನೇ ಬಿಟ್ಟಿದ್ದಾರೆ. ಈಗಲೇ ಹಿಂಗಾದ ಮೇಲೆ

ಜಾತ್ರೆಯಾದ ಏಳು ತಿಂಗಳು ಅವರು ಈ ಕಡೆ ಬರೋಕಿಲ್ಲ" ಎಂದುಕೊಂಡನು. ಜೋಯಿಸ ಒಬ್ಬ ಮಾತ್ರ ದೊಳ್ಳನೊಂದಿಗೆ ಸ್ನೇಹವಾಗಿಯೇ ಇದ್ದನು.

ಜೋಯಿಸನ ಬಳಿಗೆ ರೈತರು ಒಂದಿಲ್ಲ ಒಂದು ಕಾರಣದಿಂದ ನಿತ್ಯಾ ಬರುತ್ತಿದ್ದರು. "ಇವತ್ತು ದನ ಉಚ್ಚಿತು. ಏನು ಮಾಡಬೇಕು?" "ಮಳೆ ಯಾವಾಗ ಬರುತ್ತೆ?" "ಹೆಸರಿನ ಬಲ ಹೇಗೆ?" "ಗ್ರಹಚಾರ ಕ್ರೂರವಾಗಿರುವುದು ಸರಿಯಾಗಬೇಕಾದರೆ ಯಾವಾಗ?" "ತಪ್ಪಿಸಿಕೊಂಡು ಹೋದ ಎಮ್ಮೆ ಯಾವ ದಿಕ್ಕಿನಲ್ಲಿ ಇರಬಹುದು?" "ಅಟ್ಟು ಗದ್ದೆಯಲ್ಲಿ ಹಾಳಾದ ಕಾಲುಂಗುರ ಸಿಕ್ಕುತ್ತದೆಯೇ?" "ಹಲ್ಲಿ ಬಿದ್ದುದರ ಫಲ ಹೇಗೆ?" ಹೀಗೆ ನೂರಾರು ರೈತರು ಬಂದು ನಿತ್ಯಾ ಜೋಯಿಸನಿಗೆ ನೂರಾರು ಪ್ರಶ್ನೆಗಳನ್ನು ಹಾಕುತ್ತಿದ್ದರು. ಅವರಿಗೆ ಶಾಸ್ತ್ರವನ್ನು ನೋಡಿ ಹೇಳುವುದರಲ್ಲಿ ಜೋಯಿಸನಿಗೆ ಮೊದಲಿಗಿಂತಲೂ ಈಚೆಗೆ ಉತ್ಸಾಹ ಹೆಚ್ಚಾಗಿತ್ತು. ಬರಬರುತ್ತಾ ಅವನು ಒಂದೊಂದು ಸಲ ಊರಿನ ಯೋಗಕ್ಷೇಮವನ್ನು ದೇವರುಗಳ ಆಗ್ರಹ ಪ್ರಸನ್ನತೆಯನ್ನೂ ಕುರಿತು ಮಾತನಾಡುತ್ತಿದ್ದನು. ರೈತರು ಆಸೆಯಿಂದಲೂ ಭಯದಿಂದಲೂ ಜೋಯಿಸನ ಮಾತುಗಳನ್ನು ಕೇಳುತ್ತಿದ್ದರು. ಜೋಯಿಸನ ಬಾಯಿಂದ ಸ್ಪಷ್ಟವಾಗಿ ಹೊರಡದಿದ್ದರೂ, ಊರಮುಂದಲ ಆಂಜನೇಯನ ಗದ್ದದಲ್ಲಿ ಆರುಕಾಸಿನಗಲದ ಚಕ್ಕೆಯು ಹಾರಿಹೋಗಿರುವುದು ಊರಿನವರಿಗೆಲ್ಲಾ ತಿಳಿದು ಆಂಜನೇಯನ ಗುಡಿಗೆ ನಿತ್ಯಾ ನೋಡಲು ಬರುವವರ ಸಂಖ್ಯೆ ಹೆಚ್ಚಾಯಿತು. ಬರಬರುತ್ತಾ ಸುತ್ತಲ ಹತ್ತು ಹಳ್ಳಿಯ ಜನರೂ ಆಂಜನೇಯನ ಮಚ್ಚೆಯನ್ನು ನೋಡಲು ಬರಲು ಪ್ರಾರಂಭವಾಯಿತು. ಯಾವ ಹಳ್ಳಿಯಲ್ಲಿ ಯಾವ ಅವಿವೇಕ ನಡೆದರೂ ಅದಕ್ಕೆಲ್ಲಾ ಆಂಜನೇಯನ ಮಚ್ಚೆಯೇ ಕಾರಣವೆಂದು ಜನ ಹೇಳತೊಡಗಿದರು. ಕೋಟೆಕೊರದ ರೈತರಿಗೆ ದೊಳ್ಳ ಆಂಜನೇಯನ ಕೆನ್ನೆಗೆ ದೊಣ್ಣೆಯಲ್ಲಿ ಬಿಟ್ಟುದು ಒಪ್ಪಿಗೆಯಾಗಿರಲಿಲ್ಲ. ಆದರೆ ಅವನು ಮಾಡಿದುದು ತಪ್ಪು ಎಂದು ಹೇಳುವ ಧೈರ್ಯ ಅವರಿಗೂ ಇರಲಿಲ್ಲ. ಆದರೆ ಉಳಿದ ಹಳ್ಳಿಗಳ ರೈತರಿಗೆಲ್ಲಾ ದೊಳ್ಳನ ಮೇಲೆ ದ್ವೇಷವೇ ಉಂಟಾಗಿತ್ತು. ಜೋಯಿಸ ಮಾತ್ರ "ಮಾರಿಜಾತ್ರೆ ಸರಿಯಾಗಿ ನಡೆದುಬಿಟ್ಟರೆ ಈ ದೋಷ ಪರಿಹಾರವಾಗುತ್ತೆ ದೇವರುಗಳೆಲ್ಲಾ ಒಂದೇ" ಎಂದಿದ್ದನು. ರೈತರು ಆ ಆಸೆಯಿಂದ ಸುಮ್ಮನಿದ್ದರು.

ದೊಳ್ಳನು ಜಾತ್ರೆಗೆ ಅನೇಕ ಸಿದ್ಧತೆಗಳನ್ನು ಮಾಡಿದನು. ಒಟ್ಟು ಹನ್ನೆರಡು ಕೋಣಗಳು ಮೊದಲು ಗೊತ್ತಾಗಿದ್ದರೂ, ಜಾತ್ರೆ ನಿಂತುಹೋಗಿದ್ದ ಪ್ರತಿ ಒಂದು ವರುಷಕ್ಕೂ ಒಂದೊಂದು

ಕೋಣಗಳು ಆಗಬೇಕೆಂದು ಹದಿನೈದಕ್ಕೆ ಏರಿಸಿದನು. ಸಾವಿರಾರು ಕುರಿಗಳೂ ಆಡುಗಳೂ ಅಸಂಖ್ಯಾತವಾದ ಕೋಳಿಗಳೂ ಬೀಳುವುದರಲ್ಲಿ ಸಂದೇಹವಿರಲಿಲ್ಲ.

ಮಾರಿಹಬ್ಬ ನಡೆಯಬೇಕೆಂದು ಗೊತ್ತಾಗಿದ್ದುದು ಒಂದು ಮಂಗಳವಾರ ರಾತ್ರಿ. ಆ ರಾತ್ರಿ ಹನ್ನೆರಡು ಗಂಟೆಗೆ ಪಟ್ಟದ ಕೋಣವನ್ನು ಕಡೆಯಬೇಕೆಂದು ತೀರ್ಮಾನವಾಗಿದ್ದಿತು. ಸೋಮವಾರ ಬೆಳಿಗ್ಗೆ ಜೋಯಿಸನು ತಾನು ೮-೧೦ ಮೈಲಿ ಆಚೆಯ ಮಲಸೀಮೆಹಳ್ಳಿಗೆ ಹೋಗುವುದಾಗಿಯೂ ಮಾರಿಹಬ್ಬ ಮುಗಿದ ೩-೪ ದಿನಗಳ ನಂತರ ಹಿಂದಿರುಗುವುದಾಗಿಯೂ ತನ್ನಲ್ಲಿಗೆ ಶಾಸ್ತ್ರಕ್ಕೆ ಬಂದಿದ್ದವರೊಂದಿಗೆ ಹೇಳಿದನು. ಅನಂತರ ಆ ದಿನವೆಲ್ಲಾ ಅವನ ಮುಖವನ್ನು ಯಾರೂ ಕಾಣಲಿಲ್ಲ. ಸೋಮವಾರ ರಾತ್ರಿ ಕೋಟಿಕೊರದಲ್ಲಿ ಎಲ್ಲೂ ಇಲ್ಲದ ಕುಂಭದ್ರೋಣ ಮಳೆ ಸುರಿಯಿತು. ಆಕಾಶವು ಭಯಂಕರವಾಗಿ ಮೊರೆಯುತ್ತಿದ್ದಿತು. ಮಿಂಚು ಅಪ್ಪಳಿಸುತ್ತಿತ್ತು. ಸಿಡಿಲಿನ ಅಬ್ಬರವು ಎದೆ ನಡುಗಿಸುತ್ತಿತ್ತು. ಮಳೆ ರಾತ್ರಿಯಿಂದ ಬೆಳಗಿನವರೆಗೆ ಒಂದೇ ಸಮವಾಗಿ ಒಂದು ಗಳಿಗೆಯೂ ಬಿಡುವು ಕೊಡದೆ ಚಚ್ಚಿ ಕೆಡವಿತು.

ಬೆಳಗಾದ ಕೂಡಲೇ ಸುಖವಾಗಿ ಬೆಚ್ಚಗೆ ಬಿಸಿಲು ಬಂದಿತು. ದೊಳ್ಳನ ಮನೆಯಿಂದ ಪಟ್ಟದ ಕೋಣವನ್ನು ಊರ ಸುತ್ತ ಮೆರವಣಿಗೆ ಮಾಡುವುದಕ್ಕಾಗಿ ಮಾರಿ ದೇವಸ್ಥಾನದ ಬಳಿಗೆ ಹೊಡೆದುಕೊಂಡು ಬಂದರು. ಕೋಣದ ನೆತ್ತಿಗೆ ಹಚ್ಚುವುದಕ್ಕೆ ದೇವರ ಮುಖದ ಮೇಲಿದ್ದ ಕಾಡಿಗೆಯನ್ನೂ ಕುಂಕುಮವನ್ನೂ ತೆಗೆದುಕೊಳ್ಳಲು ಪಟೇಲ ಹಾರೇಗೌಡನು ಮಾರಿಯಮ್ಮನಲ್ಲಿಗೆ (ಕಲ್ಲಿನ ದೇವಸ್ಥಾನ ಸಣ್ಣದಾಗಿರುವುದರಿಂದ) ಬಗ್ಗಿದನು. ಬಗ್ಗಿದವನೇ ಹಿಂದಕ್ಕೆ ಹಾ ಎಂದು ಬೆಚ್ಚಿಬಿದ್ದನು. ರೈತರೆಲ್ಲಾ ಮುಂದೆ ಬಂದು “ಏನು ಏನಾಯಿತು” ಎಂದು ಕೂಗಿಕೊಂಡರು. ದೊಳ್ಳನೂ ದೇವರ ಮುಂದಕ್ಕೆ ಬಂದನು. ಮಾರಿಯಮ್ಮನ ಮುಖದ ಮೇಲೆ ಅಂಟಿಸಿದ್ದ ಟಿನ್‌ನ ಕಣ್ಣುಗಳೂ ಮೂಗೂ ಹಲ್ಲೂ ಇರಲಿಲ್ಲ. ಅರಸಿನ ಕುಂಕುಮ ಯಾವುದೂ ಇರಲಿಲ್ಲ. ಬರವಣಿಗೆಯೂ ಇರಲಿಲ್ಲ. ಆದರೆ ಅಲ್ಲಿ ನಿಂತಿದ್ದುದು ಮಾರಿಯಮ್ಮನ ಕಲ್ಲೇ ಎಂಬುದರಲ್ಲಿ ಯಾರಿಗೂ ಸಂದೇಹವಿರಲಿಲ್ಲ. ಎಲ್ಲರೂ ಗಾಬರಿಯಿಂದ ಯೋಚಿಸುತ್ತಿರುವಾಗ ಹಾರೇಗೌಡನು “ಮಾರಿಯಮ್ಮ ತಿರಗವಳೆ” ಎಂದನು. ರೈತರಿಗೆಲ್ಲಾ ಏನೋ ಅನಿಷ್ಟ ಬಂದಂತೆ ಭಾಸವಾಯಿತು. ಎಲ್ಲರೂ ದೊಳ್ಳನನ್ನು ನುಂಗುವಂತೆ ಅವನ ಕಡೆಯೇ ನೋಡತೊಡಗಿದರು. ದೊಳ್ಳನಿಗೆ ಪ್ರಾಣವೇ ಹೋದಂತೆ ಆಯಿತು.

ಒಂದೆರಡು ಗಂಟೆಗಳೊಳಗೆ ಸುತ್ತಲ ಹನ್ನೆರಡು ಹಳ್ಳಿಯ ಜನಗಳೂ ಕೋಟೆಕೊರದಲ್ಲಿ ಸೇರಿದರು. “ಮಾರ್ಯಮ್ಮ ತಿರಗವಳೆ, ಮುನಿಸಿಕೊಂಡವಳೆ. ಇದು ಊರಿಗೆ ಅನಿಷ್ಟ, ಇದ್ಕೆ ಶಾಂತಿ ಕಟ್ಟುಕವಣೆ ಮಾಡಬೇಕು. ದೊಳ್ಳ ಘಾತುಕ. ಊರ ಮುಂದಲ ಆಂಜನೇಯನ ಮುಖ ಒಡೆದ. ಅಮ್ಮ ಸುಮ್ನೆ ಬಿಡ್ತಾಳ್ಯೆ. ಊರ ತಕ್ಕೋತಾಳೆ” ಎಂದು ಅವರು ರೇಗಾಡತೊಡಗಿದರು. ಪಟೇಲ ಹಾರೇಗೌಡನು, “ಎಲ್ಲಿ ಜೋಯಿಸರ ಬಳಿಗೆ ಹೋಗೋಣ. ಇದು ಹುಡುಗಾಟವಲ್ಲ. ಅಯ್ಗೊಳೆಲ್ಲಾ ಸೇರಿಸಿ ಯೋಚನೆ ಮಾಡೋಣ” ಎಂದನು. ಅಷ್ಟು ಜನರೂ ಬ್ರಾಹ್ಮಣರ ಬೀದಿಗೆ ಬಂದು ಜೋಯಿಸರ ಮನೆ ಬಾಗಿಲಿಗೆ ಹೋದರು. ಜೋಯಿಸರು ಊರಲ್ಲಿ ಇರಲಿಲ್ಲ. ಮಲಸೀಮೆಹಳ್ಳಿಗೆ ಹೋಗುವುದಾಗಿ ಹೇಳಿ ಮೊದಲ ದಿವಸ ಬೆಳಿಗ್ಗೆ ಹೋದುದು ಹಾರೇಗೌಡನಿಗೆ ಜ್ಞಾಪಕಕ್ಕೆ ಬಂದಿತು. ಹಳ್ಳಿಗೇ ಒಬ್ಬ ಆಳನ್ನು ಓಡಿಸಿದರು. ದೊಳ್ಳನು ಮಾತ್ರ “ಇದರಲ್ಲಿ ಏನೋ ತಗಲೂಫಿ ಅಯ್ತೆ” ಎಂದುಕೊಂಡು ಆ ತಗಲೂಫಿಯನ್ನು ಕಂಡುಹಿಡಿಯಲು ಪ್ರಯತ್ನಿಸುತ್ತಿದ್ದನು.

ಮಧ್ಯಾಹ್ನ ೧೨ ಗಂಟೆಗೆ ಜೋಯಿಸ ಮುಖವನ್ನು ಒಣಗಿಸಿಕೊಂಡು ಆಳಿನ ಜತೆಯಲ್ಲಿ ಬಂದನು. “ಮಾರ್ಯಮ್ಮ ತಿರಗವಳೆ” ಎಂಬುದನ್ನು ಕೇಳಿ ಅವನಿಗೆ ಬಹಳ ಆಶ್ಚರ್ಯವಾಗಿತ್ತು. ಅವನು “ಮಾಡಬಾರದುದನ್ನು ಮಾಡಿದರೆ ಆಗಬಾರದುದು ಆಗುತ್ತೆ. ದೊಳ್ಳ ಹನುಮಂತರಾಯನ ಮುಖ ಒಡೆದಾಗ ಈ ಊರಿಗೆ ಏನಾದರೂ ಅನಿಷ್ಟ ಸಂಭವಿಸುತ್ತದೆ ಎಂದು ನನಗೆ ಗೊತ್ತಿತ್ತು. ಆದರೆ ಇದು ಇಷ್ಟು ಬೇಗ ಹೀಗೆ ಆಗುವುದೆಂದು ನನಗೆ ತಿಳಿದಿರಲಿಲ್ಲ. ’ಆಕಾಶವಾಣಿಯನ್ನು ಆಲಿಸುತ್ತಾ ಕಾಲಿನ ಬಳಿ ಭೂಮಿ ಬಿರಿಯುತ್ತಿರುವುದನ್ನು ಕಾಣದವನ’ ಸ್ಥಿತಿಯಂತೆ ಆಗಿದೆ ನಮ್ಮ ಸ್ಥಿತಿ. ಆಂಜನೇಯ ಮುನಿಸಿಕೊಂಡರೆ ಚಿಂತೆಯಿಲ್ಲ. ಆದರೆ ಮಾರ್ಯಮ್ಮ ಮುನಿಸಿಕೊಂಡರೆ ನಮ್ಮ ಕೆಲಸ ಮುಗಿಯಿತು” ಎಂದನು. ಕೊನೆಗೆ ರಾತ್ರಿಯವರೆಗೆ ಅಸಾಧ್ಯವಾದ ಚರ್ಚೆಗಳಾಗಿ ಮಧ್ಯೆ ಮಧ್ಯೆ ಕೈ ಕೈ ಹತ್ತುವ ಸ್ಥಿತಿಗೆ ಬಂದು ಕೊನೆಗೆ ಹನ್ನೆರಡು ಹಳ್ಳಿಯ “ಮಹಾನ್ಯರೂ” ಸೇರಿ ಈ ತೀರ್ಮಾನಕ್ಕೆ ಬಂದರು.

(೧) ದೊಳ್ಳನು ಮಾರಿಯಮ್ಮನ ಮುಂದೆ ನೆಟ್ಟಿದ್ದ ರಣಗಂಬವನ್ನು ಕಿತ್ತು ಆಂಜನೇಯನ ಮುಂದೆ ನೆಟ್ಟುದು ತಪ್ಪು. ಈ ತಪ್ಪಿಗೆ ನೂರು ರೂಪಾಯಿ ದಂಡವನ್ನು ಅವನು ಊರೊಟ್ಟಿಗೆ ಕಾಣಿಕೆಯಾಗಿ ಕೊಡಬೇಕು.

(೨) ಆಂಜನೇಯನನ್ನು ದೊಣ್ಣೆಯಿಂದ ಹೊಡೆದು ಅವನ ಗದ್ದವನ್ನು ಹಾರಿಸಿದ್ದು ದೊಡ್ಡ ತಪ್ಪು. ಘಾಯವಾಗಿರುವ ಸ್ಥಳಕ್ಕೆ ಒಂದು ಚಿನ್ನದ ಪದಕವನ್ನು ಮಾಡಿಸಿ ಹಾಕಿಸಬೇಕು.

(೩) ಮಾರ್‍ಯಮ್ಮ ಊರಿನಿಂದ ವಿಮುಖವಾಗಿದ್ದಾಳೆ. ಮತ್ತೆ ಅವಳನ್ನು ಊರ ಕಡೆಗೆ ತಿರುಗಿಸಬೇಕಾದರೆ ಅನೇಕ ಅನ್ನದಾನಗಳು ಆಗಬೇಕು. ಹತ್ತು ತೊಲ ಚಿನ್ನವನ್ನಾದರೂ ಮಾರಿಯಮ್ಮನಿಗೆ ಕೊಡಿಸಬೇಕು. ಇದೆಲ್ಲಾ ಆದಮೇಲೆ ದೊಳ್ಳನು ತಿರುಪತಿಗೆ ಯಾತ್ರೆ ಹೋಗಿ, ತಲೆ ಬೋಳಿಸಿಕೊಂಡು ವೆಂಕಟರಮಣನಿಗೆ ಕಪ್ಪಕಾಣಿಕೆ ಒಪ್ಪಿಸಿ ಬರಬೇಕು.

ಈ ಖರ್ಚೆಲ್ಲ ಸುಮಾರು ಒಂದು ಸಾವಿರ ರೂಪಾಯಿಗಳವರೆಗೆ ಬಂದಿತು. ದೊಳ್ಳನು "ನಾನು ಒಂದು ಕಾಸೂ ಕೊಡೋಕಿಲ್ಲ. ಆದ್ದಂಗೆ ಆಗಲಿ" ಎಂದನು. ಜೋಯಿಸರು ಸುಮ್ಮನೆ ಕುಳಿತಿದ್ದರು. ನೆರೆದಿದ್ದ ಸುಮಾರು ೨೦೦೦ ಜನರೂ ಕೋಪದಿಂದ ದೊಳ್ಳನ ಕಡೆ ನೋಡಿದರು. ದೊಳ್ಳನಿಗೆ ಮೈ ನಡುಗಿ ಕೈಕಾಲು ತಣ್ಣಗಾಯಿತು. ಅವನು "ಸತ್ತೆ ಸತ್ತೆ" ಎಂದು ಗೋಳಿಟ್ಟನು. ಹಾರೇಗೌಡನು ಅವನ ಆಸ್ತಿಯನ್ನೆಲ್ಲಾ ಆಧಾರ ಮಾಡಿಸಿಕೊಂಡು ಸಾಲವನ್ನು ಕೊಟ್ಟನು. ಎರಡು ದೇವರ ಸೇವೆಗಳೂ ಸಾಂಗವಾಗಿ ನೆರವೇರಿದವು.

ದೊಳ್ಳನಿಗೆ, ಆಧಾರ ಮಾಡಿದ್ದ ಆಸ್ತಿಯನ್ನೂ ಮನೆಯನ್ನೂ ಬಿಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಹಂದಿಯನ್ನು ಸಾಕುವುದನ್ನೂ ಅವನು ಬಿಟ್ಟನು. ಅಲ್ಲಿಂದ ಕೂಲಿ ಮಾಡುವುದೇ ಅವನ ಕಸಬಾಯಿತು.

ದೊಳ್ಳನಿಗೆ ಅಜೀರ್ಣವಾಗಿದ್ದಾಗ ಒಂದು ದಿನ ಅವನಿಗೆ ಔಷಧಿಯನ್ನು ಕೊಡಿಸಲು ಜೋಯಿಸರು ಅವನ ಮನೆಗೆ ಬಂದರು. ದೊಳ್ಳನು "ಮಾರಿಜಾತ್ರೆ ಹರಕೆ ನಡೆಸಲಿಲ್ಲ. ಅದ್ರೆ ಜಡೆಮುನಿ ಬಿಡ್ದೆ ಇನ್ನೂ ನನ್ನ ಕಾಡ್ತದೆ" ಎಂದನು.

# ಗಂಡುಬೀರಿ ಹೊಸಬಿ

ಹೆಂಡ ಕುಡಿಯುವುದನ್ನು ಕಂಡರೆ ಜನಗಳಿಗೆ ಯಾಕೆ ಜುಗುಪ್ಸೆಯೋ ಅದನ್ನು ತಿಳಿಯುವುದು ನಮ್ಮ ಊರ ಬೋರನಿಗೆ ಕಷ್ಟವಾಗಿದೆ. ಬೋರನ ಅಭಿಪ್ರಾಯದಲ್ಲಿ "ಅಯ್ಗೋಳು ಕಾಫಿ ಕುಡ್ಯೊ ಹಂಗೆ ಅಯ್ಗೊಳಲ್ಲದೋರು ಹೆಂಡ ಕುಡಿಯೋದು." ಅವನು ನಮ್ಮ ಊರ ಪೂಜಾರಿಯೊಂದಿಗೆ ಒಂದು ಸಲ "ಪೂಜಾರಿ ಐನೋರು, ಹೆಂಡದ ನೀರು ಕಂಡ್ರೆ ನಿಮ್ಗ್ಯಾಕೆ ಅಷ್ಟು ಕೋಪ? ನೀವು ನಿತ್ಯ ಮೂರು ಹೊತ್ತು ಚೊಂಬಲ್ಲಿ ಕಾಸಿ ಕುಡ್ಯೋಕಿಲ್ವ? ಕಾಫಿ ಅನ್ನೋದು ಬೀಜದ ಪುಡಿ. ಹೆಂಡ ಅನ್ನೋದು ಮರದ ರಸ, ಹೆಂಡದಲ್ಲಿ ಮಾಂಸ ಅಯ್ತೆ? ಮಡ್ಡಿ ಅಯ್ತೆ? ನೀವು ದೇವರ್ಗೆ ಕಾಫಿ ನೇವೇದ್ಯ ಮಾಡೊಹಂಗೆ ನಾವು ಹೆಂಡ ಮಾರ್‍ಯಮ್ಮನ್ಗೆ ನೇವೇದ್ಯ ಮಾಡ್ತಿವಿ. ಅದ್ಕ್ಯಾಕಪ್ಪ ರೇಗ್ತೀರಿ?" ಎಂದಿದ್ದನು.

ಬೋರನು ಒಕ್ಕಲಿಗ. ಒಕ್ಕಲಿಗರಲ್ಲಿ ಹೆಂಡ ಕುಡಿಯದ ಒಕ್ಕಲಿಗರು, ಕುಡಿಯುವ ಒಕ್ಕಲಿಗರು ಎಂಬುದಾಗಿ ಎರಡು ಪಂಗಡದವರಿದ್ದಾರೆ. ಆ ಎರಡು ಪಂಗಡದಲ್ಲಿ ಹೆಣ್ಣು ಕೊಟ್ಟು ತರುವ ವಾಡಿಕೆ ಸಹ ಇಲ್ಲ. ಕುಡಿಯದವರ ದೇವಸ್ಥಾನ, ಪೂಜೆ, ಮದುವೆ, ಊಟ ಮುಂತಾದವುಗಳಿಗೆ ಕುಡಿಯುವವರನ್ನು ಸೇರಿಸುವುದಿಲ್ಲ. ಬೋರನು ಹುಟ್ಟಿನಿಂದ ಕುಡಿಯುವವರ ಪಂಗಡಕ್ಕೆ ಸೇರಿದವನಲ್ಲ. ಆದರೆ ಅವನ ಹೆಂಡತಿಯು ಕುಡಿಯುವವರ ಪಂಗಡಕ್ಕೆ ಸೇರಿದವಳು; ಕುಲದವರ ಇಷ್ಟಕ್ಕೆ ವಿರೋಧವಾಗಿ ಅವನು ಅವಳನ್ನು ಮದುವೆಯಾಗಿದ್ದನು. ಬೋರನು ಕುಡಿಯುವುದನ್ನು ಕಂಡರೆ ಅವಳಿಗೆ ಸೇರುತ್ತಿರಲಿಲ್ಲ. ಅವನು ಮೊದಲು ಮೊದಲು ಹೆಂಡತಿಗೆ ತಿಳಿಯದಂತೆ ಕುಡಿಯುತ್ತಿದ್ದವನು ಬರಬರುತ್ತಾ "ಅಯ್ಗೋಳೆ (ಕಾಫಿ) ಕುಡೀತಾರೆ ನಾನ್ಯಾಕೆ ಕುಡೀಬಾರದು?" ಎಂಬುದಾಗಿ ಹೇಳಿಕೊಂಡು ಮುಚ್ಚುಮರೆಯಿಲ್ಲದೆ ಕುಡಿಯಲು ಪ್ರಾರಂಭಿಸಿದನು.

ಬೋರನು ಒಕ್ಕಲಿಗನಾದರೂ ಅವನ ಕಸಬು ಕುರುಬನದಾಗಿತ್ತು; ಅವನಿಗೆ ಹೆಚ್ಚಾಗಿ ಜಮೀನಿರಲಿಲ್ಲ. ಮೇವಿಗೂ ನೀರಿಗೂ ದರಿದ್ರವಿಲ್ಲದ ನಮ್ಮ ಮಲೆನಾಡು ಸೀಮೆಯಲ್ಲಿ ಕುರಿಗಳನ್ನು ಸಾಕುವುದು ಬಹಳ ಸುಲಭ. ಬೋರನು ಕೆಲವು ಕುರಿಗಳನ್ನು ಸಾಕಲು ಪ್ರಾರಂಭಿಸಿದನು. ಅವನ ಹತ್ತಿರ ಬಲಿಷ್ಟವಾದ ಒಂದು ನಾಯಿಯೂ ಇತ್ತು. ಅವನು ಕುರಿಗಳನ್ನು ಹೊಡೆದುಕೊಂಡು ಉಳಿದ ಕುರಬರ ಜತೆಯಲ್ಲಿ ಕಾಡಿನಲ್ಲೆಲ್ಲಾ ಅಲೆದಾಡುತ್ತಿದ್ದನು. ಒಳ್ಳೆಯ ಚಿಗುರೂ ಸೊಪ್ಪು ಇರುವ ಕಡೆ

ಅವರು ಗುಡಿಸಲುಗಳನ್ನು ಹಾಕಿಕೊಂಡು ಕುರಿಗಳನ್ನು ಮೇಯಿಸುತ್ತಾ ತಿಂಗಳುಗಟ್ಟಳೆ ಕಾಲವನ್ನು ಕಳೆಯುತ್ತಿದ್ದರು. ಮಲೆನಾಡಿನ ಆ ಬಿಡುವಿಲ್ಲದ ಮಳೆ, ಚಳಿ, ಸೊಳ್ಳೆಗಳು, ಕಾಡಿನಲ್ಲಿ ಅಲೆಯುವುದರಿಂದ ಉಂಟಾಗುತ್ತಿದ್ದ ದೇಹಶ್ರಮ, ಜತೆಗಾರರು ಇವೆಲ್ಲವುಗಳ ಫಲವಾಗಿ ಬೋರನು ಹೆಂಡವನ್ನು ಕುಡಿಯಲು ಪ್ರಾರಂಭಿಸಿದನು. ಬರಬರುತ್ತಾ, ಆ ಅಭ್ಯಾಸವೇ ಬಲವಾಯಿತು. ಆ ಕಾಲದಲ್ಲಿ ಮಲೆನಾಡ ಸೀಮೆಯ ಕಾಡುಗಳಲ್ಲಿ ಎಲ್ಲೆಲ್ಲಿ ಒಳ್ಳೆಯ ಮೇವು ಸಿಕ್ಕುತ್ತದೆ, ಎಲ್ಲೆಲ್ಲಿ ಚಿಗುರು ಸಿಕ್ಕುತ್ತದೆ ಎಂಬುದನ್ನು ಬೋರನಷ್ಟು ಚೆನ್ನಾಗಿ ತಿಳಿದಿದ್ದವರು ಮತ್ತಾರೂ ಇರಲಿಲ್ಲ. ಆ ಅಲೆದಾಟದಲ್ಲಿ ದಾರಿಯಲ್ಲಿ ದೊರೆತ ಕಡೆಗಳಲ್ಲೆಲ್ಲಾ ಬೋರನು ಹೆಂಡವನ್ನು ಬೇಕಾದಷ್ಟು ಕುಡಿಯುತ್ತಿದ್ದನು. ಒಳ್ಳೆಯ ಸ್ವಭಾವದ ಅವನು ತನ್ನ ಜತೆಯ ಕುರುಬರಿಗೆಲ್ಲಾ ಹೆಂಡವನ್ನು ಕೊಡಿಸುತ್ತಿದ್ದನು. ಇದರಿಂದ ಅವನ ಗೌರವವೂ ಹೆಸರೂ ಪ್ರಸಿದ್ಧಿಯೂ ನಮ್ಮ ಹಳ್ಳಿಯ ಸುತ್ತ ಹೆಚ್ಚಾಯಿತು. ಆ ಪ್ರಸಿದ್ಧಿಯ ಜತೆಯಲ್ಲಿ ಅವನ ದುಡ್ಡೂ ಕಡಮೆಯಾಯಿತು.

ಬೋರನ ಸಂಪಾದನೆ ಚೆನ್ನಾಗಿರುವವರೆಗೆ ಅವನು ಉತ್ಸಾಹದಿಂದಲೇ ಇದ್ದನು. ಬಳಿಕ ಅವನಿಗೆ ಒಟ್ಟಿಗೆ ಎರಡು ಕಷ್ಟಗಳು ಸಂಭವಿಸಿದುವು. ಮೊದಲನೆಯದಾಗಿ, ಅವನ ಹೆಂಡತಿಯು ಕಾಲವಾದಳು. ಎರಡನೆಯದಾಗಿ, ಬೋರನು ಕಾಡಿನಲ್ಲಿ ಅಲೆಯುತ್ತಿರುವಾಗ ಒಂದು ದಿವಸ ಒಂದು ಮರದ ಬೇರನ್ನು ಎಡವಿ ಬಿದ್ದನು. ಬಿದ್ದ ಜೋರಿಗೆ ಅವನ ತೊಡೆಗಳು ಜಜ್ಜಿ ಹೋದುವು. ಅಲ್ಲಿಂದ ಮುಂದೆ ಅವನ ಎರಡು ಕಾಲೂ ಕುಂಟಾಗಿ ಅವುಗಳ ಸ್ವಾಧೀನ ಅವನಿಗೆ ತಪ್ಪಿ ಹೋಯಿತು.

ಮನುಷ್ಯನಿಗೆ ಬರುವ ಕಷ್ಟಗಳು ಅವನಲ್ಲಿ ದೌರ್ಬಲ್ಯವನ್ನು ಹೆಚ್ಚಿಸುತ್ತವೆ. ಬೋರನು ಕುಂಟಾಗಿ ಮನೆಯಲ್ಲಿ ಕೂತಕೂಡಲೆ ಅವನಿಗೆ ಪ್ರಪಂಚದ ಮೇಲೆ ಜುಗುಪ್ಸೆಯುಂಟಾಯಿತು. ಅವನಲ್ಲಿ ಸ್ವಾಭಾವಿಕವಾಗಿದ್ದ ಸುಗುಣಗಳು ಮರೆಯಾಗಿ ಕುಡಿತವೇ ಹೆಚ್ಚಾಯಿತು. ಅವನಿಗೆ ಯಾವುದರಲ್ಲಿಯೂ ಸಮಾಧಾನವಿರಲಿಲ್ಲ. ಯಾರಲ್ಲಿಯೂ ಸ್ನೇಹವಿರಲಿಲ್ಲ. ದೇವರು ತನಗೆ ಅನ್ಯಾಯ ಮಾಡಿದನೆಂದೂ ಪ್ರಪಂಚವೆಲ್ಲಾ ತನಗೆ ಎದುರಾಗಿ ತಾನು ಮಾತ್ರ ದುಃಖದಲ್ಲಿ ಇರುವೆನೆಂದೂ ಅವನು ಯೋಚಿಸತೊಡಗಿದನು.

ಬೋರನಿಗೆ ಮೂವರು ಮಕ್ಕಳಿದ್ದರು. ಸಂಪಾದನೆ ಇರಲಿಲ್ಲ; ಮಕ್ಕಳನ್ನು ನೋಡಿಕೊಳ್ಳಲು ಹೆಂಡತಿ ಇರಲಿಲ್ಲ. ಇದರಿಂದ ಅವನು ಹೆದರಿದನು. ಉಪಾಯ ತೋರದೆ ತನ್ನ ಹಿರಿಯ ಮಗಳಾದ ಹೊಸಬಿಯನ್ನು ನಮ್ಮೂರಿನ ಶ್ಯಾನುಭೋಗರ ಮನೆಯಲ್ಲಿ ಜೀತಕ್ಕೆ

ಹಾಕಬೇಕೆಂದು ಯೋಚಿಸಿದನು. ಹೊಸಬಿಗೆ ಹದಿನಾಲ್ಕು ವಯಸ್ಸು, ಗಟ್ಟಿಮುಟ್ಟಾದ ಹುಡುಗಿ. ಅವಳು ಬೋರನ ಏರ್ಪಾಡಿಗೆ ಒಪ್ಪಲಿಲ್ಲ. ತಾನು ಸಂಸಾರ ನಡೆಸಿಕೊಂಡು ಹೋಗುವೆನೆಂದೂ ಅದಕ್ಕಾಗಿ ಬೋರನು ಯೋಚಿಸಬೇಕಾದುದಿಲ್ಲವೆಂದೂ ಅವಳು ಹೇಳಿದಳು. ಹದಿನಾಲ್ಕು ವರ್ಷದ ಹುಡುಗಿ ತನ್ನನ್ನೂ ತನ್ನ ಇಬ್ಬರು ತಮ್ಮಂದಿರನ್ನೂ ಸ್ವತಂತ್ರವಾಗಿ ಸಾಕುವ ಮಾತುಗಳನ್ನು ಕೇಳಿ ಬೋರನಿಗೆ ಏನೂ ತೋರದಾಯಿತು. ಅವನು ಹೆಚ್ಚು ಮಾತಾಡದೆ ಸುಮ್ಮನಾದನು.

ಹೊಸಬಿಗೆ ಬಾಲ್ಯದಿಂದಲೂ ದನಗಳನ್ನು ಸಾಕುವುದರಲ್ಲಿ ವಿಶೇಷವಾದ ಆಸೆಯಿದ್ದಿತು; ಜೊತೆಗೆ ಹಸುವಿನಿಂದ ತಮ್ಮ ಜೀವನವನ್ನು ಸಾಗಿಸಬಹುದೆಂಬ ನಂಬಿಕೆಯೂ ಅವಳಿಗೆ ಇದ್ದಿತು. ಅವಳು ನಮ್ಮ ಊರ ಜೋಡಿದಾರರನ್ನು ಕಂಡು ತನಗೆ ಸಾಕುವುದಕ್ಕಾಗಿ ಒಂದು ಹಸುವನ್ನು ಕೊಡಬೇಕೆಂದೂ ಅದು ಮುದಿಯಾಗಿರಲಿ, ಕುಂಟಾಗಿರಲಿ ಹೇಗಿದ್ದರೂ ಚಿಂತೆಯಿಲ್ಲವೆಂದೂ ಕೇಳಿಕೊಂಡಳು. ಜೋಡಿದಾರರಿಗೆ ಆ ಹುಡುಗಿಯ ಮಾತನ್ನು ಕೇಳಿ ಆಶ್ಚರ್ಯವೂ ಕುತೂಹಲವೂ ಉಂಟಾಯಿತು. ಅವರು ಹೊಸಬಿಗೆ ಒಂದು ಕುಂಟ ಹಸುವನ್ನು ಕೊಟ್ಟರು. ಆ ಹಸುವನ್ನು ಮೇಯಿಸಲು ತಮ್ಮ ಸ್ವಂತ ಹುಲ್ಲುಗಾವಲಿನಲ್ಲಿ ಸ್ಥಳವನ್ನು ಕೊಡಬೇಕೆಂದು ಹೊಸಬಿಯು ನಮ್ಮೂರ ಶ್ಯಾನುಭೋಗರನ್ನು ಕೇಳಿಕೊಂಡಳು. ಶ್ಯಾನುಭೋಗರಿಗೆ ಔದಾರ್ಯದಲ್ಲಿ ತಾವು ಜೋಡಿದಾರರಿಗಿಂತ ಕಡಿಮೆಯಾಗಲು ಇಷ್ಟವಿರಲಿಲ್ಲವಾಗಿ ಅವರೂ ಒಪ್ಪಿದರು.

ಹೊಸಬಿಯು ಚಟುವಟಿಕೆಯುಳ್ಳ ಶಕ್ತಳಾದ ಹುಡುಗಿ, ಅವಳ ಹಸುವು ಚೆನ್ನಾಗಿ ಮೇದು ಪುಷ್ಟವಾಗಿ ಮನೆಯಲ್ಲಿ ಹಾಲು, ಮೊಸರು ಸಮೃದ್ಧಿಯಾಯಿತು. ಹೊಸಬಿಯ ಮನೆಯಲ್ಲಿ ಯಾವಾಗ ಬೇಕಾದರೂ ಒಳ್ಳೆಯ ಹಾಲು, ಬೆಣ್ಣೆ, ಮೊಸರು ಸಿಕ್ಕುವುದೆಂದು ನಮ್ಮ ಊರಿನಲ್ಲೆಲ್ಲಾ ಪ್ರತೀತಿಯಾಯಿತು. ಜತೆಯಲ್ಲಿ ಹೊಸಬಿಯು ಕೆಲವು ಕೋಳಿಗಳನ್ನು ಬೇರೆ ಸಾಕುತ್ತಿದ್ದಳು. ತಾನು ಸಂಪಾದಿಸುತ್ತಿದ್ದ ಕಾಲದಲ್ಲಿ ಬೋರನು ಒಂದೆರಡು ಬೆಳ್ಳಿಯ ಒಡವೆಗಳನ್ನು ತಂದು ಮನೆಯಲ್ಲಿ ಹಾಕಿದ್ದನು. ಹೊಸಬಿಯು ಅವುಗಳನ್ನು ಮಾರಿ ಕೋಳಿಗಳನ್ನು ಹೆಚ್ಚಾಗಿ ಕೊಂಡುಕೊಂಡು ಮೊಟ್ಟೆಯ ವ್ಯಾಪಾರವನ್ನು ಪ್ರಾರಂಭಿಸಿದಳು. ಬೋರನು ಕುಂಟನಾಗಿ ಮನೆಯಲ್ಲಿ ಕುಳಿತ ಕೂಡಲೇ ಅವನ ಮಕ್ಕಳು ತಿರುಪಕ್ಕೆ ಹೋಗುವರೆಂದು ತಿಳಿದಿದ್ದವರು ಹೊಸಬಿಯ ಈ ಹುರುಪನ್ನೂ ಸ್ವಾತಂತ್ರ್ಯವನ್ನೂ ಕಂಡು ಬೆರಗಾದರು.

ಹೊಸಬಿಯ ಮನೆಯ ಆಡಳಿತವೂ ಬಹಳ ಸಮರ್ಪಕವಾಗಿದ್ದಿತು. ಬೋರನು ಕುಂಟನಾದರೂ ಕುಳಿತಲ್ಲಿಯೇ ಚಾಪೆಗಳನ್ನೂ ಕುಕ್ಕೆ ಹಗ್ಗಗಳನ್ನೂ ಮಾಡುತ್ತಿದ್ದನು. ಇದರಿಂದ

ಅವರ ಸಂಪಾದನೆಯು ವೃದ್ಧಿಯಾಯಿತು. ಹೊಸಬಿಯು ತರಕಾರಿಗಳನ್ನು ಬೆಳೆಯುವುದರಲ್ಲಿಯೂ ಪ್ರಚಂಡಳೆನಿಸಿಕೊಂಡಳು. ಅವಳ ಇಬ್ಬರು ತಮ್ಮಂದಿರೂ ಈ ಕೆಲಸದಲ್ಲಿ ಅವಳಿಗೆ ಬಹಳ ಸಹಾಯ ಮಾಡುತ್ತಿದ್ದರು. ಶ್ರಮವನ್ನೇ ಕಾಣದ ಮನೆಯ ಯಜಮಾನಿಗೆ ಇದು ಮತ್ತೊಂದು ಉತ್ಪತ್ತಿಯ ದಾರಿಯಾಯಿತು. ಅಂತೂ ಹೊಸಬಿಯು ಮನೆಯ ಯಜಮಾನಿಕೆಯನ್ನು ಪ್ರಾರಂಭಿಸಿದ ನಾಲ್ಕು ವರ್ಷಗಳಲ್ಲಿ ಬಹಳ ಸುಖಕರವಾಗಿ ಅವರ ಅಭಿವೃದ್ಧಿಯು ಹೆಚ್ಚಲು ಕಾರಣವಾಯಿತು. ಅವಳ ಹಸು-ಕರುಗಳೂ ಹಂದಿ-ಕೋಳಿಗಳೂ ಹಾಲು ಮೊಸರು ತರಕಾರಿಯ ವ್ಯಾಪಾರವೂ ಬೋರನ ಚಾಪೆ ಮತ್ತು ಹಗ್ಗದ ಕಸಬೂ ಒಂದಕ್ಕಿಂತ ಒಂದು ಹೆಚ್ಚಾಗಿ ಬಲವಾದುವು.

ಹೊಸಬಿಗೆ ಶತ್ರುಗಳಿರಲಿಲ್ಲವೆಂದಲ್ಲ. ಶತ್ರುಗಳು ಯಾರಿಗೆ ತಾನೆ ಇಲ್ಲ? ಹೊಸಬಿಗೂ ಯಾಕೆ ಇರಕೂಡದು? ನಮ್ಮ ಊರ ಯುವಕ ಮಾದನಿಗೆ ಹೊಸಬಿಯ ಮೇಲೆ ಬಹಳ ಕೋಪವಿದ್ದಿತು. ಮಾದನ ಬಳಿ ನಾನೂರು ರೂಪಾಯಿ ಬೆಲೆಬಾಳುವ ಎತ್ತಿನ ಜೋಡಿಯಿದ್ದಿತು. ಅವನ ನಾಯಿಯು ಹೊಸಬಿಯ ನಾಯಿಗಿಂತ ಚೆನ್ನಾಗಿದ್ದಿತಲ್ಲದೆ (ಚುರುಕಾಗಿ ಅಲ್ಲ) ಅದರ ಕತ್ತಿನಲ್ಲಿ ಬೆಳ್ಳಿಯ ಸರಪಣಿಯ ಇದ್ದಿತು. ಮಾದನ ಅಂಗಿಯ ಗುಂಡಿಗಳು ಬೆಳ್ಳಿಯ ಎರಡಾಣೆಗಳಿಂದ ಮಾಡಿದ್ದುವು. ಅಲ್ಲದೆ ಶ್ಯಾನುಭೋಗರ ಹುಲ್ಲು ಗಾವಲಿನಲ್ಲಿ ಅಲ್ಲಿಯವರೆಗೆ ಮಾದನೊಬ್ಬನೇ ತನ್ನ ಎತ್ತುಗಳನ್ನು ಮೇಯಿಸುತ್ತಿದ್ದನು. ಆ ಕಾವಲು ಅವನಿಗೇ ಮೀಸಲಾಗಿದ್ದಿತು. ತನ್ನ ನಾನೂರು ರೂಪಾಯಿನ ಎತ್ತಿನ ಜೊತೆಯಲ್ಲಿ ಹೊಸಬಿಯ ಕುಂಟ ಹಸುವೂ, ತನ್ನ ಬೆಳ್ಳಿಯ ಸರಪಣಿಯ ನಾಯಿಯ ಮಗ್ಗುಲಲ್ಲಿ ಹೊಸಬಿಯ ಕರಿಯ ನಾಯಿಯೂ ಇರುವುದು ಅವನಿಗೆ ಸಹಿಸಲಿಲ್ಲ. ತನ್ನ ಐಶ್ವರ್ಯದ ಎದುರಿಗೆ ಹೊಸಬಿಯ ಬಡತನವು ಸರಿಗಟ್ಟುವ ಧೈರ್ಯವನ್ನು ತೋರಿಸಿದುದಕ್ಕಾಗಿ ಅವನಿಗೆ ಹೊಸಬಿಯ ಮೇಲೆ ಬಹಳ ಕೋಪವುಂಟಾಗಿದ್ದಿತು.

ಮಾದನ ಹೊರತು ಇನ್ನು ಕೆಲವರಿಗೆ ನಿಷ್ಕಾರಣವಾಗಿ ಹೊಸಬಿಯ ಮೇಲೆ ಕೋಪವುಂಟಾಗಿದ್ದಿತು. ಇದಕ್ಕೆ ಮುಖ್ಯ ಕಾರಣವು ಹೊಸಬಿಯು ತನ್ನ ಬಟ್ಟೆಗಳನ್ನು ಅಗಸನಿಗೆ ಕೊಡದೆ ತಾನೇ ಒಗೆಯುತ್ತಿದ್ದುದೇ. ಹಳ್ಳಿಗಾಡಿನಲ್ಲಿ ರೈತರೆಲ್ಲರೂ ತಮ್ಮ ಅರಿವೆಗಳನ್ನು ಅಗಸರಿಗೆ ಕೊಟ್ಟು ಮಡಿ ಮಾಡಿಸುತ್ತಾರೆ. ಹಳ್ಳಿಯವರ ಬಟ್ಟೆಗಳು ಬೇಗ ಹರಿಯುವುದಕ್ಕೂ ಅದೇ ಕಾರಣ. ರೈತನು ಒಂದು ಬಟ್ಟೆಯನ್ನೂ ದಟ್ಟಿಯನ್ನೂ ಹತ್ತು-ಹನ್ನೆರಡು ದಿವಸ ಉಟ್ಟುಕೊಂಡು ಅದು ನೀರಿಗೆ ನೆನೆಯದಂತೆ, ಬೆಂಕಿಗೆ ಉರಿಯದಂತೆ ಮೇಣಗಬಟವಾಗುವ ಹಾಗೆ ಮಾಡಿ ಅನಂತರ ಅದನ್ನು

ಹಳ್ಳಿಯ ಅಗಸನಿಗೆ ಹಾಕುತ್ತಾನೆ. ಅವನು ಅದನ್ನು "ಉಬ್ಬೆಕಾಸಿ" ಆ ಬಟ್ಟೆಯಿಂದ ಕಲ್ಲು ಚೂರಾಗುವುದೋ ಎಂಬಂತೆ ಒಗೆದು ಮಡಿಮಾಡಿಕೊಂಡು ಬರಲು ಹನ್ನೆರಡು-ಹದಿಮೂರು ದಿವಸಗಳನ್ನು ತೆಗೆದುಕೊಳ್ಳುತ್ತಾನೆ. ಆ ಬಟ್ಟೆ ಬರುವವರೆಗೆ ರೈತನಿಗೆ ತಾನು ಉಟ್ಟಿರುವುದರ ಹೊರತು ಬೇರೆ ಅರಿವೆ ಇರುವುದಿಲ್ಲ. ಹೀಗಾಗಿ ಅವನು ಒಟ್ಟೆಯನ್ನು ಬದಲಾಯಿಸುವುದು ತಿಂಗಳಿಗೆ ಎರಡೇ ಸಲ, ಅಗಸನು ನಾಲ್ಕು ಸಲ ಮಡಿಮಾಡಿ ತರುವುದರೊಳಗಾಗಿ ಬಟ್ಟೆಯು ಚೂರಾಗುತ್ತದೆ. ಹಳ್ಳಿಯಲ್ಲಿ ತನ್ನ ಬಟ್ಟೆಯನ್ನು ತಾನು ಒಗೆದುಕೊಳ್ಳುವ ಒಕ್ಕಲಿಗನು ಇಲ್ಲವೇ ಇಲ್ಲ. ಹೆಂಗಸರು ತಮ್ಮ ಶಾಲೆಗಳನ್ನು ಮಾತ್ರ ಕೆರೆಯಲ್ಲಿಯೋ ಹಳ್ಳದಲ್ಲಿಯೋ ಕುಕ್ಕಿಕೊಳ್ಳುತ್ತಾರೆ. ಗಂಡಸಿನ ದಟ್ಟಿಯನ್ನೂ ದುಪಟಿಯನ್ನೂ ಯಾವ ರೈತನ ಹೆಂಡತಿಯೂ ಒಗೆಯುವುದಿಲ್ಲ. ಸುಗ್ಗಿ ಕಾಲದಲ್ಲಿ ಅಗಸನಿಗೆ ಹಡದೆಯನ್ನು ರೈತರು ಕೊಡುವುದು ಅವನಿಂದ ಹನ್ನೆರಡು ತಿಂಗಳೂ ಬಟ್ಟೆಗಳನ್ನು ಮಡಿಮಾಡಿಸುವುದಕ್ಕಾಗಿಯೆ.

ಹೊಸಬಿಯು ಮಾತ್ರ ಅಗಸನಿಗೆ ಅರಿವೆಗಳನ್ನು ಕೊಡುತ್ತಿರಲಿಲ್ಲ. ಹಾಗೆಯೇ ಅವನಿಗೆ ಸುಗ್ಗಿಯಲ್ಲಿ ರಾಗಿಯನ್ನೂ ಕೊಡುತ್ತಿರಲಿಲ್ಲ. ವಾರಕ್ಕೆ ಒಂದು ಸಲ ಅವಳು ತನ್ನ ತನ್ನ ತಮ್ಮಂದಿರ ಮತ್ತು ಬೋರನ ಅರಿವೆಗಳನ್ನೆಲ್ಲಾ ತಾನೇ ಚೆನ್ನಾಗಿ 'ಸೆಣೆದು' ಮಡಿಮಾಡಿತ್ತಿದ್ದಳು. ಇದರಿಂದ ಅವರ ಅರಿವೆಗಳು ಯಾವಾಗಲೂ ಇತರರ ಅರಿವೆಗಳಿಗಿಂತ ಹೆಚ್ಚು ಶುಭ್ರವಾಗಿರುತ್ತಿದ್ದುವು. ಹೊಸಬಿಯು ನೆರೆಹೊರೆಯವರ ಬಟ್ಟೆಗಳನ್ನು ಕಂಡು "ಆ ಅರಿವೆಗಳು ಬಾರಿ ಕೊಳಕು, ಹದಿನೈದು ದಿನಕ್ಕೆ ಒಂದು ಸಲ ಕೂಡ ಅವುಗಳ ಸೆಣೆಯೋದಿಲ್ಲ" ಎಂಬುದಾಗಿ ಹೇಳುತ್ತಿದ್ದಳು. ಹೊಸಬಿಯ ಈ ಹೆಮ್ಮೆಯನ್ನು ಕಂಡು ನಮ್ಮ ಊರಿನವರು ಅವಳನ್ನೇ ಒಂದು ಜಾತಿಯನ್ನಾಗಿ ಮಾಡಿ ಒಂದು ರೀತಿಯಿಂದ ಬಹಿಷ್ಕರಿಸಿದ್ದರು.

ಹೊಸಬಿಯು ಇದಾವುದರಿಂದಲೂ ಹೆದರಲಿಲ್ಲ. ಅಂತಹ ಗಂಡಸುತನದ ಹುಡುಗಿಯು ಈ ಪೊಳ್ಳು ಬೆದರಿಕೆಗಳಿಂದ ಅಲ್ಲಾಡಿಯಾಳೆ? ಹೊಸಬಿಯ ಶಾಲೆಯನ್ನೂ ಬೋರನ ಮತ್ತು ಅವನ ಮಕ್ಕಳ ದಟ್ಟಿ ಅಂಗಿಗಳನ್ನೂ ನೋಡಿ ಊರಿನ ಹೆಂಗಸರಿಗೆಲ್ಲಾ ಹೊಟ್ಟೆ ಕಿಚ್ಚು ಉಂಟಾಯಿತು. ಹೊಸಬಿಯ ಮನೆಯ ಎಡಗಡೆ ಬೋರಿಯ ಮನೆಯ ಬಲಗಡೆ ಕಾಳಿಯ ಮನೆಯೂ ಇವೆ. ಹಿಂದೆ ಈ ಮೂರು ಮನೆಗಳೂ ಒಂದೇ ಮನೆಯಾಗಿದ್ದುವು. ಈಗಲೂ ಮೂರೂ ಮನೆಗಳಿಗೂ ಸೂರು ಒಂದೇ, ಮರು ಮನೆಗಳಿಗೂ ಸೇರಿ ಒಂದೇ ಹಿತ್ತಿಲು. ಈಚೆಗೆ ಹೊಸಬಿಯ ಕಾಳಿಯೂ ಬೋರಿಯೂ ತಮ್ಮ ತಮ್ಮ ಹಿತ್ತಿಲಿನ ಭಾಗಗಳಿಗೆ ಮುಳ್ಳಿನ ಬೇಲಿಗಳನ್ನು

ಹಾಕಿಕೊಂಡಿದ್ದರು. ಕಾಳಿಯು ಎರಡು-ಮೂರು ಸಲ ಹೊಸಬಿಯ ಹಿತ್ತಿಲಿಗೆ ತನ್ನ ದನಗಳನ್ನು ಕೂಡಿ ಅವಳ ತರಕಾರಿಗಳನ್ನೆಲ್ಲಾ ಮೇಯಿಸಿದ್ದಳು. ಹೊಸಬಿಯನ್ನು ಕಂಡರೆ ಬೋರಿಗೂ ಕಾಳಿಗೂ ಹೊಟ್ಟೆಕಿಚ್ಚು ವಿಶೇಷವಾಗಿತ್ತು. ಹೊಸಬಿಯು ಅರಿವೆಗಳನ್ನು ಸೆಣೆದು ಹಿತ್ತಿಲಿನಲ್ಲಿ ಆರಿಹಾಕುತ್ತಿರುವಾಗ ಅವರಿಬ್ಬರೂ ಆಚೆ ಈಚೆ ತಮ್ಮ ತಮ್ಮ ಹಿತ್ತಿಲುಗಳಲ್ಲಿ ನಿಂತು ಕೊಂಡು ಒಬ್ಬರೊಂದಿಗೊಬ್ಬರು ಮಾತನಾಡಿಕೊಳ್ಳುತ್ತಿದ್ದರು. ಅವರ ಮಾತುಗಳು ಸಾಮಾನ್ಯವಾಗಿ ಯಾವಾಗಲೂ ಈ ರೀತಿಯಾಗಿಯೇ ಇರುತ್ತಿದ್ದುವು :

ಬೋರಿ—ಏನ್ಕಾಳಿ ನಿಂತ್ಕಂಡ್ಡಿದ್ದೆ. ಕೆಲ್ಸ ಎಲ್ಲ ಆಯ್ತಾ?

ಕಾಳಿ—ಏನು ಕೆಲ್ಸನೋಮ್ಮ. ಎಷ್ಟು ಮಾಡಿದ್ರು ಇದ್ದೆ ಅಯ್ತೆ.

ಬೋರಿ—ಒಬ್ಬೊಬ್ಬರೆ ಕೆಲ್ಸ ಮಾಡೋಕೆ ಬೇಸರ್ಕೇನೆ ಇಲ್ಕಣೆ. ಅಗಸನ್ನ ಕೂಡ ಕೊಡ್ಡೆ ಗಂಡಸ್ರ ಅರ್ಬೇನೆಲ್ಲ ತಾವೆ ಸೆಣಿತಾರೆ.

ಕಾಳಿ—ಅವರಿಗೇನಪ್ಪ ಹೊಲ ಅಯ್ತೆ? ಗದ್ದೆ ಅಯ್ತೆ? ಇರೋ ಅರ್ಬೆ ಸೆಣಕೊಳ್ದೆ ಬಿಟ್ರೆ ಉಂಡ್ಡಿಟ್ಟು ಅರಗಬೇಕೆಲ್ಲವ್ವಾ?

ಹೊಸಬಿಗೆ ತನಗೆ ಗದ್ದೆಯಾಗಲಿ ಹೊಲವಾಗಲಿ ತೋಟವಾಗಲಿ ಯಾವ ಜಮೀನೂ ಇಲ್ಲದುದರಿಂದ ಅವರು ತನ್ನನ್ನು ಆ ರೀತಿ ಹಾಸ್ಯ ಮಾಡುತ್ತಿರುವರೆಂಬುದು ತಿಳಿಯದೆ ಇರಲಿಲ್ಲ. ಬೋರಿಯು "ಅಲ್ಕಣೆ ಕಾಳಿ, ಹಟ್ಟೇಲಿ ಹಿಟ್ಟಿನ ಮಡ್ಕೇಲಿ ಮುದ್ದೆ ಇಲ್ದೋರು ಕೇರಿಯೋರ ಅರಬೆ ಕೊಳೆನೆಲ್ಲಾ ಎತ್ಕೊಂಡು ಮಾತಾಡಬಾರದು ಕಣೆ. ಸೆಣದ ಸಾಲೆ ಉಟ್ಬಿಟ್ರೆ ಇಲ್ಲದ ದೊಡ್ಡಸ್ತಿಕೆ ಬಂದ್ಬಿಡ್ತಾ? ಹರದ ಅರ್ಬೆ ಬೆಳ್ಳಗಿದ್ದರೆಷ್ಟು, ಕಪ್ಪಗಿದ್ದರೆಷ್ಟು?" ಎಂದಳು. ಹೊಸಬಿಗೆ ಈ ಮಾತಗಳನ್ನು ಕೇಳಿ ಬಹಳ ಸಿಟ್ಟು ಬಂದಿತು. ಅವಳು ಮಾತನಾಡದೆ ಮನೆಯೊಳಕ್ಕೆ ಹೋಗಿ ಬೋರನನ್ನು ಕುರಿತು "ನೋಡು, ಅವರು ನನ್ನ ಹಿಂಗೆಲ್ಲಾ ಹೀಯಾಳಿಸ್ತಾರೆ. ನೀನು ಅಪ್ಪನಾಗಿ, ಗಂಡಸಾಗಿ ಕೂತ್ಕಂಡು ಇದ್ನೆಲ್ಲಾ ಸೈಸ್ಕೊಂಡಿರೋದೆ? ಅವರ್ಗೆ ತಕ್ಕದ್ದ ಮಾಡು" ಎಂದಳು. ಬೋರನು "ನಾನೇನ್ಮಾಡಲಿ, ನೀವು ನೀವು ಹೆಂಗಸರು ಕಚ್ಚಾಡಿಕೊಂಡರೆ ನಾನೇನು ಮಾಡೋಕಾಯ್ತದೆ. ನಾಳೆ ಮತ್ತೆ ನೀವೆ ಒಂದಾಯ್ತೀರಿ. ಎಲ್ಲಾ ಸರಿಹೋಯ್ತದೆ" ಎಂದನು. ಹೊಸಬಿಗೆ ಸಮಾಧಾನವಾಗಲಿಲ್ಲ. ಬೋರನ ಮೇಲೆ ಮಾತ್ರ ಕೋಪವುಂಟಾಯಿತು.

ನಮ್ಮ ಹಳ್ಳಿಯ "ರೈತಾಪಿಜನ" ಪ್ರತಿ ಸೋಮವಾರವೂ ವಿರಾಮವನ್ನು ತೆಗೆದುಕೊಳ್ಳುವುದು ಪದ್ಧತಿ. ಇದು ಪೂರ್ವದಿಂದಲೂ ನಡೆದು ಬಂದಿದೆ. ಸೋಮವಾರ

ಎತ್ತುಗಳಿಗೂ ಕೆಲಸವಿಲ್ಲ. ರೈತರು ಆ ದಿವಸ ಉಳುವುದನ್ನೂ ಹರತೆ ಹೊಡೆಯುವುದನ್ನೂ ನಿಲ್ಲಿಸಿ ಎತ್ತುಗಳ ಮೈಯನ್ನು ತೊಳೆದು ಅವುಗಳನ್ನು ಚೆನ್ನಾಗಿ ಮೇಯಿಸುತ್ತಾರೆ. ರೈತರೂ ಆ ದಿವಸ ಅಗಸನಿಂದ ಬಂದ ಮಡಿ ಅರಿವೆಗಳನ್ನು ಉಟ್ಟುಕೊಂಡು ಸ್ವಲ್ಪ ಶುಭ್ರವಾಗಿ ಕಾಣಲು ಪ್ರಯತ್ನ ಪಡುತ್ತಾರೆ.

ನಮ್ಮ ಹಳ್ಳಿಯ ಅಗಸ ಸಾಮಾನ್ಯವಾಗಿ ಸೋಮವಾರ ಹೊತ್ತಾರೆ ರೈತರ ಅರಿವೆಗಳನ್ನೆಲ್ಲಾ ಮಡಿಮಾಡಿ ಅವರವರ ಮನೆಗೆ ತಂದುಕೊಡುತ್ತಾನೆ. ಆದರೆ ಅವನಿಗೆ ಮಂಗಳವಾರದವರೆಗೆ ಅವಕಾಶವನ್ನು ಕೊಟ್ಟರೆ ಅನಕೂಲವೆಂದು ತೋರುತ್ತದೆ. ಯಾತಕ್ಕೆಂದರೆ ಅವನು ಪ್ರತಿ ಸೋಮವಾರವೂ ಬಟ್ಟೆಗಳನ್ನು ಒದ್ದೆಯಾಗಿಯೇ ತರುತ್ತಾನೆ. ರೈತರು ಅವುಗಳನ್ನು ತಮ್ಮ ತಮ್ಮ ಮನೆಗಳ ಹಿತ್ತಿಲುಗಳಲ್ಲಿಯೂ ಬಾಗಿಲುಗಳಲ್ಲಿಯೂ ಒಣಗಿಸಿಕೊಳ್ಳುತ್ತಾರೆ. ಅರಿವೆಗಳನ್ನು ಸರಿಯಾಗಿ ಒಣಗಿಸಿಕೊಂಡು ಬಂದಿಲ್ಲವೆಂದು ರೈತರ ಹೆಂಗಸರು ಕೂಗಾಡಿದರೆ "ಇವತ್ತು ದೇವ್ರು ನೆತ್ತಿ ಮೇಲೆ ಬರೋ ಹೊತ್ತಿನ್ಗಂಟ ಬಿಟ್ಟಿದ್ರೆ ಚೆನ್ನಾಗಿ ಮಡಿಮಾಡ್ಕೊಂಡು ಬರವಿ" ಎನ್ನುತ್ತಾನೆ. ಆದರೆ ಮಧ್ಯಾಹ್ನದವರೆಗೆ ಅಲ್ಲ, ಮೂರು ದಿವಸ ವಿರಾಮಕೊಟ್ಟರೂ ಅಗಸನು ತನ್ನ ಕೆಲಸವನ್ನು ಸಕಾಲದಲ್ಲಿ ಮಾಡುವುದಿಲ್ಲ. ಹಳ್ಳಿಗಾಡಿನ ಅಗಸ, ಅಕ್ಕಸಾಲೆ, ಬಡಗಿ, ಕಮ್ಮಾರ, ಚಿಪ್ಪಿಗ ಇವರೆಲ್ಲಾ ಹೀಗೆಯೇ.

ಅಗಸನು ತಂದುಕೊಡುತ್ತಿದ್ದ ಅರಿವೆಗಳನ್ನು ಬೋರಿಯೂ ಕಾಳಿಯೂ ತಮ್ಮ ತಮ್ಮ ಹಿತ್ತಿಲುಗಳಲ್ಲಿ ಒಣಗಹಾಕುತ್ತಿದ್ದರು. ಅರಿವೆಗಳು ಕೆಲವು ದಿವಸ ಪೂರ್ಣವಾಗಿ ಒದ್ದೆಯಾಗಿರುತ್ತಿದ್ದುವು. ಕೆಲವು ದಿವಸ ಸ್ವಲ್ಪ ತಣ್ಣಗಿರುತ್ತಿದ್ದುವು. ಅಂತೂ ಅವುಗಳನ್ನು ಒಣಗಿಸುವ ಕೆಲಸವು ಅವರಿಗೆ ತಪ್ಪುತ್ತಿರಲಿಲ್ಲ.

ಹೊಸಬಿಯು ಪ್ರತಿ ಮಂಗಳವಾರವೂ ಅರಿವೆಗಳನ್ನು ಸೆಣೆಯುತ್ತಿದ್ದಳು. ಒಂದು ಮಂಗಳವಾರ ನಾವು ಹಿಂದೆ ಹೇಳಿದ ರೀತಿಯಲ್ಲಿ ಬೋರಿಯೂ ಕಾಳಿಯೂ ಅವಳನ್ನು ಅವಳ ಎದುರಿಗೆ ಹಾಸ್ಯ ಮಾಡಿದರು. ಹೊಸಬಿಯು ಬೋರನಿಗೆ ಆ ವಿಚಾರದಲ್ಲಿ ದೂರು ಹೇಳಿದುದು ಪ್ರಯೋಜನವಾಗಲಿಲ್ಲ. ಅವಳು ಬೋರನೊಂದಿಗೆ ಕಾಳಿಯು ತನ್ನನ್ನು ಬೈದ ವಿಚಾರವನ್ನು ಕುರಿತು ಮತ್ತೆ ಮಾತನಾಡಲಿಲ್ಲ. ಅವಳ ಮುಖದಲ್ಲಿ ಒಂದು ವಿಧವಾದ ನಿಶ್ಚಯವೂ ಗಾಂಭೀರ್ಯವೂ ಕಾಣುತ್ತಿದ್ದಿತು. ಬೋರನಿಗೆ ಅವಳು ಏನೋ ಮಾಡ ಹೊರಟಿರುವಳೆಂದು ಗೊತ್ತಾಯಿತು.

ಬೋರನಿಗೆ ಹೊಸಬಿಯನ್ನು ಕಂಡರೆ ಒಂದು ವಿಧವಾದ ಭಯವುಂಟಾಗಿತ್ತು. ಆ ಚಿಕ್ಕ ಹುಡುಗಿಯು ಕಂಡವರ ಮನೆಯಲ್ಲಿ ಜೀತಕ್ಕೆ ಇರಲು ಇಷ್ಟಪಡದೆ, ಸಂಸಾರವನ್ನು ನಡೆಸುವ ಭಾರವನ್ನು ವಹಿಸಿಕೊಂಡಾಗಲೇ ಅವಳು ಸಾಮಾನ್ಯವಾದ ಹುಡುಗಿಯಲ್ಲವೆಂದು ಅವನಿಗೆ ಗೊತ್ತಾಯಿತು. ಈಚೆಗೆ ಆ ಹುಡುಗಿಯು ಹೆಂಡ ಕುಡಿಯುವುದನ್ನು ಬಿಡಬೇಕೆಂದು ಪದೇ ಪದೇ ತನಗೆ ಹೇಳತೊಡಗಿದಾಗ ಆ ಹುಡುಗಿಯ ಸಂಪಾದನೆಯಲ್ಲಿ ಕುಡಿಯುವುದಕ್ಕೆ ತನಗೆ ಇಷ್ಟವಿಲ್ಲದಿದ್ದರೂ ಹಿಂದಲ ಅಭ್ಯಾಸವನ್ನು ಬಿಡಲಾರದೆ ಕುಡಿಯುತ್ತಿದ್ದನು. ಆದರೆ ಅವನಿಗೆ ಹೊಸಬಿಯ ಭಯವೇನೋ ಹೆಚ್ಚಾಗಿತ್ತು. ತಾನು ಅವಳ ತಂದೆಯಾದರೂ ತನ್ನನ್ನು ಅವಳು ಏನೆನ್ನುವಳೋ ಎಂದು ಅವನು ಹೆದರುತ್ತಿದ್ದನು. ಅವನು ಕುಡಿಯುವುದನ್ನು ಕಂಡಾಗಲೆಲ್ಲಾ ಹೊಸಬಿಯು ಮೊದಲು ಮೊದಲು ದುಃಖಪಡುತ್ತಿದ್ದಳು. ಅನಂತರ ಅವನನ್ನು ಕೋಪದಿಂದ ದುರದುರನೆ ನೋಡುತ್ತಿದ್ದಳು. ಆ ನೋಟವನ್ನು ಕಂಡ ಬೋರನು ಗಾಬರಿಯಿಂದ ದಿಗಿಲುಬಿದ್ದಿದ್ದುದುಂಟು. ಒಂದೊಂದು ಸಲ "ಈ ಮಗು ನನ್ನನ್ನ ಎಷ್ಟು ಹೆದರಸ್ತದೆ?" ಎಂದುಕೊಳ್ಳುವನು. ಆ ದಿವಸ ಬೋರಿಯೂ ಕಾಳಿಯೂ ತನ್ನನ್ನು ಬೈದುದರಿಂದ ಹೊಸಬಿಯ ಮುಖವು ಆ ವಾರವೆಲ್ಲಾ ದುರದುರನೆ ಇದ್ದಿತು. ಬೋರನು "ಈ ಹುಡುಗಿಗೆ ಏನೋ ಮನಸ್ಸಿಗೆ ಹಿಡಿದಿದೆ. ಇವಳೇನೋ ಮಾಡ್ತಾಳೆ ನೋಡ್ಬೇಕು" ಎಂದುಕೊಂಡನು. ಆದರೆ ತಾನು ಎರಡು ದಿವಸ ಮುಂಚಿತವಾಗಿ ತನ್ನ ನೆರೆಯವನಿಂದ ಹೆಂಡವನ್ನು ತರಸಿ ಕುಡಿದಿದ್ದುದರಿಂದ ಹೊಸಬಿಯ ಕೋಪವು ತನ್ನ ಮೇಲೇ ಎಂದುಕೊಂಡನು.

ಆ ಭಾನುವಾರ ಮಳೆ ಬಹಳ ಜೋರಾಗಿ ಹೊಡೆಯಿತು. ಸೋಮವಾರ ಪ್ರಾತಃಕಾಲ ಅಗಸರ ಸುಬ್ಬನು ಅರಿವೆಗಳನ್ನೆಲ್ಲಾ ಮಡಿಮಾಡಿಕೊಂಡು ತಂದನು. ಬಟ್ಟೆಗಳು ಒದ್ದೆಯಾಗಿದ್ದುವೆಂದು ಅವನಿಗೆ ರೈತರ ಹೆಂಗಸರಿಂದ ಚೆನ್ನಾಗಿ ಬೈಗಳವಾಯಿತು. ಆ ಬೈಗಳು ಸುಬ್ಬನಿಗೆ ಮಾಮೂಲ್ ಆಗಿದ್ದುದರಿಂದ ಅವನು ಅದರಿಂದ ಸ್ವಲ್ಪವೂ ಖಿನ್ನನಾಗಲಿಲ್ಲ. "ನೆನ್ನೆ ಎಲ್ಲಾ ಮಳೆ ಹೊಡೆಯಿತು. ನಾನೇನ್ಮಾಡ್ಲವ್ವ ನೀವು ಬೈತೀರಿ ಅಂತ ಹೆದರೊಂಡು ಇವತ್ತು ತಂದೆ. ಇಲ್ದಿದ್ರೆ ಚೆನ್ನಾಗಿ ಬಿಸಿಲಲ್ಲಿ ಇವತ್ತು ಮಡಿಮಾಡ್ಕೊಂಡು ನಾಳೆ ತರ್ತಿದ್ದೆ" ಎಂದನು. ರೈತರ ಹೆಂಗಸರು "ನೀನು ಯಾವತ್ತೂ ಹೇಳೋದೆ ಹೀಗೆ. ಯಾವತ್ತು ತಾನೆ ನೀನು ಮಡಿಮಾಡಿದ ಅರಿಬೆ ತಂದ್ಕೊಟ್ಟಿದ್ದೀಯೇ?" ಎಂಬುದಾಗಿ ಬೈದು ಕಳುಹಿಸಿದರು.

ಆ ವಾರ ಅರಿವೆಗಳು ಹಿಂದಲ ವಾರಕ್ಕಿಂತ ಹೆಚ್ಚು ಒದ್ದೆಯಾಗಿದ್ದುವು. ಬೋರಿಯೂ ಕಾಳಿಯೂ ತಮ್ಮ ತಮ್ಮ ಗಂಡಂದಿರ ಮತ್ತು ಮಕ್ಕಳ ಅರಿವೆಗಳನ್ನು ಹಿತ್ತಿಲಿನಲ್ಲಿ ಒಣಗಿಸಿದರು. ಅವರ ಗಂಡಂದಿರಿಗೂ ಮಕ್ಕಳಿಗೂ ಅವುಗಳ ಹೊರತು ಬೇರೆ ಮಡಿ ಅರಿವೆಗಳಿರಲಿಲ್ಲ. ಸುಬ್ಬನು ಬಟ್ಟೆಗಳನ್ನು ಚೆನ್ನಾಗಿಯೇ ಒಗೆದಿದ್ದನು. ಮಲ್ಲಿಗೆಹಳ್ಳಿಯ ಆದಿಕರ್ಣಾಟಕ ಕೆಂಚನ ಮಗ್ಗದ ಬಟ್ಟೆಗಳವು. ಕೆಂಚನ ಮಗ್ಗದ ಒಟ್ಟೆಗಳು ಕೊಳೆಯದಾಗ ಗೋಣಿ ತಟ್ಟಿನಂತೆ ತೋರುತ್ತಿದ್ದರೂ ಒಗೆದು ಮಡಿಮಾಡಿದಾಗ ಹಚ್ಚಗೆ ಕಾಣುತ್ತಿದ್ದುವು. ನಮ್ಮೂರ ರೈತರೆಲ್ಲಾ ಸಾಧಾರಣವಾಗಿ ಅವನ ಮಗ್ಗದ ದಟ್ಟಿಯನ್ನೂ ಪಂಚೆಯನ್ನೂ ಉಪಯೋಗಿಸುತ್ತಾರೆ. ಮಡಿಯಾದ ದಿವಸವಂತೂ ಆ ಬಟ್ಟೆಗಳು ಬಹಳ ಬೆಳ್ಳಗೆ ಕಾಣುತ್ತವೆ.

ಬೋರಿಯೂ ಕಾಳಿಯೂ ತಮ್ಮ ತಮ್ಮ ಬಟ್ಟೆಗಳನ್ನು ಹಿತ್ತಿಲಿನಲ್ಲಿ ಬಿಸಿಲಿನಲ್ಲಿ ಒಣಗಹಾಕಿ ತಮ್ಮ ಮನೆಗೆಲಸದಲ್ಲಿ ನಿರತರಾಗಿದ್ದರು. ಆಗ ಹೊಸಬಿಯು ಹಿತ್ತಿಲಿಗೆ ಬಂದಳು. ಹೊಸಬಿಯ ಹಿತ್ತಿಲಿನಲ್ಲಿ ದೊಡ್ಡ ಗೊಬ್ಬರದ ಗುಂಡಿಯಿದೆ. ಮೂರು-ನಾಲ್ಕು ದಿವಸಗಳಿಂದಲೂ ಮಳೆ ಬಿದ್ದು ಗುಂಡಿಯಲ್ಲಿ ನೀರು ತುಂಬಿದ್ದಿತು. ಗೊಬ್ಬರದ ಕಸವೂ ಸಗಣಿಯ ಬೆರಸಿಕೊಂಡು ಆ ನೀರು ಕಪ್ಪಾಗಿದ್ದಿತು. ಹೊಸಬಿಯು ಗುದ್ದಲಿಯಿಂದ ಚಿಕ್ಕ ಕಾಲುವೆಯನ್ನು ಮಾಡಿ ಆ ನೀರನ್ನು ಬೋರಿಯ ಹಿತ್ತಿಲಿಗೂ ಕಾಳಿಯ ಹಿತ್ತಿಲಿಗೂ ಬಿಟ್ಟಳು. ನೀರು ಹಿತ್ತಿಲಿನಲ್ಲಿ ತುಂಬಿಕೊಂಡು ಒಣಗಿಸಿದ್ದ ಅರಿವೆಗಳನ್ನೆಲ್ಲಾ ಕಪ್ಪಾಗಿ ನೆನೆಸಿತು. ಅನಂತರ ಹೊಸಬಿಯು ತನ್ನ ಹಸುವನ್ನು ಹೊಡೆದುಕೊಂಡು ಹೋದಳು. ಹುಲ್ಲುಗಾವಲಿಗೆ ಹೊರಟುಹೋದಳು.

ಸ್ವಲ್ಪ ಹೊತ್ತಾದನಂತರ ಬೋರಿಯೂ ಕಾಳಿಯೂ ಹಿತ್ತಿಲಿಗೆ ಬಂದು ಬಟ್ಟೆಗಳನ್ನು ನೋಡಿದರು. ಬಳಿಕ ಇಬ್ಬರೂ ಬಾಯಿಗೆ ಬಂದಂತೆ ಬೈದು ಕೂಗಾಡುತ್ತಾ ಹೊಸಬಿಯ ಹಟ್ಟಿಯ ಬಾಗಿಲಿಗೆ ಹೋದರು. ಇವರಿಬ್ಬರೂ ಹೊಸಬಿಯನ್ನು ಏನೋ ಮಾಡುತ್ತಾರೆ ನೋಡಬೇಕು ಎಂಬುದಾಗಿ ಊರಿನ ಹುಡುಗ-ಹುಡಿಗಿಯರೆಲ್ಲಾ ಅವಳ ಮನೆಯ ಮುಂದೆ ಒಂದು ತುಂಬಿಕೊಂಡರು. ಹೊಸಬಿಯು ಮನೆಯಲ್ಲಿ ಇರಲಿಲ್ಲ. ಅವಳ ತಂದೆಯಾದ ಬೋರನು ಆ ಜನರ ಗುಂಪನ್ನು ಕಂಡು ಹೆದರಿದನು. ಕಾಳಿಯು ಹಲ್ಲು ಕಡಿಯುತ್ತಾ, “ಬರ್ಲಿ ನಿನ್ನ ಹುಡ್ಗಿ, ಆ ಮೂಳಿ ತಲೆ ಬೋಳಿಸ್ತೀನಿ” ಎಂದಳು. ಬೋರಿಯು “ನನ್ನ ಕೈಗೆ ಸಿಕ್ಕಲಿ, ಜಜ್ಜಿ ಪುಡಿಮಾಡ್ತೇನೆ” ಎಂದಳು.

ಹೊಸಬಿಯು ಹುಲ್ಲುಗಾವಲಿನಿಂದ ಹಿಂದಿರುಗುವುದು ನಿತ್ಯದಂತೆ ಆವತ್ತೂ ಸಾಯಂಕಾಲವಾಯಿತು. ಕೇರಿಯ ಹುಡುಗರೆಲ್ಲಾ ಅವಳು ಬರುವುದನ್ನೆ ಕಾಯುತ್ತಾ ಊರ ಬಾಗಿಲಿನಲ್ಲಿ ನೆರೆದಿದ್ದರು. ಗುಂಪಿನ ಮಧ್ಯೆ ಕಾಳಿಯ ನಾಲ್ಕು ವಯಸ್ಸಿನ ಹಸುಳೆಯ ನಿಂತಿದ್ದಿತು. ಆಗ ಎದುರು ಕಡೆಯಿಂದ ಮಾದನ ಗೂಳಿಯು ನಾಗಾಲೋಟದಲ್ಲಿ ಮನೆಯ ಕಡೆಗೆ ಓಡಿಬರುತ್ತಿದ್ದಿತು. ಆ ಗೂಳಿಯನ್ನು ಕಂಡರೆ ಜನರು ತುಂಬ ಹೆದರುತ್ತಿದ್ದರು. ಅದು ಎದುರಿಗೆ ಬರುವುದನ್ನು ಕಂಡು ಹುಡುಗರೆಲ್ಲಾ ಓಡಿಬಿಟ್ಟರು. ಕಾಳಿಯ ಚಿಕ್ಕ ಮಗು ಮಾತ್ರ ರಸ್ತೆಯಲ್ಲಿ ಉಳಿದುಕೊಂಡಿತು. ಹುಡುಗರ ಕೂಗನ್ನು ಕೇಳಿ ಕಾಳಿಯ ಬಾಗಿಲಿಗೆ ಬಂದಳು. ಓಡುತ್ತಿದ್ದ ಗೂಳಿಯನ್ನು ನೋಡಿ ಕಾಳಿಗೆ ಜೀವವೇ ಹೋದಂತೆ ಆಯಿತು. ಅವಳು ಮಗುವಿನ ಕಡೆಗೆ ಓಡಿದಳು. ನಾಲ್ಕು ಹೆಜ್ಜೆ ಓಡುವುದರೊಳಗಾಗಿ ಗೂಳಿಯು ಮಗುವಿನ ಸಮೀಪಕ್ಕೆ ಬಂದುದು ಕಾಳಿಗೆ ಕಂಡಿತು. ಅವಳು ಹೋ ಎಂಬುದಾಗಿ ಕಿರಿಚಿಕೊಂಡು ಕಣ್ಣು ಮುಚ್ಚಿಕೊಂಡಳು.

ತಾನು ಹಿಡಿದುಕೊಂಡು ಬರುತ್ತಿದ್ದ ಹಸುವನ್ನು ಹೊಸಬಿಯು ಬಿಟ್ಟು ಮಿಂಚಿನ ವೇಗದಿಂದ ಮುಂದಕ್ಕೆ ನುಗ್ಗಿ ಮಗುವನ್ನು ಎತ್ತಿಕೊಂಡು ಓಡಿದಳು. ಓಡುವ ವೇಗದಲ್ಲಿ ಅವಳು ಬಿದ್ದು ಅವಳ ಮಂಡಿಯು ಕಿತ್ತು, ರಕ್ತವು ಸೋರತೊಡಗಿತು. ಹೋರಿಯು ತನ್ನ ದಾರಿಯನ್ನು ತಾನು ಹಿಡಿದುಕೊಂಡು ಕೊಟ್ಟಿಗೆಗೆ ಓಡಿತು. ಮಗುವು ಭಯದಿಂದ ಕಿರಿಚುತ್ತಿತ್ತು. ಆದರೆ ಅದಕ್ಕೇನೂ ಅಪಾಯವಾಗಿರಲಿಲ್ಲ. ಹೊಸಬಿಯು ಮಗುವನ್ನು ಎತ್ತಿಕೊಂಡು ಕಾಳಿಯ ಬಳಿಗೆ ಹೋದಳು. ಕಾಳಿ ತಾನು ಬೋರನಿಗೆ ಹೇಳಿದ್ದಂತೆ ಹೊಸಬಿಯ ತಲೆಯನ್ನು ಬೋಳಿಸಬೇಕೆಂಬುದನ್ನು ಮರೆತಿರಲಿಲ್ಲ. ಆ ವಿನೋದನನ್ನು ನೋಡುವುದಕ್ಕಾಗಿಯೇ ಹುಡುಗರೆಲ್ಲಾ ನೆರೆದಿದ್ದರು. ಆದರೆ ಕಾಳಿಯ ಬಾಯಿಂದ ಮಾತೇ ಹೊರಡಲಿಲ್ಲ. ಹೊಸಬಿಯು ತನ್ನ ಮಗಳನ್ನು ಕಾಪಾಡಿದಳೆಂಬ ಕೃತಜ್ಞತೆಯಿಂದ ಮಾತ್ರ ಅವಳು ಮಾತನಾಡಲಿಲ್ಲವೆಂದಲ್ಲ. ಹೊಸಬಿಯು ಎದುರಿಗೆ ಇದ್ದರೆ ಅವಳನ್ನು ಬೈಯುವ ಧೈರ್ಯವು ಯಾರಿಗೂ ಇರುತ್ತಿರಲಿಲ್ಲ. ಬೈಗಳದ ಸುರಿಮಳೆಯನ್ನು ಬೋರಿಯೇ ಮೊದಲು ಪ್ರಾರಂಭಿಸಲಿ ಎಂದುಕೊಂಡು ಕಾಳಿಯು ಸುಮ್ಮನಾದಳು. ಅಂತೂ ಒಬ್ಬರೂ ಮಾತನಾಡಲಿಲ್ಲ. ಹೊಸಬಿಯು ಗಂಭೀರವಾಗಿ ರಾಣಿಯಂತೆ ತನ್ನ ಮನೆಗೆ ಹೊರಟು ಹೋದಳು.

ಅಲ್ಲಿಂದ ಮುಂದೆ ಬೋರಿಯೂ ಕಾಳಿಯೂ ಹೊಸಬಿಯ ಬಟ್ಟೆಗಳನ್ನು ಕುರಿತು ಹಾಸ್ಯ ಮಾಡುವುದನ್ನು ಬಿಟ್ಟುಬಿಟ್ಟರು. ಹೊಸಬಿಯ ಕೋಪವೂ ಪ್ರತೀಕಾರವೂ ತಮ್ಮ ಬಟ್ಟೆಗಳನ್ನು ಕಪ್ಪು

ಮಾಡುವಷ್ಟರಲ್ಲಿಯೇ ಅಡಗಿತಲ್ಲಾ ಎಂದು ಅವರಿಗೆ ಸಂತೋಷವೊಂಟಾಯಿತು. ಬೋರನಿಗೆ ಮಾತ್ರ ಬೋರಿಯು ಹೊಸಬಿಯ ತಲೆ ಬೋಳಿಸದುದನ್ನೂ ಅವಳನ್ನು ಬಯ್ಯದೆ ಒಳ್ಳೆಯ ಮಾತುಗಳನ್ನು ಆಡಲು ಪ್ರಾರಂಭಿಸಿದುದನ್ನೂ ಕಂಡು ಆಶ್ಚರ್ಯವಾಯಿತು. ತನ್ನ ಮಗಳಲ್ಲಿ ಅವನಿಗೆ ಗೌರವವು ಹೆಚ್ಚಾಯಿತು.

ಕುಡಿಯುವುದು ಅಭ್ಯಾಸವಾದರೆ ಅದನ್ನು ಬಿಡುವುದು ಬಹಳ ಕಷ್ಟ. ಬೋರನು ಬಿಡಬೇಕೆಂದು ಮಾಡಿದ ಪ್ರಯತ್ನಗಳೆಲ್ಲಾ ಮೊದಮೊದಲು ವ್ಯರ್ಥವಾದುವು. ಒಂದು ದಿವಸ ಹೊಸಬಿಯು ಬೋರನಿಗೆ ಅವನ ಕುಡಿತಕ್ಕಾಗಿ ಶಿಕ್ಷೆ ಮಾಡಬೇಕಾದ ಸಂಭವವುಂಟಾಯಿತು. ಅದು ಈ ರೀತಿ: ಆ ದಿವಸ ಯುಗಾದಿ ಹಬ್ಬ. ಊರಿನಲ್ಲಿ ಎಲ್ಲರಿಗೂ ಸಂಭ್ರಮ. ನಮ್ಮ ಊರ ಪೂಜಾರಿ ದೇವಸ್ಥಾನದಲ್ಲಿ ಆಂಜನೇಯನನ್ನು ಚೆನ್ನಾಗಿ ಅಲಂಕರಿಸಿ ಭಕ್ತಾದಿಗಳು ಬರುವುದನ್ನು ಎದುರುನೋಡುತ್ತಿದ್ದನು. ಹಳ್ಳಿಯ ಹೆಣ್ಣು ಗಂಡು, ಮಕ್ಕಳುಗಳೆಲ್ಲಾ ನದಿಯಲ್ಲಿ ಮಿಂದು ಮಡಿಮಾಡಿದ ಅರಿವೆಗಳನ್ನು ತೊಟ್ಟು ಜುಟ್ಟಿಗೆ ದವನವನ್ನು ಸಿಕ್ಕಿಸಿಕೊಂಡು ಹಣೆಗೆ ನಾಮ ಹಾಕಿಕೊಂಡು ದೇವಸ್ಥಾನಕ್ಕೆ ಹೋಗಲು ಸಿದ್ಧರಾಗಿದ್ದರು. ದೇವಸ್ಥಾನಕ್ಕೆ ಹೋಗಿ ದೇವರಿಗೆ 'ತಳಿಗೆ' ಇಟ್ಟು, ತೀರ್ಥ 'ಪರ್ಸಾದ' ತೆಗೆದುಕೊಂಡು ಪೂಜಾರಿ ಅಯ್ಯನನ್ನು ಮನೆಗೆ ಕರೆತಂದು ಅವನಿಗೆ ಪಡಿಯನ್ನು ಕೊಟ್ಟ ಹೊರತು ಮನೆಯಲ್ಲಿ ಯಾರೂ ಬಾಯಿಗೆ ನೀರು ಸೋಕಿಸುವುದಿಲ್ಲ. ಹೀಗೆ ಪೂಜಾರಿ ಅಯ್ಯನಿಗೆ ಪ್ರತಿ ಯುಗಾದಿಯಲ್ಲಿಯೂ ನೂರಾರು ಸೇರು ಅಕ್ಕಿ ಸಿಕ್ಕುತ್ತದೆ. ಹಿಂದೆ ಇದಕ್ಕಿಂತ ಬಹಳ ಹೆಚ್ಚಾಗಿ ಸಿಕ್ಕುತ್ತಿದ್ದಿತಂತೆ. ಈಚಗೆ ಈ ಕಲಿಕಾಲದಲ್ಲಿ ಜನರಿಗೆ ದೈವಭಕ್ತಿ ಕಡಮೆಯಾಯಿತೆಂದು ಪೂಜಾರಿ ಅಯ್ಯನು ಗೊಣಗುಟ್ಟುತ್ತಿದ್ದಾನೆ. ಇರಲಿ. ಯುಗಾದಿ ಹಬ್ಬದ ದಿವಸ ಹೊಸಬಿಯು ಉಳಿದವರಿಗಿಂತ ಹೆಚ್ಚು ಮಡಿಯಾಗಿದ್ದಳು. ತನ್ನ ಪ್ರೀತಿಯ ಹಸುವಿನ ಮೈಯನ್ನು ತೊಳೆದು ಅದರ ಹಣೆಗೆ ಕುಂಕುಮವನ್ನಿಟ್ಟು ಕೋಡಿಗೆ ಚೆಂಡುಹೂವಿನ ದಂಡೆಯನ್ನು ಸುತ್ತಿ ಸಿಂಗರಿಸಿದಳು. ಕುಂಟನಾದ ಬೋರನಿಗೆ ಬಲಾತ್ಕಾರದಿಂದ ಬಿಸಿನೀರಿನಲ್ಲಿ ಸ್ನಾನಮಾಡಿಸಿದಳು. ದೋಸೆ, ಪಾಯಿಸ ಮುಂತಾದ ರುಚಿಯಾದ ಅಡಿಗೆಗಳನ್ನೆಲ್ಲಾ ಮಾಡಿಟ್ಟು ದೇವಸ್ಥಾನಕ್ಕೆ 'ತಳಿಗೆ'ಯನ್ನು ತೆಗೆದುಕೊಂಡುಹೋದಳು. ರುಚಿಯಾದ ಅಡಿಗೆಯನ್ನು ಮಾಡುವುದರಲ್ಲಿನಮ್ಮಊರು ಒಕ್ಕಲುಗಿತ್ತಿಯರ ಪೈಕಿ ಹೊಸಬಿ ಬಹಳ ಹೆಸರುವಾಸಿಯಾಗಿದ್ದಾಳೆ.

ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಊರಿನವರೆಲ್ಲಾ ದೇವಸ್ಥಾನದಲ್ಲಿ ಸೇರಿದರು. ದೇವಸ್ಥಾನದಲ್ಲಿ ಓಲಗ ಚೆನ್ನಾಗಿ ಸದ್ದಾಗುತ್ತಿದ್ದಿತು. ಕೊಂಬು, ತಮಟೆ, ತುತ್ತೂರಿ ಇವುಗಳ ಸದ್ದು

ಆಕಾಶವನ್ನೇ ಮುಟ್ಟುತ್ತಿದ್ದಿತು. ಬೋರನು ಮನೆಯಲ್ಲಿ ಕುಳಿತಕಡೆಯೇ ಕುಳಿತಿದ್ದನು. ಆ ಓಲಗ, ಆ ತಮಟೆ, ಆ ದೇವಸ್ಥಾನದ ಗದ್ದಲ ಇವುಗಳನ್ನೆಲ್ಲಾ ಕೇಳಿ ಅವನಿಗೂ ಜೀವನದಲ್ಲಿ ಹೊಸ ಆಸಕ್ತಿ ಹುಟ್ಟಿತು. ಹೊರಗಡೆ ತಿರುಗಾಡಬೇಕೆನಿಸಿತು. ತಾನು ಹಿಂದೆ ಕುರಿಗಳ ಜತೆಯಲ್ಲಿ ಕಾಡಿನಲ್ಲಿ ಅಲೆದಾಡುತ್ತಿದ್ದುದು, ಹಿಂದೆ ತಾನೂ ಕಳೆದಿದ್ದ ಯುಗಾದಿಹಬ್ಬಗಳು, ಆಗ ತಾನು "ದೋಸ್ತಿ"ಯವರ ಜೊತೆಯಲ್ಲಿ ಕುಡಿದ ಹೆಂಡ, ಪಟ್ಟ ಆನಂದ, ಆಡಿದ ಆಟ ಇವುಗಳೆಲ್ಲಾ ಜ್ಞಾಪಕಕ್ಕೆ ಬಂದುವು. ಅವನ ಮನಸ್ಸು ದೇಹವನ್ನು ಬಿಟ್ಟು ಅಲೆಯ ತೊಡಗಿತು.

ಇದ್ದಕ್ಕಿದ್ದಂತೆ ಬೋರನಿಗೆ ಆ ನಿರುತ್ಸಾಹದಲ್ಲಿ ಒಂದು ಕಿರಣವು ಹೊಳೆಯಿತು. ತಾನು ಹೆಂಡವನ್ನು ಕುಡಿಯಬೇಕೆಂದೂ ಅದು ತನ್ನ ಹಕ್ಕೆಂದೂ ಅವನು ಯೋಚಿಸತೊಡಗಿದನು. ನಿರುತ್ಸಾಹವುಂಟಾದ ಕಾಲದಲ್ಲಿ ಅಲ್ಪ ಸುಖಗಳ ಕಡೆಗೆ ಮನಸ್ಸು ಒಲಿಯುವುದು ಸಾಮಾನ್ಯ. ಬೋರನು ತೆವಳಿಕೊಂಡು ಬಾಗಿಲಿಗೆ ಬಂದನು. ಅವನು ಬಾಗಿಲಿಗೆ ಬರುವ ವೇಳೆಗೆ ಅವನ ಹಿಂದಲ ಗೆಳೆಯನಾದ ಕರಿಯನು ದೇವಸ್ಥಾನದ ದಾರಿಹಿಡಿದು ಹೋಗುತ್ತಿದ್ದನು. ಬೋರನು ಅವನನ್ನು ಹತ್ತಿರಕ್ಕೆ ಕರೆದನು. ಹಿಂದೆ ಬೋರನು ಗಟ್ಟಿಗನಾಗಿ ಸಂಪಾದಿಸುತ್ತಿದ್ದ ಕಾಲದಲ್ಲಿ ಕರಿಯನು ಅವನ ಜತೆ ಸೇರಿಕೊಂಡು ಅವನ ವೆಚ್ಚದಿಂದ ಬೇಕಾದಂತೆ ಕುಡಿಯುತ್ತಿದ್ದನು. ಆದರೆ ಈಚೆಗೆ ಬೋರನು ಕೈಯಲ್ಲಿ ಹರಿಯದವನಾಗಿ ದುಡ್ಡಿಗೆ ಗತಿಯಿಲ್ಲದೆ ಹೊಸಬಿಯ ಹಿಡಿತಕ್ಕೆ ಒಳಗಾದುದರಿಂದ ಕರಿಯನಿಗೆ ತನ್ನ ಹಿಂದಲ ಗೆಳೆಯನಲ್ಲಿ "ದೋಸ್ತಿ" ತಪ್ಪಿಹೋಗಿತ್ತು. ಅವನು ಇತ್ತಲಾಗಿ ಬೋರನನ್ನು ನೋಡುವುದನ್ನೇ ಬಿಟ್ಟಿದ್ದನು. ಈಗ ಬೋರನು ತನ್ನನ್ನು ಕರೆದುದರಿಂದ ಕರಿಯನು "ಇವ ನನ್ನ ಏನೋ ಕೇಳ್ತಾನೆ. ಹೋಗಲೋ ಬೇಡವೋ" ಎಂಬುದಾಗಿ ಯೋಚಿಸಿಕೊಂಡು ಕೊನೆಗೆ ಬಂದನು. ಬೋರನು ಅವನನ್ನು ಹತ್ತಿರಕ್ಕೆ ಕರೆದು "ಇವತ್ತು ಹಬ್ಬ. ಹಬ್ಬದ ದಿವಸ ಕುಡಿಯೋಕೆ ತೊಟ್ಟು ಹೆಂಡಾನೂ ಇಲ್ಲವಲ್ಲ" ಎಂದನು. ಕರಿಯನಿಗೆ ಹೆಂಡದ ಮಾತನ್ನು ಕೇಳಿ ಸ್ವಲ್ಪ ಉತ್ಸಾಹವುಂಟಾಯಿತು. ಅವನು "ದಟ್ಟೀಲಿ ದುಡ್ಡಯ್ತಾ?" ಎಂದು ಕೇಳಿದನು. ಹೊಸಬಿಯು ಶ್ಯಾನುಭೋಗರಿಗೆ ತರಕಾರಿ ಮಾರಿದ್ದ ದುಡ್ಡನ್ನು ಅವರು ಆಗ ತಾನೆ ತಂದುಕೊಟ್ಟಿದ್ದರು. ಬೋರನು ಅದನ್ನು ಕರಿಯನ ಕೈಯಲ್ಲಿ ಕೊಟ್ಟು "ಹೆಣ್ಣು ದೇವಸ್ಥಾನಕ್ಕೆ ಹೋಗದೆ. ಅದು ಬರೋಕೆ ಮುಂಚೆ ತಂದ್ಬಿಡು" ಎಂಬುದಾಗಿ ಹೇಳಿದನು. ಕರಿಯನು ದುಡ್ಡನ್ನು ತೆಗೆದುಕೊಂಡು ಹೋದನು.

ಕಾಲು ಗಂಟೆಯೊಳಗಾಗಿ ಕರಿಯನು ಹೆಂಡವನ್ನು ಗಡಿಗೆಯಲ್ಲಿ ತುಂಬಿಕೊಂಡು ಮನೆಗೆ ಬಂದನು. ಬೋರನ ಮಾಮೂಲು ಹೆಂಡದ ಬುರುಡೆಯನ್ನು ಹೊಸಬಿಯು ಒಡೆದಿದ್ದುದರಿಂದ ಅವರು ಈಗ ಗಡಿಗೆಯನ್ನೇ ಉಪಯೋಗಿಸಬೇಕಾಯಿತು. ಅಷ್ಟು ಹೊತ್ತಿಗೆ ದೇವಸ್ಥಾನದಲ್ಲಿ ಮಂಗಳಾರತಿಯ ಗಂಟೆಯ ಸದ್ದು ಕೇಳಿಸಿತು. ಬೋರನು "ಓಹೋ, ಗುಡಿ ಒಳ್ಗೆ ಮಂಗಳಾರ್ತಿ ಆಯ್ತುಯ್ತೆ. ಇನ್ನೇನು ಹೊಸಬಿ ಬತ್ತಾಳೆ. ನಾವು ಹೆಂಡ ಕುಡಿಯೋದ ಕಂಡರೆ ದೇವರೇ ಗತಿ. ಬಾ, ದನೀನ ಹಟ್ಟಿಗೆ ಹೋಗೋಣ" ಎಂದನು. ಹೊಸಬಿಯ ಹೆಸರನ್ನು ಕೇಳಿದರೆ ನಮ್ಮ ಹಳ್ಳಿಯ ಹೆಂಡಕುಡುಕರೆಲ್ಲಾ ಹೆದರುತ್ತಾರೆ. ಕರಿಯನೂ ಬೋರನೂ ದನವಿನ ಕೊಟ್ಟಿಗೆಗೆ ಹೋಗಿ ಬಾಗಿಲು ಹಾಕಿಕೊಂಡು ಹೆಂಡವನ್ನು ಕುಡಿಯಲು ಪ್ರಾರಂಭಿಸಿದರು.

ಬೋರನೂ ಕರಿಯನೂ ತಾವು ಸ್ವಲ್ಪವೇ ಹೆಂಡವನ್ನು ಕುಡಿಯ ಬೇಕೆಂದೂ ಮಿತಿಮೀರಿ ಅಮಲೇರುವಂತೆ ಕುಡಿಯಬಾರದೆಂದೂ ತೀರ್ಮಾನಿಸಿಕೊಂಡಿದ್ದರು. ಆದರೆ ಕುಡಿಯುವುದಕ್ಕೆ ಪ್ರಾರಂಭಮಾಡಿದರೆ ಅದಕ್ಕೆ ಒಂದು ಮಿತಿಯಿಲ್ಲ. ಅವರಿಬ್ಬರೂ ಮಿತಿಮೀರಿ ಕುಡಿದರು. ಕರಿಯನು ಬೀಡಿಯನ್ನು ಸೇದಲು ಪ್ರಾರಂಭಿಸಿದನು. ಬೋರನು ಆಫೀಮನ್ನೂ ಹೊಗೆ ಸೊಪ್ಪನ್ನೂ ಮಣ್ಣಿನ ಕೊಳವೆಯಲ್ಲಿಟ್ಟುಕೊಂಡು ಸೇದುತ್ತಿದ್ದನು.

ದೇವಸ್ಥಾನದಲ್ಲಿ ಪೂಜಾರಿ ಐನೋರು ಬಹಳ ಜೋರಿನಿಂದ ಮಂಗಳಾರತಿ ನಡೆಸುತ್ತಿದ್ದರು. ಒಕ್ಕಲಿಗರ ಹೆಂಗಸರಿಗಂತೂ ಆ ದಿವಸ ಅವರಲ್ಲಿ ಭಕ್ತಿ ಬಹಳ ಹೆಚ್ಚಾಗಿಬಿಟ್ಟಿತ್ತು. ಉಗಾದಿ ಹಬ್ಬದ ದಿವಸ ಒಕ್ಕಲಿಗರ ಹೆಂಗಸರು ಮನೆಯಲ್ಲಿ ಅನ್ನವನ್ನು ಮಾಡಿ ಅದನ್ನು ಮೊಸರಿನಲ್ಲಿ ಕಲಸಿ ಕುಕ್ಕೆಯಲ್ಲಿ ಇಟ್ಟುಕೊಂಡು ತೆಂಗಿನಕಾಯಿ, ಬಾಳೆಹಣ್ಣು, ಹೂವು ಮುಂತಾದವುಗಳ ಜತೆಯಲ್ಲಿ ದೇವಸ್ಥಾನಕ್ಕೆ ಬಂದಿರುತ್ತಾರೆ. ಐನೋರು ಹಣ್ಣು, ಕಾಯಿ, ಹೂವು ಇವುಗಳನ್ನು ತೆಗೆದುಕೊಂಡು ದೇವರಿಗೆ ನಿವೇದನೆ ಮಾಡುತ್ತಾರೆ. ಅನಂತರ, ರೈತರ ಹೆಂಗಸರು ಕುಕ್ಕೆಗೆ ಮುಚ್ಚಿರುವ ಬಟ್ಟೆಯನ್ನು ತೆಗೆದು ಮೊಸರನ್ನದ ತಳಿಗೆಯನ್ನು ಪೂಜಾರಿಗೆ ತೋರಿಸುತ್ತಾರೆ. ಪೂಜಾರಿಯು ಒಂದು ಹೂವಿನಲ್ಲಿ ನೀರನ್ನು ಅದ್ದಿ ಆ ಅನ್ನದ ಮೇಲೆ ಅದನ್ನು ಚಿಮುಕಿಸುತ್ತಾನೆ. ಅವನು ತೆಂಗಿನಕಾಯಿ ಬಾಳೆಯಹಣ್ಣುಗಳನ್ನು ಹೊರತು ತಳಿಗೆಯನ್ನು ಮುಟ್ಟುವುದಿಲ್ಲ. ಇರಲಿ.

ಮಂಗಳಾರತಿಯಾದನಂತರ ಹೊಸಬಿಯು ಮನೆಗೆ ಬಂದಳು. ಬೀದಿ ಬಾಗಿಲಿಗೆ ಬಂದಕೂಡಲೆ ಬೀಡಿ ಮತ್ತು ಅಫೀಮಿನ ಹೊಗೆಯ ವಾಸನೆ ಅವಳಿಗೆ ಗೊತ್ತಾಯಿತು. ಅವಳು ಬಂದುದನ್ನು ಕಂಡು ಬೋರನು ಕರಿಯನನ್ನು ಕೊಟ್ಟಿಗೆಯಲ್ಲಿ ಕೂರಿಸಿ ತಾನು ಮಾತ್ರ ಹೊರಕ್ಕೆ

ಬಂದನು. ಹೊಸಬಿಯು ಅವನನ್ನು ಕುರಿತು "ಏನಪ್ಪ, ಹಬ್ಬದ್ದಿವ್ಸ ಎಲ್ಲರೂ ದೇವತಾನಕೆ ಹೋಗಿ ಮಡ್ಯಾಗಿ ದೇವರ ತೀರ್ಥ ಪರ್ಸಾದ ತಕೊಂಡು ಬರ್ತವ್ರೆ, ನೀನು ಬೀಡಿ ಸೇತ್ತಿಯಲ್ಲಪ್ಪ, ಪೂಜಾರಿ ಐನೋರು ಪಡಿ ತಕೊಳ್ಳೋಕೆ ಬರ್ತಾರೆ. ನೀನು ಹೀಗೆ ಬೀಡಿ ಸೇಡ್ತಾ ನಿಂತಿದ್ದರೆ ಸಿಟ್ಕೊತಾರೆ" ಎಂದಳು. ಬೋರನಿಗೆ ಅಮಲು ಸ್ವಲ್ಪ ಸ್ವಲ್ಪವಾಗಿ ಏರುತ್ತಾ ಇತ್ತು. ಆದರೂ ಅವನು "ಪೂಜಾರಿ ಅಯ್ಯ ಬಂದು ಹೋಗೋ ಗಂಟ ನಾನು ದನೀನ ಹಟ್ಟೀಲೆ ಇರ್ತೀನಿ" ಎಂದು ಹೇಳಿ ಮತ್ತೆ ಕೊಟ್ಟಿಗೆಗೆ ಹೊರಟು ಹೋದನು.

ಸ್ವಲ್ಪ ಹೊತ್ತಿನೊಳಗಾಗಿ ಪೂಜಾರಿ ಅಯ್ಯನು ಹೊಸಬಿಯ ಮನೆಗೆ ಬಂದನು. ಅವನ ಹಿಂದೆ ಹೊಸಬಿಯ ಜತೆಗಾತಿಯರು ನಾಲ್ಕೈದು ಜನ ಹುಡುಗಿಯರು ಬಂದರು. ಹೊಸಬಿಯು ಐನೋರನ್ನು ಮಣೆಯ ಮೇಲೆ ಕೂರಿಸಿ ಎಲೆ, ಅಡಕೆ, ಹೂವು, ಕಾಯಿ, ಅಕ್ಕಿ, ಬೇಳೆ, ತರ್ಕಾರಿ, ಬಾಳೆಹಣ್ಣು ಎಲ್ಲವನ್ನೂ ತಟ್ಟೆಯಲ್ಲಿ ತಂದಿಟ್ಟು ದಣ್ಣಿಕ್ಕಿದಳು. ಪೂಜಾರಿ ಅಯ್ಯನು "ನೀನೇ ಪುಣ್ಯಾತ್ಗಿತ್ತಿ ತಾಯಿ. ನಿನ್ನಲ್ಲಿ ಲಕ್ಷ್ಮಿ ಅವ್ಳೆ... ಎಲ್ಲಿ ನಿಮ್ಮಪ್ಪ ಬೋರ? ನಿನ್ನಂತ ಹೆಣ್ಣ ಹೆರೋಕೆ ಪುಣ್ಯ ಮಾಡಿದ್ದ. ಈಚೆಗೆ ನಿನ್ಮಾತ ಕೇಳಿ ಅವ ಹೆಂಡ ಕುಡಿಯೋದು ಬೀಡಿ ಸೇದೋದು ಎಲ್ಲಾ ಬಿಟ್ಟಿವ್ನೆ. ನೀನು ಚೆನ್ನಾಗಿ ಬಾಳಮ್ಮ" ಎಂದನು.

ಆ ವೇಳೆಗೆ ಕೊಟ್ಟಿಗೆಯಲ್ಲಿ ಹೆಂಡ ಕುಡಿಯುತ್ತಿದ್ದವರ ಮಾತುಗಳು ಪ್ರಾರಂಭವಾದುವು. ಕರಿಯನೂ ಬೋರನೂ ಹೆಂಡದ ಅಮಲಿನಿಂದ ಮೈಮೇಲೆ ಜ್ಞಾನವಿಲ್ಲದವರಾಗಿ ಹರಟುತ್ತಿದ್ದರು. ಅವರ ಹಾಡುಗಳೂ ಪದಗಳೂ ಬಹಳ ಜೋರಾಗಿದ್ದುವು. ಪೂಜಾರಿ ಅಯ್ಯನು ಹೊಸಬಿಯ ಕಡೆ ನೋಡಿದನು. ಹೊಸಬಿಯು ಗಾಬರಿಯಿಂದ ಕೊಟ್ಟಿಗೆಯ ಕಡೆ ನೋಡಿದಳು. ಮುಂದಲ ಗಳಿಗೆಯಲ್ಲಿ ಕೊಟ್ಟಿಗೆ ಬಾಗಿಲು ತೆರೆಯಿತು. ಕರಿಯನೂ ಬೋರನ ಮೈಮೇಲೆಲ್ಲಾ ಹೆಂಡವನ್ನು ಚೆಲ್ಲಿಕೊಂಡು ಹೊರಕ್ಕೆ ಬಂದರು. ಕರಿಯನ ಬಾಯಲ್ಲಿ ಬೀಡಿಯಿದ್ದಿತು. ಬೋರನು ಮಣ್ಣಿನ ಕೊಳವೆಯಲ್ಲಿ ಅಫೀಮನ್ನು ಸೇದುತ್ತಿದ್ದನು. ಪೂಜಾರಿಯನ್ನು ನೋಡಿದ ಕೂಡಲೆ ಬೋರನು "ಪೂಜಾರಿ ಆಯ್ಯ, ಈ ಕೊಳ್ವೆ ನೋಡೊ ಹೆಂಗಯ್ತೆ. ಇದೂ ಮನಸನ ಹಾಗೆಯೇ. ಮನಸನ ದೇಹಾ ಮಣ್ಣಿಂದ ಮಾಡಿರೋದು. ಇದ್ನ ಮಾಡಿರೋದು ಮಣ್ಣಿಂದ್ಲೆ. ಮನಸ್ನ ಸರಳ (ಶರೀರ)ದಲ್ಲಿ ಬೆಂಕಿ ಇರೋಗಂಟ ಅವಸ್ಥೆ ಪರಾಣ ಇರ್ತಯ್ತೆ. ಇದ್ರಲ್ಲು ಬೆಂಕಿ ಇರೋಗಂಟ ಇದ್ಕು ಪರಾಣ ಇರ್ತಯ್ತೆ. ಮನಸ್ನ ಬೆಂಕಿ ಹೋದ್ರೆ ಅವ ತಣ್ಣಾಗ್ಯಾತಾನೆ. ಇದರ ಬೆಂಕಿ ಹೋದ್ರೆ ಇದೂ ತಣ್ಣಯ್ತುಯ್ತೆ. ಹಾ ಹಾ ಹಾ!!!" ಎಂದನು. ಪೂಜಾರಿಯು ತಿರಸ್ಕಾರದಿಂದ ಹೊಸಬಿಯ ಕಡೆ ನೋಡಿದನು. ಬೋರನು

"ಪೂಜಾರಿ ಅಯ್ಯಾ, ಹೆಂಡ ನೀ ಕುಡಿದಿಲ್ಲ. ಒಂದ್ಸಲಾ ಕುಡ್ದು ನೋಡು ಅದರ ಅಮಲಾ. ಆಮೇಲೆ ಅದ ನೀ ಬಿಡೋಕಿಲ್ಲ. ಹೆಂಡ ಕುಡದ್ಬಿಟ್ಟು, ಒಂದು ಕೈಲಿ ಹೆಂಡದ ಬುಂಡೇನೂ ಇನ್ನೊಂದು ಕೈಲಿ ನಮ್ಮ ತಲೆ ಬುಂಡೇನೂ ಹಿಡ್ಕೊಂಡು ಹಾಡ್ತಾ ಹೊಂಟ್ಬಿಟ್ರೆ ಲೋಕಾನೆ ನಮ್ಗೆ ಎದ್ರಿಲ್ಲ" ಎಂಬುದಾಗಿ ಹೇಳಿಕೊಂಡು ಮಡಿಯಾಗಿ ನಿಂತಿದ್ದ ಪೂಜಾರಿ ಅಯ್ಯನ ಹೆಗಲಿನ ಮೇಲೆ ಕೈ ಹಾಕಿದನು. ಪೂಜಾರಿ ಅಯ್ಯನು ಗಾಬರಿಯಿಂದ ಮಾತನಾಡದೆ ಎಲೆ, ಅಡಕೆ, ಅಕ್ಕಿ, ಬಾಳೆಹಣ್ಣುಗಳನ್ನು ಎತ್ತಿಕೊಂಡು ಪರಾರಿಯಾದನು.

ಹೊಸಬಿಗೆ ಬಹಳ ಕೋಪವುಂಟಾಯಿತು. ದೇವರ ಪೂಜೆ ಮುಂತಾದುವನ್ನು ತಾನು ಉಳಿದವರಿಗಿಂತ ಹೆಚ್ಚು ಮಡಿಯಾಗಿ ಮಾಡುತ್ತೇನೆಂಬುದೇ ಅವಳ ಹೆಮ್ಮೆಯಾಗಿದ್ದಿತು. ಆದರೆ ಈಗ ತನ್ನ ಅಪ್ಪ ಬೋರನು ಪೂಜಾರಿಯ ಎದುರಿಗೆ ಹಬ್ಬದ ದಿವಸ ಮಾಡಿದ ಈ ಚೇಷ್ಟೆಯಿಂದ ಊರಿನವರೆಲ್ಲಾ ತನ್ನನ್ನು ಹಾಸ್ಯಮಾಡುವರೆಂದು ಅವಳಿಗೆ ಭಯವುಂಟಾಯಿತು. ಹಬ್ಬದ ದಿವಸ ಬೋರನು ಕುಡಿದುದರಿಂದ ತನ್ನ ಮನೆಯ ಮೇಲೆ ದೇವರ ಆಗ್ರಹವುಂಟಾಯಿತೆಂದು ಅವಳು ದೃಢವಾಗಿ ನಂಬಿದಳು.

ಪೂಜಾರಿ ಅಯ್ಯನು ಮನೆಗೆ ಹೋದ ಮೇಲೆ ಕರಿಯನು ಬೋರನಿಗೆ ಹೇಳದೆ ಕೇಳದೆ ಓಡಿಬಿಟ್ಟನು. ಬೋರನಿಗೆ ಒಂದು ಗಂಟೆಯ ಮೇಲೆ ಅಮಲು ಸುಮಾರಾಗಿ ಇಳಿಯಿತು. ಆಗ ಅವನಿಗೆ ತಾನು ಮಾಡಿದುದು ತಪ್ಪೆಂದು ಗೊತ್ತಾಯಿತು. ತಾನು ಕುಡಿದುದರಿಂದ ಹೊಸಬಿಗೆ ಕೋಪವುಂಟಾಗಿದೆಯೆಂದೂ ಅವನು ತಿಳಿದನು. ಆದರೆ ಹೊಸಬಿಯು ತನ್ನ ಸ್ವಭಾವಕ್ಕೆ ವಿರುದ್ಧವಾದರೂ ಆ ದಿವಸ ಕೂಗಾಡಲಿಲ್ಲ. ಕೋಪವನ್ನು ತೋರಿಸಿಕೊಳ್ಳಲಿಲ್ಲ. ಅವಳ ಮುಖದಲ್ಲಿ ಒಂದು ವಿಧವಾದ ನಿಶ್ಚಯವು ಒಡೆದು ತೋರುತ್ತಿದ್ದಿತು.

ಬೋರನಿಗೆ ಬಹಳ ಹಸಿವಾಗಿದ್ದಿತು. ಯಾವ ಕೆಲಸವನ್ನೂ ಅಚ್ಚುಕಟ್ಟಾಗಿ ಮಾಡುತ್ತಿದ್ದ ಹೊಸಬಿಯು ಆ ದಿವಸ ಹಬ್ಬಕ್ಕಾಗಿ ಒಳ್ಳೊಳ್ಳೆಯ ಅಡಿಗೆಗಳನ್ನು ಮಾಡಿದ್ದಳು. ಅವುಗಳ ಹಿತವಾದ ವಾಸನೆಯು ಮೂಗಿಗೆ ಸೋಕಿ, ಬೋರನ ಹಸಿವು ಇನ್ನೂ ಹೆಚ್ಚಾಗಿದ್ದಿತು. ಮಧ್ಯಾಹ್ನ ಮೂರು ಗಂಟೆ ಮೀರಿದ್ದರೂ ಹೊಸಬಿಯು ಉಣ್ಣೋಕೆ ಗಂಗಳ ಹಾಕುವ ಸೂಚನೆ ತೋರಲಿಲ್ಲ. ಅವಳ ಪಾಡಿಗೆ ಅವಳು ಇದ್ದಬಿದ್ದ ಹಳೆಯ ಕೆಲಸಗಳನ್ನೆಲ್ಲಾ ಮಾಡುತ್ತಾ ಮಾತನಾಡದೆ ಓಡಾಡುತ್ತಿದ್ದಳು. ಬೋರನು ತಾನೇ ಧೈರ್ಯ ಮಾಡಿ "ಏನೇ, ಉಣ್ಣೋಕೆ ಇಕ್ಕೊಲ್ವಯಾಲೆ ಆರ್ಕಟ್ಟೊ ಹೊತ್ತು ಮೀರ್ತೆಲ್ಲ" ಎಂದನು. ಹೊಸಬಿಯು "ನಿನ್ನ ತಣಿಗೆ (ತಟ್ಟೆ) ಕೊಟ್ಟಿಗೇಲಿದ್ದೆ. ತಕೊಂಡು ಬಾ"

ಎಂದಳು. ಬೋರನು ತೆವಳುತ್ತಾ ಕೊಟ್ಟಿಗೆಗೆ ಹೋದನು. ಅವನು ಒಳಕ್ಕೆ ಹೋದ ಕೂಡಲೆ ಹೊಸಬಿಯು ಕೊಟ್ಟಿಗೆ ಬಾಗಿಲನ್ನು ಎಳೆದು ಹೊರಗಿನ ಚಿಲಕವನ್ನು ಹಾಕಿಕೊಂಡಳು.

ಬೋರನಿಗೆ ಹಸಿವಿನ ಬಾಧೆ ಹೆಚ್ಚಾಗಿತ್ತು. ಅವನು ಬಾಗಿಲನ್ನು ತಟ್ಟಿದನು. ಹೊಸಬಿಗೆ ಗೋಗರೆದು ದಮ್ಮಯ್ಯಗುಡ್ಡೆ ಹಾಕಿದನು. ಆದರೆ ಅವಳು ಅದಾವುದೂ ಕೇಳದವಳಂತೆ ತನ್ನ ಪಾಡಿಗೆ ತಾನು ಇದ್ದಳು. ರಾತ್ರಿಯಾಯಿತು. ಬೋರನು ದನದ ಕೊಟ್ಟಿಗೆಯಿಂದ ಹೊರಕ್ಕೆ ಮಲಗುವುದಕ್ಕೆ ಬರಬೇಕೆಂದು ಬಹಳ ಪ್ರಯತ್ನಿಸಿದನು. ಹೊಸಬಿಯು ನಿರ್ದಯದಿಂದ ಹಾಕಿದ ಚಿಲಕವನ್ನು ತೆಗೆಯಲೇ ಇಲ್ಲ. ಬೋರನು ಹಸಿವಿನಿಂದ ಬಳಲಿ ಚಳಿಯಲ್ಲಿ ನಡುಗಿ ಸೊಳ್ಳೆಗಳ ಕಡಿತವನ್ನು ತಾಳಲಾರದೆ ಒಂದು ಕಡೆ ಬಿದ್ದುಕೊಂಡನು. ನಿದ್ರೆ ಮಾಡಬೇಕೆಂದು ಅವನು ಮಾಡಿದ ಪ್ರಯತ್ನಗಳೆಲ್ಲಾ ವ್ಯರ್ಥವಾದುವು. ಮೊದಲು ಮೊದಲು ಅವನಿಗೆ ಹೊಸಬಿಯ ಮೇಲೆ ಕೋಪ ಬಂದಿತು. ಆದರೆ ಬರಬರುತ್ತಾ ಆ ಕೋಪವು ಶಮನವಾಗಿ ತನ್ನಲ್ಲಿಯೇ ತನಗೆ ಜುಗುಪ್ಸೆಯುಂಟಾಯಿತು. ಸಂಸಾರದ ಭಾರವನ್ನೆಲ್ಲಾ ಹೊತ್ತಿದ್ದ ಆ ಸಣ್ಣ ಹುಡುಗಿ, ಅವಳು ಒಂದು ಗಳಿಗೆಯ ಬಿಡುವಿಲ್ಲದೆ ಬೆಳಗಿನಿಂದ ರಾತ್ರಿಯವರೆಗೆ ದುಡಿದು ಪಡುತ್ತಿದ್ದ ಕಷ್ಟ, ಅನಾಥರಾದ ತಮ್ಮಂದಿರನ್ನು ಅವಳು ತಾಯಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದುದು, ನಿರ್ಗತಿಕನಾಗಿ ಭಿಕಾರಿಯಾಗುವಂತಿದ್ದ ತಾನು ಸರೀಕರೆದುರಿಗೆ ಗೌರವದಿಂದಿರುವಂತೆ ಹೊಸಬಿಯು ಸ್ವತಂತ್ರಳಾಗಿದ್ದುದು ಇವುಗಳನ್ನೆಲ್ಲಾ ಅವನು ಯೋಚಿಸತೊಡಗಿದನು. ಅನಂತರ "ಪಾಪ ಹುಡ್ಗಿ, ಸರಳದ (ಶರೀರದ) ರಕ್ತ ಸುರಿಸಿ ಕಾಸಿಗೆ ಕಾಸು ಸಂಪಾಸ್ತದೆ. ಆ ಕಾಸ್ನ ನಾನು ಹೆಂಡ ಕುಡಿಯೋಕೆ ಹಾಳ್ಮಾಡಿದ್ದು ಅಯಿಯೇಕ. ಇನ್ಮೇಲೆ ಬೆಟ್ಟದ ಹನಮಂತ್ರಾಯ್ನ ಆಣೆಗೂ ಹೆಂಡ ಕುಡ್ಯೋಕಿಲ್ಲ. ಕುಡಿದ್ರೆ ನನ್ಮಕ್ಳನ್ನ ನಾ ಕೊಂದ ಹಾಗೆ" ಎಂಬುದಾಗಿ ಪ್ರತಿಜ್ಞೆ ಮಾಡಿಕೊಂಡನು.

ಹೊಸಬಿಗೂ ನಿದ್ರೆ ಬರಲಿಲ್ಲ. ಬೋರನು ಹೆಂಡ ಕುಡಿದುದನ್ನು ಕಂಡು ಅವಳಿಗೆ ಬಹಳ ಅಸಮಾಧಾನವೂ ದುಃಖವೂ ಉಂಟಾಗಿತ್ತು. ಅವಳು ಆ ರಾತ್ರಿಯೆಲ್ಲಾ ಬೀಸುವ ಕಲ್ಲಿನ ಮುಂದೆ ಕುಳಿತು ರಾಗಿಯನ್ನು ಬೀಸಿದಳು. ಬೀಸುವ ಸದ್ದನ್ನು ಕೇಳಿ ಬೋರನಿಗೆ ಹೊಟ್ಟೆಯಲ್ಲಿ ಸಂಕಟವುಂಟಾಯಿತು. "ಪಾಪ ಕೂಸು ಹೊತ್ತಾರೆ ಇಂದ ದುಡಿದದೆ. ಇಳ್ಳೆಲ್ಲಾ ಬೀಸಿ ಅನ್ಯಾಯವಾಗಿ ಕಾಯಿಲೆ ಬೀಳ್ತದೆಲ್ಲಾ, ನನ್ನ ಕಂದ ಅಯ್ಯೋ ಏನ್ಮಾಡಲಿ!" ಎಂದು ಅವನು ಕೊರಗಿದನು. ಎಷ್ಟಾದರೂ ತಂದೆಯ ಕರುಳಲ್ಲವೇ? ಅವನು ಮತ್ತೆ ಬಾಗಿಲಿಗೆ ಬಂದು "ಹೊಸಬಿ, ನಿನ್ನ ದಮ್ಮಯ್ಯ ನಿನ್ನ ಕಾಲ್ಗೆ ಬೀಳ್ತೇನೆ. ಇನ್ಮೇಲೆ ಹೆಂಡ ಮುಟ್ಟೋಕಿಲ್ಲ. ಇವತ್ತು ಕುಡಿದದ್ದೆ ನೀನೇನು

ಸಿಕ್ಸೆ ಕೊಟ್ರು ಅನುಭೋಗಸ್ತೀನಿ. ಮಲಗಿಕೊಂಡು ನಿದ್ರೆ ಮಾಡು. ಹೊತ್ತಾರೆ ಎದ್ದು ರಾಗಿ ಬೀಸುವಿಯಂತೆ" ಎಂದು ಗೋಗರೆದನು. ಹೊಸಬಿಯು ಮಾತನಾಡಲಿಲ್ಲ.

ಬೋರನು ಕುಳಿತ ಸ್ಥಳದಲ್ಲಿಯೇ ತೂಕಡಿಸುತ್ತಿದ್ದನು. ಆದರೆ ಹೊಸಬಿಯು ಮಾತ್ರ ಸ್ವಲ್ಪವೂ ತೂಕಡಿಸದೆ ಬೆಳಗಿನವರೆಗೆ ರಾಗಿಯನ್ನು ಬೀಸಿದಳು. ಅನಂತರ ಕೊಟ್ಟಿಗೆಯ ಬಾಗಿಲನ್ನು ತೆರೆದಳು. ಬೋರನು ಹೊರಕ್ಕೆ ಬಂದನು. ಅವನು ಹೆಂಡವನ್ನು ಕುಡಿಯುವುದಕ್ಕೆ ಅದೇ ಕೊನೆಯಾಯಿತು. ಹೊಸಬಿಯು ಹೆಂಡದ ಬದಲು ಹಾಲನ್ನು ಕುಡಿಯ ಬೇಕೆಂದು ಹೇಳಿದಳು. ಬೋರನು ಹಾಲಿನ ಬದಲು ಹುಳಿಮಜ್ಜಿಗೆಯನ್ನು ಕುಡಿಯಲು ಅಭ್ಯಾಸಮಾಡಿಕೊಂಡನು.

ಮಾದನಿಗೆ ಹೊಸಬಿಯನ್ನು ಕಂಡರೆ ಸ್ವಲ್ಪ ಕೋಪವಿದ್ದಿತೆಂದು ಹಿಂದೆ ಹೇಳಿತ್ತಷ್ಟೆ. ಆ ಕೋಪವನ್ನು ಅವಳ ಮೇಲೆ ತೀರಿಸಿಕೊಳ್ಳಲು ಅವನಿಗೆ ಅವಕಾಶ ದೊರೆತಿರಲಿಲ್ಲ. ಒಂದು ದಿವಸ ಹೊಸಬಿಯ ಹಸುವು ಹುಲ್ಲುಗಾವಲಿನಲ್ಲಿ ಮೇಯುತ್ತಿರುವಾಗ ಮಾವನು ತನ್ನ ಹೋರಿಯನ್ನು ಆ ಕುಂಟ ಹಸುವಿನ ಕಡೆಗೆ ಓಡಿಸಿದನು. ಹೋರಿಯು ತಲೆಯನ್ನು ಬಗ್ಗಿಸಿಕೊಂಡು ಕೊಡುಗಳನ್ನು ಹಸುವಿನ ಕಡೆಗೆ ಚಾಚುತ್ತಾ ಅದನ್ನು ತಿವಿಯಲು ನುಗ್ಗಿತು. ಸಾಧುವಾದ ಹಸುವು ಆ ಹೋರಿಯನ್ನು ಕಂಡು ಭಯದಿಂದ ಓಡಲು ಪ್ರಾರಂಭಿಸಿತು. ಆದರೆ ಕುಂಟ ಹಸುವು ಎಷ್ಟು ದೂರ ತಾನೆ ಓಡೀತು. ಒಂದು ಗಳಿಗೆಯೊಳಗಾಗಿ ಹಸುವು ಸೋತು ಬಳಲಿ ಮೇವನ್ನು ತೊರೆದು ಕಾವಲನ್ನು ಬಿಟ್ಟು ಮನೆಯ ಕಡೆಗೆ ಓಡಿತು. ಹೊಸಬಿಯು ಇದನ್ನು ನೋಡಿದಳು. ಹಸುವಿನ ಅವಸ್ಥೆಯನ್ನು ಕಂಡು ಅವಳಿಗೆ ಬಹಳ ಸಂಕಟವುಂಟಾಯಿತು. ತನ್ನ ಮೇಲೆ ಈ ಚೇಷ್ಟೆಯನ್ನು ಮಾಡಿದುದಕ್ಕಾಗಿ ಮಾದನ ಮೇಲೆ ಬಹಳ ಕೋಪವುಂಟಾಯಿತು.

ಮರುದಿವಸದಿಂದ ಹೊಸಬಿಯ ಬಡಪಾಯಿ ಹಸುವು ಕಾವಲಿಗೆ ಮೇಯುವುದಕ್ಕೆ ಬರಲಾರದೆಂದು ಮಾದನು ಊಹಿಸಿದನು. ಆದರೆ ಅವನ ಊಹೆಯು ತಪ್ಪಾಗಿದ್ದಿತು. ಮರುದಿವಸ ಹೊಸಬಿಯು ಹಸುವನ್ನೂ ನಾಯಿಯನ್ನೂ ಹೊಡೆದುಕೊಂಡು ಎಂದಿನಂತೆ ಕಾವಲಿಗೆ ಬಂದಳು. ಮಾದನು "ಎಲೆ ಹುಡ್ಗಿ, ನೆನ್ನೆ ನಿನ್ನ ಹಸೀಗೆ ಆದ ಹಬ್ಬ ಮರ್ತ್ಯ ಈವತ್ತು ಮತ್ತೆ ಬರೋಕೆ? ಇವತ್ತೂ ಈಗ್ಲೆ ಹೋರಿ ಬಿಟ್ಟು ಹಸ ಓಡಸ್ತೀನಿ. ಒಳ್ಳೆ ಮಾತ್ನಲ್ಲಿ ಹೊಡ್ಕೊಂಡು ಮನೆಗೆ ಹೋಗು" ಎಂದನು. ಹೊಸಬಿಯು ಕೋಪದಿಂದ "ಈ ಊರಿಗೆ ನೀನು ಪಾಳೆಗಾರನಲ್ಲ; ಕಾವಲು ಬಿಟ್ಟು ಹೋಗು ಅಂತ ಹೇಳೋಕೆ ನೀ ಯಾವ ಸೀಮೆ ದಾಸಯ್ಯ. ಬೇಕಾದ್ರೆ ನಿನ್ನ ಹೋರೀನ ನನ್ನ ಹಸೀನ್ಮೇಲೆ ಬಿಡು. ನಾನು ಹೆದರೋದಿಲ್ಲ" ಎಂದಳು. ಹೊಸಬಿಯ ಜೋರಿನ ಮಾತನ್ನು ಕೇಳಿ

ಮಾದನಿಗೆ ಸ್ವಲ್ಪ ಭಯವಾಯಿತು. “ಇವಳೇನೋ ಉಪಾಯ ಕಂಡವ್ಳೆ. ಈ ಹುಡ್ಗಿ ಸಾಮಾನ್ಯ ಅಲ್ಲ. ಇವಳ ಕೈಗೆ ನಾವು ಸಿಕ್ಕೊಬಾರದು” ಎಂದು ಅವನು ಸುಮ್ಮನಾದನು. ಹೊಸಬಿಯು “ಯಾಕೆ ಮಾದ, ನಿನ್ನ ಹೋರಿಯನ್ನ ನನ್ನ ಹಸುವಿನ ಮೇಲೆ ಬಿಡೋದಿಲ್ವೆ?” ಎಂದಳು. ಮಾದನು “ನೀನು ಬಡ ಹುಡಿಗಿ. ಆ ಬಡಕಲು ಹಸುವನ್ನ ಯಾಕೆ ಹಿಂಸಿಸಬೇಕು?” ಎಂದನು. ಹೊಸಬಿಯು “ನಾನೂ ನನ್ನ ಹಸುವೂ ಬಡಕಲಾದರೂ ನನ್ನ ನಾಯಿ ಬಡಕಲಲ್ಲ. ಈಗ ನಿನ್ನ ನಾಯಿಯ ಮೇಲೆ ಬಿಡುತ್ತೇನೆ, ನೋಡು” ಎಂದಳು.

ಮಾದನು ಹೆದರಿದನು. ಹೊಸಬಿಯ ನಾಯಿಯೊ ಹುಲಿಯ ಹಾಗೆ ಇತ್ತು. ಅದು ಬೋರನ ಜತೆಯಲ್ಲಿ ಕಾಡಿನಲ್ಲೆಲ್ಲಾ ಅಲೆದು ಪುಷ್ಟವಾಗಿದ್ದಿತು. ಯಾವುದಕ್ಕೂ ಹೆದರುತ್ತಿರಲಿಲ್ಲ. ಆ ನಾಯಿಯನ್ನು ಕಂಡರೆ ಹಳ್ಳಿಯ ಜನಗಳೂ ದನಗಳೂ ನಾಯಿಗಳೂ ಹೆದರುತ್ತಿದ್ದುವು. ಮಾದನ ನಾಯಿಯ ಬೇಕಾದಂತೆ ತಿಂದು ಪುಷ್ಟವಾಗಿಯೇನೊ ಇದ್ದಿತು. ಆದರೆ ಮೊಗಲ ಸೈನ್ಯದವರಂತೆ ಅದು ಸುಖದಲ್ಲಿ ಬೆಳೆದ ಸುಂದರವಾದ ನಾಯಿಯಾಗಿದ್ದಿತೇ ಹೊರತು ಹೊಡೆದಾಡಲು ತಕ್ಕ ನಾಯಿಯಾಗಿರಲಿಲ್ಲ. ಹೊಸಬಿಯು ಅದನ್ನು ತಿಳಿದೇ ಮಾದನ ನಾಯಿಯ ಕಡೆಗೆ ತನ್ನ ನಾಯಿಯನ್ನು ಛೂ ಬಿಟ್ಟಳು.

ಹೊಸಬಿಯ ನಾಯಿಯು ಮಾದನ ನಾಯಿಯನ್ನು ಅಟ್ಟಿಕೊಂಡು ಹೊರಟಿತು. ಮಾದನು ಅದನ್ನು ತಡೆಯಬೇಕೆಂದು ಅದರ ಕಡೆಗೆ ದೊಣ್ಣೆಯನ್ನು ಬೀಸಿದನು. ನಾಯಿಯು ಅವನ ಮೇಲೆಯೇ ಹಾರಿತು. ಮಾದನು ಹೆದರಿ ಹಿಂದಕ್ಕೆ ಹಾರಿದನು. ಹೊಸಬಿಯ ನಾಯಿಯು ಮಾದನ ನಾಯಿಯ ಮೇಲೆ ಹಾರಿತು. ಮಾದನ ನಾಯಿಯು ತನ್ನ ಮೇಲೆ ಬರುತ್ತಿದ್ದ ಆ ಹುಲಿಯನ್ನು ಕಂಡು ಹೆದರಿ ಓಡಲು ಪ್ರಾರಂಭಿಸಿತು. ಕಾಕಾಸುರನನ್ನು ರಾಮ ಬಾಣವು ಅಟ್ಟಿ ಬಂದಂತೆ ಮಾದನ ನಾಯಿಯನ್ನು ಹೊಸಬಿಯ ನಾಯಿಯು ಅಟ್ಟಿಸಿಕೊಂಡು ಹೊರಟಿತು. ನಾಲ್ಕು ಗಳಿಗೆಯೊಳಗಾಗಿ ಮಾದನ ನಾಯಿಯು ಸೋತು ಸುಣ್ಣವಾಯಿತು. ಮಾರನು ತನ್ನ ನಾಯಿಯು ಓಡುವುದನ್ನು ನಿಲ್ಲಿಸಬೇಕೆಂದು ಅದನ್ನು ತನ್ನ ಬಳಿಗೆ ಬಹುರೀತಿಯಿಂದ ಕರೆದನು. ಆದರೆ ನಾಯಿಯು ಓಡುವುದನ್ನು ಬಿಡಲಿಲ್ಲ. ಅದು ಓಡಿ ಓಡಿ ಬಳಲಿ ನೆಲಕ್ಕೆ ಬಿದ್ದು ಸಾಯುವುದೆಂದು ಮಾದನಿಗೆ ಹೆದರಿಕೆ ಉಂಟಾಯಿತು. ತಾನು ಪ್ರೀತಿಯಿಂದ ಸಾಕಿದ್ದ ಬೆಳ್ಳಿಯ ಸರಪಣಿಯ ಕತ್ತಿನ ನಾಯಿಯು ತನ್ನೆದುರಿಗೇ ಸಾಯುವುದನ್ನು ಕಂಡು ಮಾದನಿಗೆ ಬಹಳ ದುಃಖವುಂಟಾಯಿತು. ಅವನು ಕೋಪದಿಂದ ಕೈಯಲ್ಲಿದ್ದ ಉಳುವ ಕೋಲನ್ನು ಹೊಸಬಿಯ

ಮುಂದೆ ಅಲ್ಲಾಡಿಸಿ "ನಾಯಿನ ಹಿಂದಕ್ಕೆ ಕರಿ. ಇಲ್ದಿದ್ರೆ ನಿನ್ತಲ್ಲೆ ಒಡೆದಾಕ್ತೀನಿ" ಎಂದು ಗರ್ಜಿಸಿದನು. ಹೊಸಬಿಯು ಮಾತನಾಡಲಿಲ್ಲ. ಅವಳಿಗೆ ಮಾದನ ಸಂಕಟವನ್ನು ನೋಡಿ ಮೊದಲ ದಿವಸ ತನಗೆ ಉಂಟಾದ ಸಂಕಟವು ಜ್ಞಾಪಕಕ್ಕೆ ಬಂದಿತು. ಮಾದನ ದೊಣ್ಣೆಯನ್ನು ನೋಡಿ ಅವಳು ಭಯಪಡಲಿಲ್ಲ. ಅವಳು ಹೆದರತಕ್ಕ ಹುಡುಗಿಯಾಗಿರಲಿಲ್ಲ.

ತನ್ನ ದೊಣ್ಣೆಗೆ ಹೊಸಬಿಯು ಹೆದರದುದನ್ನು ಕಂಡು ಮಾದನು "ಹೊಸಬಿ, ದಮ್ಮಯ್ಯ ನಿನ್ನ ನಾಯ್ನ ಹಿಂದಕ್ಕೆ ಕರೆ. ಅನ್ಯಾಯವಾಗಿ ನನ್ನ ನಾಯಿ ಕೊಲ್ಲಬೇಡ" ಎಂದನು. ಹೊಸಬಿಯು ಮಾತನಾಡದೆ ಸುಮ್ಮನೆ ನಿಂತಿದ್ದಳು. ಮಾದನಿಗೆ ಪ್ರತಿಯೊಂದು ಕ್ಷಣವೂ ಒಂದು ಯುಗವಾಗಿ ತೋರುತ್ತಿತ್ತು. ಅವನು ಮತ್ತೆ "ಹೊಸಬಿ, ನಿನ್ನ ಪಾದಾ ಹೊತ್ತೇನು. ನಿನಗೆ ಕೈ ಮುಗಿತೀನಿ, ನನ್ನ ನಾಯಿ ಪ್ರಾಣ ಬಿಟ್ಟು ಬಿಡು" ಎಂಬುದಾಗಿ ಗೋಗರೆದನು. ಹೊಸಬಿಯು ತನ್ನ ನಾಯಿಯನ್ನು ಹಿಂದಕ್ಕೆ ಕರೆದಳು. ಮಾದನ ನಾಯಿಯು ಸೋತು ಏದುತ್ತಾ ಒಂದು ಗಂಟೆ ನೆಲದ ಮೇಲೆ ಬಿದ್ದಿದ್ದು ಅನಂತರ ಮನೆಯ ಕಡೆಗೆ ಓಡಿತು.

ಒಂದು ಗಳಿಗೆಯ ನಂತರ ಮಾದನು "ಅಲ್ಕಣೆ ಹೊಸಬಿ, ನಾನು ಹೊಡ್ಯೋಕೆ ದೊಣ್ಣೆ ಎತ್ತಿದ್ರು ನಿನ್ಗೆ ಭಯ್ವೆ ಆಗ್ಲಿಲ್ವಾ?" ಎಂದನು. ಹೊಸಬಿಯು "ಭಯ ಯಾಕೆ? ನೆನ್ನೆ ನನ್ನ ಬಡ ಹಸುವಿನ ಮೇಲೆ ನಿನ್ನ ಹೋರಿ ಬಿಟ್ಟೆಲ್ಲ, ತಪ್ಪು ಯಾರ್ದು? ನನ್ನ ಹೊಡೆಯೊ ಧೈರ್ಯ ನಿನಗೆ ಇಲ್ಲ. ನಂಗೊತ್ತು" ಎಂದಳು. ಮಾದನು ಒಂದು ಗಳಿಗೆ ಯೋಚಿಸಿ "ಹಂಗಲ್ಲ ಹೊಸಬಿ, ನೀನು ನನ್ಮಾತ ಕೇಳ್ಕೊಂಡು ನನ್ನತ್ರ ಚೆನ್ನಾಗಿದ್ರೆ ನಿನಗೆ ಎಷ್ಟೋ ಲಾಭ ಮಾಡ್ಕೊಡ್ತೀನಿ" ಎಂದನು. ಹೊಸಬಿಯು "ನಾನು ನಿನ್ಮಾತ್ನೂ ಕೇಳೋಲ್ಲ. ಯಾರ ಮಾತೂ ಕೇಳೋಲ್ಲ. ನಿನ್ನ ಲಾಭಾನೂ ನಂಗೆ ಬೇಡ. ನಿನ್ನ ಹಂಗೇನು ನಂಗೆ; ಬರೋದೆಲ್ಲ ಬರಲಿ" ಎಂದಳು. ಮಾದನು ಸುಮ್ಮನಾದನು.

ಕೆಲವು ದಿನಗಳು ಕಳೆದುವು. ಮಾದನ ಮುದಿತಾಯಿ ಮನೆಗೆ ಸೊಸೆ ಬರಬೇಕೆಂದೂ ಮಾದನು ಮದುವೆಯಾಗಬೇಕೆಂದೂ ಮನೆಯ ಸಂಸಾರಕ್ಕೆ ಸಹಾಯಕಳಾಗುವ ಹುಡುಗಿ ಬಂದರೆ ತನ್ನ ಕಷ್ಟ ಕಡಿಮೆಯಾಗುವುದೆಂದೂ ಹೇಳುತ್ತಿದ್ದಳು. ಅವಳು ಆ ವಿಷಯವನ್ನು ಹೇಳಿದಾಗಲೆಲ್ಲಾ ಮಾದನು "ಈಗ ಬೇಡಾ, ಒಳ್ಳೆ ಹೆಣ್ಣಿಗೆ ತೆರ ಹೆಚ್ಚಾಗಿ ಕೇಳ್ತಾರೆ" ಎನ್ನುತ್ತಿದ್ದನು. ಆದರೆ ಈಚೆಗೆ ಹೊಸಬಿಯೊಂದಿಗೆ ಮಾದನಿಗೆ "ಗುದ್ದಾಟ"ವುಂಟಾದ ಮೇಲೆ "ನಾನು ಈ ಹುಡ್ಗೀನೆ ಯಾಕೆ ಮದ್ವೆ ಆಗ್ಬಾರ್ದು?" ಎಂಬ ಯೋಚನೆಯುಂಟಾಯಿತು. ಅನಂತರ ಮಾದನು "ಆ ಹುಡ್ಗಿ ಕಂಡರೆ ನಂಗೆ ಯಾಕೆ ಆಗ್ರಹ? ಯಾರ ಹಂಗೂ ಇಲ್ದೆ ಏನು ಜೋರಾಗವ್ಳೆ! ತಮ್ಮದೀರ್ನ

ಹೇಗೆ ಸಾಕ್ತಾಳೆ! ಅವಳ ಧೈರ್ಯ ಏನು! ನನ್ಮೇಲೆ ಕುಸ್ತಿ ಮಾಡ್ತಾಳಲ್ಲಾ? ಹೂ ಅವಳ್ನೆ ಮದ್ವೆ ಆಗ್ತೀನಿ....ಬೋರನಿಗೆ ತೆರದ ಹಣ ಹೆಚ್ಚಾಗಿ ತೆರಬೇಕು. ಆದರಾಯಿತು. ಆ ಹಣ ಆಮೇಲೆ ಹೊಸಬಿಯೆ ದುಡೀತಾಳೆ" ಎಂದುಕೊಂಡನು. ಆದರೆ ಈ ವಿಷಯವನ್ನು ಬೋರನಿಗೆ ಆತುರದಲ್ಲಿ ಹೇಳಿದರೆ ಅವನೆಲ್ಲಿ ತೆರದ ಹಣ ಹೆಚ್ಚಿಸುತ್ತಾನೋ ಎಂಬುದಾಗಿ ಹೆದರಿ ಬೋರನನ್ನು ಕೇಳದೆ ತಡೆದುಕೊಂಡಿದ್ದನು. ಹೊಸಬಿಯೊಂದಿಗೆ ಆ ವಿಷಯವನ್ನು ಹೇಳಲು ಅವನಿಗೆ ಧೈರ್ಯವೇ ಇರಲಿಲ್ಲ.

ಮಾದನು ಒಂದು ದಿವಸ ಗದ್ದೆಗೆ ಹೋಗಿದ್ದವನು ಕೆಲಸ ತೀರಿಸಿಕೊಂಡು ಸ್ವಲ್ಪ ಹೊತ್ತಾಗಿ ಮನೆಗೆ ಬಂದನು. ನಿತ್ಯವೂ ಮೂರು ಮುದ್ದೆ ಹಿಟ್ಟನ್ನು ನುಂಗುವುದು ಮಾದನ ಪದ್ಧತಿಯಾಗಿದ್ದಿತು. ಆ ದಿವಸ ಮಾದನ ಊಟಕ್ಕೆ ಮುಂಚೆ ನಮ್ಮೂರ ದಾಸಯ್ಯ ಹಸಿವೆಂದು ಬಂದು ಗೋಗರೆದುದರಿಂದ ಮಾದನ ತಾಯಿಯು ಅವನಿಗೆ ಒಂದು ಮುದ್ದೆ ಹಿಟ್ಟನ್ನು ಹಾಕಿದ್ದಳು. ಇದರಿಂದ ಮಾದನಿಗೆ ಗಂಗಳದ ಮುಂದೆ ಊಟಕ್ಕೆ ಕೂತಾಗ ಒಂದು ಮುದ್ದೆ ಹಿಟ್ಟು ಕಡಿಮೆಯಾಗಿದ್ದಿತು. ಮಾದನು ಎರಡು ಮುದ್ದೆ ಹಿಟ್ಟನ್ನು ಎಸರಿಗೆ ತಗುಲಿಸಿ ನುಂಗಿದ ಮೇಲೆ ಪದ್ಧತಿಯಂತೆ ಮೂರನೆಯ ಮುದ್ದೆಯನ್ನು ತರುವಂತೆ ತಾಯಿಗೆ ಹೇಳಿದನು. ತಾಯಿಯು "ಒಂದು ಮುದ್ದೆ ದಾಸಯ್ಯನಿಗೆ ಇಕ್ಕಿದೆ" ಎಂದಳು. ಮಾದನು "ನನ್ನ ಹೊಟ್ಟೆ ಹಸಿವು ತೀರನಿಲ್ಲ" ಎಂಬುದಾಗಿ ರೇಗಾಡಿದನು. ತಾಯಿಯು ಒಂದು ಮುದ್ದೆ ಹಿಟ್ಟನ್ನು ತರಲು ಮಗ್ಗುಲು ಮನೆಗೆ ಹೋದಳು. ಆ ವೇಳೆಗೆ ಮಾದನು ತಾನು ಮೊದಲು ನುಂಗಿದ್ದ ಮುದ್ದೆಗಳನ್ನು ಮರೆತು ಮತ್ತೆ ಮೂರು ಹೊಸ ಮುದ್ದೆಗಳನ್ನು ನುಂಗಲು ತಯಾರಾಗಿದ್ದನು. ಒಟ್ಟಿಗೆ ಮೂರು ಮುದ್ದೆಗಳನ್ನು ನುಂಗಿದಲ್ಲದೆ ಅವನ ಹಸಿವು ಕಡಿಮೆಯಾಗುವಂತೆ ತೋರಲಿಲ್ಲ. ಅವನ ತಾಯಿಯು ಮಗ್ಗುಲು ಮನೆಯಿಂದ ಸ್ವಲ್ಪ ಎಸರನ್ನೂ ಹಿಟ್ಟನ್ನೂ ತಂದು ಬಡಿಸಿದಳು. ಮಾದನು ಅದನ್ನೂ ಉಂಡು "ಇನ್ನೂ ಸಾಲ್ದು, ಹೊಟ್ಟೆ ತುಂಬನಿಲ್ಲ. ಹಸಿವಿನಿಂದ ನನ್ನ ಸಾಯಿಸ್ತೀಯೆ" ಎಂಬುದಾಗಿ ಗೊಣಗಾಡಿದನು.

ಮಾದನು ಒಟ್ಟಾಗಿ ಮೂರು ಮುದ್ದೆಗಳನ್ನು ನುಂಗಿದ್ದರೆ ಅವನಿಗೆ ಹೊಟ್ಟೆ ತುಂಬುತ್ತಿದ್ದಿತು. ನಿತ್ಯವೂ ಅವನು ತಿನ್ನುತ್ತಿದ್ದುದು ಮೂರೇ ಮುದ್ದೆಗಳು. ಆದರೆ ಆವತ್ತು ಆ ಮೂರು ಮುದ್ದೆಗಳೂ ಒಟ್ಟಾಗಿ ಅವನ ಗಂಗಳಕ್ಕೆ ಬೀಳದೆ ಒಂದಾದ ಮೇಲೆ ಒಂದು ಬಿದ್ದುದರಿಂದ ಎರಡನೆಯದು ಬರುವುದರೊಳಗಾಗಿ ಮೊದಲನೆಯದು ಜೀರ್ಣವಾಗಿ ಅವನಿಗೆ ಊಟ ಮಾಡಿದಂತೆಯೇ

ತೋರಲಿಲ್ಲ. ಅವನ ತಾಯಿ ಹೊಸಬಿಯ ಮನೆಗೆ ಹೋಗಿ ಒಂದು ಮುದ್ದೆ ಹಿಟ್ಟನ್ನೂ ಸ್ವಲ್ಪ ಎಸರನ್ನೂ ತಂದು ಬಡಿಸಿದಳು. ಮಾದನು ಅದನ್ನು ಉಂಡನು. ಹಿಟ್ಟು ಬಹಳ ಮೃದುವಾಗಿತ್ತು. ಎಸರು ಬಹಳ ರುಚಿಯಾಗಿತ್ತು. ಮಾದನು ಆವರೆಗೆ ಅಷ್ಟು ರುಚಿಯಾದ ಎಸರನ್ನು ಊಟ ಮಾಡಿಯೇ ಇರಲಿಲ್ಲ. ಅವನು ತುಟಿಯನ್ನು ಚಪ್ಪರಿಸುತ್ತಾ "ಇದು ಯಾರ್ಮನೆ ಎಸರು? ಬಾರಿ ವೈನಾಗಯ್ತೆ" ಎಂದನು. ಅವನ ತಾಯಿ "ಹಿಟ್ಟು ಎಸರು ಎರಡೂ ಬೋರನ ಮನೇದು" ಎಂದಳು. ಮಾದನು "ಹೊಸಬಿ ಬೋರನ ಹುಡ್ಗ, ಯಾವ ಕೆಲ್ಸ ಮಾಡಿದ್ರೂ ಸುದ್ದಾಗಿ ಮಾಡ್ತಾಳೆ" ಎಂದುಕೊಂಡು ಊಟ ಮಾಡುವುದಕ್ಕೆ ಪ್ರಾರಂಭಿಸಿದನು. ಹೊಸಬಿಯ ಹಿಟ್ಟು ಎಸರಿನ ಸವಿಯಲ್ಲಿ ಮಾದನಿಗೆ ಹೊಸಬಿಯ ವಿಚಾರ ಬಹಳ ಹಿತವಾಗಿ ಕಂಡಿತು. ಅವನು ಅವಳ ವಿಷಯವನ್ನೇ ಯೋಚಿಸುತ್ತಾ ಆ ಹಿಟ್ಟನ್ನೂ ಎಸರನ್ನೂ ನುಂಗಿದನು. ಒಂದು ಗಳಿಗೆ ಆದನಂತರ ಗಂಗಳವನ್ನು ಬಿಟ್ಟು ಏಳುವುದಕ್ಕೆ ಮುಂಚೆ ತಾಯಿಯೊಂದಿಗೆ "ಏನಮ್ಮಾ ನಿನ್ಗೂ ವಯಸ ಆಯ್ತು. ಗೆಯ್ಯೋಕೆ ಕೈಲಿ ತರಾಣ ಇಲ್ಲ. ಹೊಸಬಿನ ಮದ್ವೆ ಮಾಡ್ಕೊಳ್ಳ? ನಿನ್ಗೂ ಒಳ್ಳೆ ಸೊಸೆ ಸಿಕ್ತಾಳೆ" ಎಂದನು. ಮಾದನ ತಾಯಿಯು "ಮಾದ, ನನ್ನ ಕೈಲಿ ಗೆಯ್ಯೋಕೆ ಆಗೋಕಿಲ್ಲ, ದಿಟ. ಆದರೆ ನೀನು ಹೊಸಬಿನ ಮದ್ವೆ ಆಗೋದು ನನ್ಗಾಗಿ ಅಲ್ಲ. ನಾನು ನಿನ್ನೆ ಮದ್ವೆ ಆಗು ಅಂತ ಎರಡು ವರ್ಸದಿಂದ ಹೇಳ್ತಾ ಇಲ್ವೆ, ಆದರೆ ಈಗ ನಿನಗೆ ಹೊಸಬಿ ಬೇಕಾಗಯ್ತೆ. ಎಳೆ ಗರ್ಕೆಗೆ ದನ ಆಸೆ ಬೀಳೋ ಹಂಗೆ ನೀನು ಆ ಹೆಣ್ಣಿಗೆ ಆಸೆ ಬಿದ್ದಿದ್ದೀಯೆ. ಮದ್ವೆ ಆಗು, ಬೋರನಿಗೆ ತೆರದ ಹಣ ಅಪಾರ ಸುರೀಬೇಕಾಗ್ತಯ್ತೆ" ಎಂದಳು.

ಮಾದನು ಗಂಗಳವನ್ನು ಬಿಟ್ಟು ಮೇಲಕ್ಕೆ ಎದ್ದನು. ಹುಲ್ಲುಗಾವಲಿಗೆ ಹೋಗುವ ದಾರಿಯಲ್ಲಿ ಹೊಸಬಿಯ ಮನೆಗೆ ಹೋದನು. ಅವಳು ಊಟಮಾಡಿ ಎಲೆ ಅಡಿಕೆ ಅಗಿಯುತ್ತಾ ಕುಳಿತಿದ್ದಳು. ಮಾದನು ಹೋಗಿ ಹುಲ್ಲು ಹೊರೆಯ ಮೇಲೆ ಹಚ್ಚಡವನ್ನು ಹಾಸಿ "ಉಸ್ ಅಪ್ಪ" ಎಂದುಕೊಂಡು ಕುಳಿತುಕೊಂಡನು. ಹೊಸಬಿಯು "ಏನ್ಮಾದ, ಬಾರಿ ಸೋತಿದೀಯ" ಎಂದಳು. ಮಾದನು ಕನಿಕರವನ್ನು ಹುಟ್ಟಿಸುವ ದನಿಯಲ್ಲಿ "ಹೊಟ್ಟೆಗೆ ಹಿಟ್ಟಿಲ್ಲ" ಎಂದನು. ಹೊಸಬಿಯು "ಯಾಕೆ ಹಿಟ್ಟಿಲ್ಲ? ಈಗ ತಾನೆ ನಿಮ್ಮವ್ವ ಇಲ್ಲಿಂದ ಒಂದು ಮುದ್ದೆ ಹಿಟ್ಟು ಕೊಂಡೋದಳಲ್ಲಾ, ನಿನ್ನ ಹೊಟ್ಟೇಲಿ ದೆವ್ವಾನೆ ಕೂತಯ್ತೆ" ಎಂದಳು. ಮಾದನು "ಉಸ್, ಒಂದ್ಮುದ್ದೆ ಹಿಟ್ಟು ಯಾವ ಮೂಲೆಕೆ, ರಾವಣನ ಹೊಟ್ಟೆಗೆ ಅರಕಾಸಿನ ಮಜ್ಜಿಗೆ ನೀರು....ಅದಿರ್ಲಿ ಹೊಸಬಿ. ನಿನ್ನೋಟು ಚೆನ್ನಾಗಿ ಎಸರು ಮಾಡೋರ ನಾನು ಕಂಡಿಲ್ಲ, ಎಸರು ಬಾರಿ ವೈನಾಗಿತ್ತು" ಎಂದನು. ಹೊಸಬಿಯು "ಮಾದಾ,

ನೀನು ನನ್ನ ಹಸಾನೂ ಅಟ್ಕೊಂಡು ಕಾವಲಿಗೆ ಹೋಗು. ನಾನು ಎರಡು ರೊಟ್ಟಿ ಸುಟ್ಕೊಂಡು ಬತ್ತೀನಿ. ನಿನ್ನ ಹೊಟ್ಟೆಲಿರೊ ದಯ್ಯ ರೊಟ್ಟಿ ತಿಂದು ತೆಪ್ಪಗಾಯ್ತದೆ" ಎಂದಳು.

ಮಾದನು ತನ್ನ ಮುನ್ನೂರು ರೂಪಾಯಿಗಳ ಹೋರಿಗಳ ಜತೆಯಲ್ಲಿ ಹೊಸಬಿಯ ಕುಂಟ ಹಸುವನ್ನು ಹಿಡಿದುಕೊಂಡು ಹೊರಟನು. ತನ್ನ ಎತ್ತುಗಳು ಮೇಯುತ್ತಿದ್ದ ಕಾವಲಿಗೆ ಕಾಲನ್ನಿಡಲು ಹೊಸಬಿಗೂ ಅವಳ ಹಸುವಿಗೂ ಅರ್ಹತೆ ಇಲ್ಲವೆಂದಿದ್ದ ಶೂರನವನು. ಈಗ ಅವನಿಗೆ ಹೊಸಬಿಯಲ್ಲಿಯೂ ಅವಳಿಗೆ ಸೇರಿದ ಎಲ್ಲಾ ವಸ್ತುಗಳಲ್ಲಿಯೂ ಪ್ರೇಮವುಂಟಾಗಿದ್ದಿತು. ಅವನ ಈ ಮನೋಭಾವವು ಹೊಸಬಿಗೆ ತಿಳಿಯದೆ ಇರಲಿಲ್ಲ. ಮಾದನು ಹೊಸಬಿಯ ಸೆರಗಿನ ಹಿಂದೆ ತಿರುಗಾಡುತ್ತಿದ್ದುದು ಬೋರನಿಗೂ ಕಾಣಿಸಿತು. "ಹುಡ್ಗಿ ಎಲ್ಲಾದ್ರೂ ಸುಖವಾಗಿ ಇರ್ಲಿ. ನನ್ನ ತೆರನಂಗೆ ಬರ್ಲಿ" ಎಂದುಕೊಂಡು ಅವನು ಸುಮ್ಮನಾದನು.

ಹೊಸಬಿಯು ರೊಟ್ಟಿಯನ್ನು ಸುಟ್ಟುಕೊಂಡು ಹುಲ್ಲುಗಾವಲಿಗೆ ಹೋದಳು. ಮಾದನು ಹೊಸಬಿಗಾಗಿ ಒಂದು ಹೊರೆ ಹುಲ್ಲನ್ನೂ ತನಗಾಗಿ ಒಂದು ಹೊರೆ ಹುಲ್ಲನ್ನೂ ಕುಯ್ದು ಇಟ್ಟಿದ್ದನು. ಅವಳು ತಂದ ರೊಟ್ಟಿಯನ್ನು ಮಾದನು ಬಲು ಆತುರದಿಂದ ತಿಂದನು. ಅನಂತರ "ಏನೆ ಹೊಸಬಿ, ನನ್ನ ಮದ್ವೆ ಆಗ್ತಿಯ?" ಎಂದನು. ಹೊಸಬಿಯು ನಿರ್ದಾಕ್ಷಿಣ್ಯದಿಂದ "ನಾ ಹೇಳ್ದಂಗೆ ಕೇಳ್ಕೊಂಡು ಇರ್ತಿಯಾ?" ಎಂದಳು. ಮಾದನು "ನಿನ್ಮಾತು ರವಷ್ಟೂ ಮೀರೋಕಿಲ್ಲ. ಇನ್ಮೇಲೆ ನೀನೆ ನನಗೆ ಒಡತಿ" ಎಂದನು. ಹೊಸಬಿಯು ಒಂದು ಗಳಿಗೆ ಸುಮ್ಮನಿದ್ದು "ಅದಿರಲಿ ಮಾದ, ನನ್ನ ಕುಂಟ ಹಸು ಚೆಂದಾಗಯ್ತಾ?" ಎಂದಳು. ಮಾದನು ಉತ್ಸಾಹದಿಂದ "ನಿನ್ನ ಹಸೂನ? ಗೋಮಾತೆ ಕಾಮದೇನು ಹಂಗಯ್ತೆ" ಎಂದನು. ಹೊಸಬಿಯು ನಗುತ್ತಾ "ನನ್ನ ನಾಯಿನೋ?" ಎಂದಳು. ಮಾದನು "ನಿನ್ನ ನಾಯಿ ಬಾರಿ ಚುರಕಾಗಯ್ತೆ; ವೈನಾಗೂ ಅಯ್ತೆ" ಎಂದನು. ಹೊಸಬಿಯು "ಅದ್ಕೆ ಬೆಳ್ಳಿ ಸರಪಣಿ ಇಲ್ವೆಲ್ಲಾ" ಎಂದಳು. ತನ್ನ ಬೆಳ್ಳಿಯ ಸರಪಣಿಯ ಕೊರಳಿನ ನಾಯಿಯ ಮುಂದೆ ನಿಲ್ಲುವುದಕ್ಕೂ ಹೊಸಬಿಯ ನಾಯಿಗೆ ಅರ್ಹತೆ ಇಲ್ಲವೆನ್ನುತ್ತಿದ್ದ ಮಾದನು, ಹೊಸಬಿಯ ನಾಯಿಯು ದೇವಲೋಕದ ನಾಯಿಯೆಂದು ಹೇಳಲು ಸಹ ಈಗ ಸಿದ್ಧನಾಗಿದ್ದನು.

ಅಂದಿನಿಂದ ಮುಂದೆ ಮಾದನು ಹೇಳಿದಂತೆ ಹೊಸಬಿಯು ಅವನ ಒಡತಿಯೇ ಆದಳು. ಮನೆಯಲ್ಲಿಯೂ ಕಾವಲಿನಲ್ಲಿಯೂ ಮಾದನು ಅವಳ ಭಾಗದ ಕೆಲಸವನ್ನೆಲ್ಲಾ ತಾನೇ ಮಾಡಲು ಪ್ರಾರಂಭಿಸಿದನು. ಮಾದನು ಹೊಸಬಿಯ ಕೈಗೆ ಸಿಕ್ಕಿಕೊಂಡನೆಂದು ಊರಿನವರೆಲ್ಲಾ ಹೇಳತೊಡಗಿದರು. ಒಂದು ತಿಂಗಳಿನೊಳಗಾಗಿ ಮಾದನಿಗೂ ಹೊಸಬಿಗೂ ಮದುವೆ ಆಯಿತು.

ಹಳ್ಳಿಯವರೂ ಬೋರನೂ "ಹುಡ್ಗಿ ಒಳ್ಳೆ ಗಂಡನ್ನ ಹೊಡದ್ಲು" ಎಂದರು. ಮಾದನು ಮಾತ್ರ "ನನಗೆ ಒಳ್ಳೆ ಹೆಣ್ಣು ಸಿಕ್ಕಿದ್ಲು" ಎಂದುಕೊಂಡನು. ಬೋರನು ನಿರ್ದಾಕ್ಷಿಣ್ಯವಾಗಿ ಒಂದು ಕಾಸನ್ನೂ ಬಿಡದೆ ಮಾದನಿಂದ ತೆರದ ಹಣವನ್ನು ವಸೂಲ್ಮಾಡಿದನು.

# ಈಡಿಗರ ಹೆಣ್ಣು

ಮಾಧುವು ಶ್ರೀಮಂತರ ಮಗ. ಅವರ ಮನೆ ಬೆಂಗಳೂರಲ್ಲಿ ನಾಲ್ಕು ತಲೆಮಾರುಗಳಿಂದ ಹಣದ ಹುತ್ತವಾಗಿತ್ತು. ಅವನ ತಂದೆ, ತಾತ, ಮುತ್ತಾತ ಎಲ್ಲರೂ ಸರ್ಕಾರದಲ್ಲಿ ದೊಡ್ಡ ಅಧಿಕಾರಿಗಳಾಗಿದ್ದರು. ಅವನ ತಂದೆಯವರಿಗೆ ಸರ್ಕಾರದಿಂದ ತಿಂಗಳಿಗೆ ಸುಮಾರು ೧೪೦೦ ರುಪಾಯಿಗಳ ವೇತನ ದೊರೆಯುತ್ತಿದ್ದಿತು. ಅವರ ತಂದೆಗೆ ಇನ್ನು ೩-೪ ವರುಷಗಳಲ್ಲಿ ರಿಟೈರ್ ಆಗುವ ವಯಸ್ಸಾಗುತ್ತಿದ್ದಿತು. ದೊಡ್ಡ ಅಧಿಕಾರಿಗಳಿಗೆ ತಾವು ಕೈತುಂಬ ಸಂಬಳವನ್ನು ತೆಗೆದುಕೊಂಡು ಪುಷ್ಟರಾಗಿದ್ದರೆ ಮಾತ್ರ ಸಾಲದು. ಅದೇ ವಿರಾಮವೂ ಸುಖವೂ ತಮ್ಮ ಮೊಮ್ಮಕ್ಕಳ ಕಾಲದವರೆಗಾದರೂ ತಮ್ಮ ಸಂಸಾರಕ್ಕೆ ಮೀಸಲಾಗುವಂತೆ ತಾವು ಪ್ರಯತ್ನ ಪಡಬೇಕೆಂಬುದು, ಆಸೆಯಾಗಿರುತ್ತದೆ. ಮಾಧುವಿನ ತಂದೆ ತಾವು ನಿವೃತ್ತರಾಗುವುದಕ್ಕಿಂತ ಮುಂಚಿತವಾಗಿ ಮಾಧುವನ್ನು ಸರ್ಕಾರದ ನೌಕರಿಯ ಸರಪಣಿಯಲ್ಲಿ ಒಂದು ಕೊಂಡಿಯಾಗಿ ಸೇರಿಸಿಬಿಟ್ಟರೆ ಮುಂದೆ ಸ್ವಭಾವಜನ್ಯವಾದ ತನ್ನ ಶಕ್ತಿಯಿಂದ ಅವನು ಅಧಿಕಾರದ ಏಣಿಯ ತುದಿಯನ್ನು ನಿಸ್ಸಂದೇಹವಾಗಿ ಏರುವನೆಂದು ನಂಬಿದ್ದರು.

ಮಾಧುವು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್.ಸಿ. ಆನರ್ಸ್ ಪರೀಕ್ಷೆಯಲ್ಲಿ ಸಂಸ್ಥಾನಕ್ಕೆ ಮೊದಲನೆಯವನಾಗಿ ಉತ್ತೀರ್ಣನಾಗಿದ್ದನು. ಅದರ ಹಿಂದಲ ಇಂಟರ್‌ಮಿಡಿಯೇಟ್, ಎಸ್. ಎಸ್. ಎಲ್. ಸಿ. ಮುಂತಾದ ಪರೀಕ್ಷೆಗಳಲ್ಲಿ ಅವನು ಉತ್ತಮ ತರಗತಿಯಲ್ಲೇ ತೇರ್ಗಡೆಯಾಗಿದ್ದನು. ಮಾಧುವಿಗೂ ಬಾಲ್ಯದಿಂದಲೇ ತನ್ನ ಮಂಗಳವಾದ ಭವಿಷ್ಯದಲ್ಲಿ ಒಳ್ಳೆ ನಂಬಿಕೆಯುಂಟಾಗಿದ್ದಿತು. ತನ್ನ ಮನೆತನದಲ್ಲಿ ಅನುಸರಿಸಿಕೊಂಡು ಬಂದಿದ್ದ ಮಹತ್ತ್ವದ ಅಧಿಕಾರಕ್ಕೆ ಏರುವ ನೆಚ್ಚು ಅವನಿಗೆ ಚೆನ್ನಾಗಿದ್ದಿತು. ತಾನು ಅಸಾಮಾನ್ಯನಾಗಿದ್ದುದರಿಂದ, ಸಾಮಾನ್ಯವಾದುದರಲ್ಲೆಲ್ಲಾ ತನಗಿದ್ದ ಒಂದು ಬಗೆಯ ತಿರಸ್ಕಾರವೂ ತನ್ನ ಯೋಗ್ಯತೆಗೇ ಗುರುತೆಂದು ಅವನು ಭಾವಿಸಿದ್ದನು. ಸಂಸ್ಕೃತಿಯಿಂದಲೂ ಬೆಳವಣಿಗೆಯಿಂದಲೂ ಅವನು ಪೂರ್ಣವಾಗಿ ಪರದೇಶದವರಂತೆಯೇ ಆಗಿದ್ದನು. ಅವನ ಮನೆಯವರೆಲ್ಲಾ ಸ್ವಲ್ಪ ಹೆಚ್ಚು ಕಡಿಮೆ ಕ್ರಿಶ್ಚಿಯನ್ನುಗಳಂತೆಯೇ ಇರುತ್ತಿದ್ದರು. ನಮ್ಮದು ಎಂದು ಯಾವುದರಲ್ಲೂ ಅವರಿಗೆ ಅಭಿಮಾನವಿರಲಿಲ್ಲ. ಕ್ರಾಪು ಬಾಚಿಕೊಂಡು ವರ್ಡ್ಸ್‌ವರ್ತ್, ಮ್ಯಾಥ್ಯು ಆರ್ನಾಲ್ಡ್, ಗ್ರೇಟಾಗಾರ್ಬೊ ಎಂದುಕೊಂಡು, ಪರಸಂಸ್ಕೃತಿ ಸಿಕ್ಕದೆ ನಮ್ಮ ಸಂಸ್ಕೃತಿ ಬಿಟ್ಟವರ

ಗತಿಯಾಗಿತ್ತು ಅವರದು. ಮಾಧುವಿಗಂತೂ ಇಂಗ್ಲಿಷ್ ನಾಗರೀಕತೆ ಕಲಿಯದ ಜನರನ್ನು ಕಂಡರೆ ಮೈ ಕಿಡಿ ಕಿಡಿಯಾಗುತ್ತಿದ್ದಿತು. ಸರಿಯಾದ "ಕಲ್ಚರ್" ಇಲ್ಲದ ತನ್ನ ಬಂಧು ಬಳಗದವರನ್ನು ಕೂಡ ಅವನು ಕಣ್ಣೆತ್ತಿ ನೋಡುತ್ತಿರಲಿಲ್ಲ. ಹಳ್ಳಿ, ಹಳ್ಳಿಯ ಜನ ಅಂದರೆ ಅವನ ಅಸಹ್ಯವು ತಿರಸ್ಕಾರದ ಮೇರೆಯನ್ನು ಮೀರಿತ್ತು. ಇಂಗ್ಲಿಷ್ ನಾಗರೀಕತೆಯನ್ನು ಕಲಿತು ಪಟ್ಟಣದಲ್ಲಿ ವಾಸಿಸುವವರದೇ ಒಂದು ಜಾತಿ, ಅಂದರೆ ಮೇಲು ಜಾತಿ, ಆಳುವ ಜಾತಿ. ಉಳಿದವರು ಅವರ ಸೇವೆಗಾಗಿ ಇರುವ ಜಾತಿ ಎಂಬುದು ಅವನ ದೃಢವಾದ ನಂಬಿಕೆಯಾಗಿದ್ದಿತು.

ಮಾಧುವು ಭಾಸ್ಕರರಾಯರ ಎರಡನೆ ಮಗ, ಅವರ ಮೊದಲನೆಯ ಮಗನೂ ದೊಡ್ಡ ಡಾಕ್ಟರ್ ಆಗಿದ್ದನು. ಆದರೆ ಭಾಸ್ಕರರಾಯರಿಗೆ ಮೊದಲಿನಿಂದಲೂ ಮಾಧುವು ಮಹನೀಯನಾಗುವನೆಂದು ಅಂದರೆ ದೊಡ್ಡ ಅಧಿಕಾರಿಯಾಗುವನೆಂದು ನಂಬಿಕೆ ಚೆನ್ನಾಗಿದ್ದಿತು. ಮದ್ರಾಸಿನಲ್ಲಿ ನ್ಯಾಯಾಧೀಶರಾಗಿದ್ದು ನಿವೃತ್ತರಾಗಿ ಬೆಂಗಳೂರಲ್ಲೇ ನೆಲಸಿದ್ದ ಪ್ರಸಿದ್ಧರ ಮಗಳನ್ನು ಮಾಧುವಿಗೆ ತರಬೇಕೆಂದು ಭಾಸ್ಕರರಾಯರು ಸನ್ನಾಹ ನಡೆಸಿದ್ದರು. ನಿವೃತ್ತ ನ್ಯಾಯಾಧೀಶರಿಗೆ ಗಂಡುಮಕ್ಕಳಿರಲಿಲ್ಲ. ಅವರ ಆಸ್ತಿ ಅಪಾರವಾಗಿತ್ತು. ಬೆಂಗಳೂರಲ್ಲಿದ್ದ ಅವರ ಮನೆಯನ್ನು ನೋಡಿದರೆ ಯಾರಿಗಾದರೂ ಬಾಯಿ ನೀರು ಕರೆಯುತ್ತಿದ್ದಿತು. ನಿವೃತ್ತರಾಗಿದ್ದರೂ ಅವರಿಗೆ ಇತರ ಅನೇಕ ಪರದೇಶಿಯರಿಗೆ ಇಲ್ಲಿ ಇರುವಂತೆ ಮೈಸೂರು ಸರ್ಕಾರದಲ್ಲಿ ಒಳ್ಳೆಯ ಕೈವಾಡವಿರುವುದೆಂದು ಪ್ರತೀತಿಯಿದ್ದಿತು. ತಮ್ಮ ಮಗಳು ಮಣಿಯನ್ನು ಐ. ಸಿ. ಎಸ್. ಮಾಡಿದವನಿಗೇ ಕೊಡುತ್ತೇನೆಂದು ಅವರು ಹೇಳುತ್ತಿದ್ದರು. ಭಾಸ್ಕರರಾಯರು ತಂತ್ರಜ್ಞರಾದುದರಿಂದ ತಮ್ಮ ಮಗನಿಗೆ ನಿವೃತ್ತ ನ್ಯಾಯಾಧೀಶರ ಮಗಳನ್ನು ತಂದುಕೊಂಡರೆ ಸರ್ಕಾರದಲ್ಲಿ ಮಗನ ಪ್ರಶಸ್ತಿ ಏರುವುದೆಂದು ಮನಗಂಡರು. ಮಾಧುವು ಬುದ್ಧಿಯಲ್ಲಿ ಐ ಸಿ ಎಸ್‌ಗಿಂತ ಕಡಿಮೆಯಿಲ್ಲವೆಂದು ಅವನ ಯೋಗ್ಯತೆಯ ಪ್ರದರ್ಶನವು ನಿವೃತ್ತ ನ್ಯಾಯಾಧೀಶರೆದುರಿಗೆ ಆಯಿತು. ಅಂತೂ ಮಣಿಯನ್ನು ಮಾಧುವಿಗೆ ಕೊಡುವುದು ಗೊತ್ತಾಯಿತು.

ಮಣಿಗೆ ೧೬ ವಯಸ್ಸಾಗಿತ್ತು. ತೆಳ್ಳಗೆ ಬೆಳ್ಳಗೆ ಎತ್ತರವಾಗಿದ್ದಳು. ಬಹಳ ವೈಯ್ಯಾರದ ಹುಡುಗಿಯಾಗಿದ್ದಳು. ಇಂಗ್ಲಿಷ್ ತಕ್ಕ ಮಟ್ಟಿಗೆ ಬರುತ್ತಿದ್ದಿತು. ಬಹಳ ಚೆನ್ನಾಗಿ ಅಲಂಕಾರ ಮಾಡಿಕೊಳ್ಳುತ್ತಿದ್ದಳು. ಅವಳನ್ನು ಕಂಡ ಕೂಡಲೆ ಜನರ ಲಕ್ಷ್ಯವು ಮೊದಲು ಅವಳ ಸೀರೆ, ರವಿಕೆ, ಕಾಲಿನ ಜೋಡು, ಕೈಚೀಲ, ಕೈಯಲ್ಲಿರುವ ಕರವಸ್ತ್ರ ಇವುಗಳ ಕಡೆಗೆ ಹೋಗಿ ಅನಂತರ ಮಣಿಯ

ಕಡೆಗೆ ತಿರುಗುತ್ತಿದ್ದಿತು. ಅವಳು ಗಳಿಗೆಗಳಿಗೆಗೂ ತನ್ನ ಸೀರೆಯನ್ನು ಬದಲಾಯಿಸುತ್ತಿದ್ದಳು. ಎಷ್ಟು ಬಗೆಯ "ಫೇಸ್ ಪೌಡರು" ಸುಗಂಧ ದ್ರವ್ಯಗಳು ದೊರಕುತ್ತಿದ್ದುವೋ ಅವುಗಳನ್ನೆಲ್ಲಾ ಮೈಗೆ ಹಚ್ಚಿಕೊಳ್ಳುತ್ತಿದ್ದಳು. ಯಾವ ಸಿನಿಮಾ ನಟಿಯರೂ ಅಲಂಕಾರ ಮಾಡಿಕೊಳ್ಳುವುದರಲ್ಲಿ ಅವಳಿಂದ ಪಾಠಗಳನ್ನು ಕಲಿಯಬೇಕಾಗಿದ್ದಿತು. ನೋಡಿದವರು ಈ ಅಲಂಕಾರ, ಈ 'ಸೆಂಟು', ಈ ಸೀರೆ, ರವಿಕೆ, 'ಸ್ವೆಟರ್' ಇವುಗಳ ಸಂದಿಯಲ್ಲಿ ಮಣಿ ಎಲ್ಲಿದ್ದಾಳೆ ಎಂದು ಹುಡುಕಬೇಕಾಗುತ್ತಿದ್ದಿತು. ಅವಳಿಗೆ ಚರ್ಮಮಾಂಸದ ಶರೀರಕ್ಕಿಂತ ಉಡುಪಿನ ಶರೀರವೇ ಹೆಚ್ಚಾಗಿದ್ದಂತೆ ತೋರುತ್ತಿದ್ದಿತು. ಅವಳು ಎದುರಿಗೆ ಇರುವಾಗ ಅವಳ ಉಡುಪಿನಿಂದ ಕಣ್ಣು ಪೂರೈಸಿ ಹೋಗುತ್ತಿದ್ದ ಜನರು ಅವಳು ಹೋದಮೇಲೆ, ಹೇಗಿದ್ದಾಳೆ ಮಣಿ ಎಂದರೆ ಉತ್ತರ ಕೊಡಲು ಯೋಚಿಸಬೇಕಾಗುತ್ತಿತ್ತು. ಸುಗಂಧಗಳ ಕಂಪನ್ನು ಹರಹಿಕೊಂಡು ಅವಳು ಗಾಳಿಯಂತೆ ಬಂದು ಹೋಗುತ್ತಿದ್ದಳು. ಮಾಧುವಿಗೂ ಕೂಡ ಒಂದೊಂದು ಸಲ ಇವಳಿಗೆ ದೇಹವೇ ಇಲ್ಲವೆಂಬ ಯೋಚನೆ ಬರುತ್ತಿದ್ದಿತು.

ಅದೇ ವರುಷ ಸರ್ಕಾರದವರು ಏರ್ಪಡಿಸಿದ್ದ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಗೆ ಮಾಧುವು ಕುಳಿತನು. ಅವನು ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಅವನಿಗೆ ಸರ್ಕಾರದಲ್ಲಿ ಹುದ್ದೆ ದೊರೆಯುವುದರಲ್ಲಿ ಯಾರಿಗೂ ಅನುಮಾನವಿರಲಿಲ್ಲ. ಆ ವಿಷಯದಲ್ಲಿ ಅವರ ತಂದೆಯವರೂ, ಮಾವನಾಗ ಬೇಕಾಗಿದ್ದ ನಿವೃತ್ತ ಜಡ್ಜರೂ ಬೇಕಾದ ಸಾಹಸಗಳನ್ನು ಮಾಡಲು ಸಿದ್ಧರಾಗಿದ್ದರು. ಪರೀಕ್ಷೆ ಮುಗಿದ ಮೇಲೆ ಮಾಧುವಿನ ಪ್ರಾಣಸ್ನೇಹಿತನಾಗಿದ್ದ ಶ್ಯಾಮ ಅವನನ್ನು ತನ್ನ ತವರೂರಾದ ವಡ್ಯಾಣದ ಹಳ್ಳಿಗೆ ಬರುವಂತೆ ಬಲಾತ್ಕರಿಸಿದನು. ಶ್ಯಾಮನಿಗೂ ಮಾಧುವಿನ ವಯಸ್ಸು. ಅವನೂ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಗೆ ಕಟ್ಟಿದ್ದನು. ಅವನಿಗೆ ಯಾವಾಗಲೂ ಮಾಧುವನ್ನು ಕಂಡರೆ ಬಹು ಗೌರವ. ಪರೀಕ್ಷೆಯಲ್ಲಿ ತನಗೆ ಒಂದು ವೇಳೆ ರ್‍ಯಾಂಕು ಬರದಿದ್ದರೂ ಮಾಧುವಿಗೆ ಬರುವುದು ಖಂಡಿತವೆಂದು ಕೊಂಡಿದ್ದನು. ಮಾಧುವಿನಲ್ಲಿ ಅವನ ನಂಬಿಕೆ ಆ ರೀತಿಯಾಗಿತ್ತು. ಶ್ಯಾಮನ ದೃಷ್ಟಿಯಲ್ಲಿ ಮಾಧುವು ಪೂರ್ಣನಾಗಿದ್ದನು. ಮಾಧುವು ತನ್ನ ಗೆಳೆಯನೆಂಬುದೇ ಶ್ಯಾಮನಿಗೆ ಭಾರಿ ಹೆಮ್ಮೆಯಾಗಿತ್ತು. ಆದರೆ ವಡ್ಯಾಣದ ಹಳ್ಳಿ ಮಲೆನಾಡಿನ ಒಳಗಡೆ ಇದ್ದಿತು. ಅದಕ್ಕೆ ಯಾವ ಕಡೆಯಿಂದಲೂ ೧೦ ಮೈಲಿಯ ವರೆಗೆ ರಸ್ತೆ ಇರಲಿಲ್ಲ. ಗಾಡಿಗಳು ಹೋಗುವುದು ಕೂಡ ಕಷ್ಟವಾಗಿದ್ದಿತು. ಜತೆಗೆ ಮಳೆಗಾಲದಲ್ಲಿ ಹೊಳೆ ಕಟ್ಟಿಕೊಂಡು ನಾಗರೀಕತೆಯಿರುವ ಕಡೆಗೆ ಬರಬೇಕಾದರೆ ಅಸಾಧ್ಯವಾಗುತ್ತಿದ್ದಿತು. ವಡ್ಯಾಣದ ಹಳ್ಳಿಯಲ್ಲಿ ಒಬ್ಬ ಮನುಷ್ಯ ಹೋಗಿ ಒಂದು ಸಲ ಕೂತನೆಂದರೆ ಅವನಿಗೆ ಒಂದು ಬಗೆಯಾದ ವಿರಾಮ ಮತ್ತು ಶಾಂತಿಯ ಮನೋಭಾವವು

ಬರುತ್ತಿದ್ದಿತು. ಆ ಪ್ರದೇಶದಲ್ಲಿ ಜೀವ ತನ್ನ ಅಸ್ವಾಭಾವಿಕವಾದ ಅಶಾಂತಿ ಮತ್ತು ಕಾತರತೆಯನ್ನು ತೊರೆದು ತನಗೆ ಸಹಜವಾದ ರೀತಿಯಲ್ಲಿ ಬಿಡುವನ್ನು ಕೊಳ್ಳುತ್ತಿತ್ತು, ಅಲ್ಲಿಂದ ದೇಹವನ್ನು ಬೇರೆ ಕಡೆಗೆ ಸಾಗಿಸಿಕೊಂಡು ಹೋಗುವುದು ಎಷ್ಟು ಕಷ್ಟವಾಗಿದ್ದಿತೋ ಮನಸ್ಸನ್ನು ಸಾಗಿಸಿಕೊಂಡು ಹೋಗುವುದೂ ಅಷ್ಟೇ ಕಷ್ಟವಾಗುತ್ತಿದ್ದಿತು.

ಮಾಧುವು ಮೊದಲು ಅಲ್ಲಿಗೆ ಹೋಗಲು ಒಪ್ಪಲಿಲ್ಲ. ಶ್ಯಾಮನು ನಾಲ್ಕಾರು ವರುಷಗಳಿಂದಲೂ ಅವನನ್ನು ಪ್ರತಿಸಲವೂ ಕರೆಯುತ್ತಲೇ ಇದ್ದನು. “ಆ ಹಾಳು ಕೊಂಪೆ; ಬಸ್ ಇಲ್ಲ; ರಸ್ತೆ ಇಲ್ಲ; ನ್ಯೂಸ್ ಪೇಪರ್ ಇಲ್ಲ; ಸಿನಿಮಾ ಇಲ್ಲ; ಕಣ್ಣಿಗಾದರೂ ಹಬ್ಬ ಮಾಡಿಕೊಳ್ಳೋಣ ಅಂದರೆ ನೋಡೋದಕ್ಕೆ ಒಳ್ಳೆ ಹುಡುಗಿಯರಿಲ್ಲ. ಇಂತಹ ಕಾಡಿಗೆ ಹೋಗಿ ಕೂರ ಬೇಕಾದವರು ಸನ್ಯಾಸಿಗಳು ಮತ್ತು ಮೈಗಳ್ಳರು.” ಎಂದು ಮಾಧುವು ಶ್ಯಾಮನ ಪ್ರಾರ್ಥನೆಯನ್ನು ನಿರಾಕರಿಸುತ್ತಿದ್ದನು. ಶ್ಯಾಮನು “ಅಲ್ಲೂ ಸುಖವಿದೆ. ಅಲ್ಲೂ ಜನ, ಜೀವ ಇದೆ. ಅಲ್ಲೂ ಹೆಣ್ಣುಗಳೂ ಇವೆ” ಎಂದಾಗ ಮಾಧುವು “ಬಿಡು ಬಿಡು, ಅಲ್ಲಿಯ ಸುಖ ಏಕಾಂತ ಸುಖ. ಅಲ್ಲಿಯ ಜೀವ ನಿರ್ಜೀವ. ಅಲ್ಲಿಯ ಜನ ಕಾಡುಜನ. ಅಲ್ಲಿಯ ಹೆಣ್ಣುಗಳು ಕೊರಚರು ಕೊರಮರು, ಅಗಸರು, ಬೆಸ್ತರು, ಬುರುಡೆ ಬೆಸ್ತರು, ಹಂದಿಜೋಗರು, ಸುಡುಗಾಡುಸಿದ್ದರು, ಈಡಿಗರು. ಶಾಂತಾ ಆಪ್ಟೆ, ಮಾಧುರಿ, ನಮ್ಮ ಮಣಿ ಎಲ್ಲರನ್ನೂ ಅವರ ಮುಂದೆ ನಿವಾಳಿಸಬೇಕು ಅಲ್ಲವೇ? ಅಯ್ಯೋ ಪ್ರಾಣಿ ನಿನ್ನ ಮಲೆನಾಡು ವಡ್ಯಾಣದ ಸುಖ ನಿನಗೇ ಇರಲಿ. ಆ ಇಂದ್ರ ಲೋಕದ ನಂದನವನ ನನಗೆ ಬೇಡ. ಈ ಬೆಂಗಳೂರು ನರಕವೇ ನನಗೆ ಸಾಕು” ಎನ್ನುತ್ತಿದ್ದನು. ಪರೀಕ್ಷೆಗೆ ಕುಳಿತು ಮುಗಿದ ನಂತರ ಶ್ಯಾಮನು ಮಾಧುವಿನೊಡನೆ “ಈಗ ನಿನಗೂ ಓದಿ ಓದಿ ತಲೆಕೆಟ್ಟು ಸಾಕಾಗಿದೆ. ದೇಹಕ್ಕೂ ಮನಸ್ಸಿಗೂ ವಿಶ್ರಾಂತಿ ಬೇಕೇಬೇಕು. ನಮ್ಮೂರಿಗೆ ನಡೆ. ಕಾಡಿನಲ್ಲಿ ಅಲೆಯೋಣ, ನದಿಯಲ್ಲಿ ಈಜೋಣ, ಬೆಟ್ಟದಮೇಲೆ ಏರೋಣ. ಆ ಗಾಳಿ ಕುಡಿದರೆ ನಿನ್ನ ದೇಹಕ್ಕೆ ಟಾನಿಕ್ ಆಗುತ್ತದೆ” ಎಂದು ಬಲಾತ್ಕರಿಸಿದನು. ಮಾಧುವು “ಆ ಕಾಡಿನಲ್ಲಿ ಕೂತರೆ ನನಗೆ ಜ್ವರ ಬಂದಂತೆ ಆಗುತ್ತೆ. ಯಾವ ವಿಶ್ರಾಂತಿಗೂ ಬೆಂಗಳೂರಿಗಿಂತ ಏನು ಬೇಕು. ವಿಶ್ರಾಂತಿಗಲ್ಲ ನಿನ್ನ ಬಲಾತ್ಕಾರಕ್ಕಾಗಿ ಬರುತ್ತೇನೆ” ಎಂದು ಹೊರಟನು. ಬಸ್ಸಿನ ನಿಲ್ದಾಣಕ್ಕೆ ವಡ್ಯಾಣದ ಹಳ್ಳಿಯಿಂದ ಶ್ಯಾಮನ ಮನೆಯ ಗಾಡಿ ಬಂದಿತ್ತು. ಮಾಧುವೂ ಶ್ಯಾಮನ ಅದರಲ್ಲಿ ತಮ್ಮ ಹಾಸಿಗೆ “ಸೂಟುಕೇಸುಗಳನ್ನು” ಹಾಕಿ ಗಾಡಿಯು ದಾರಿಯಲ್ಲಿ ಬಿದ್ದು ತಮ್ಮ ಕೈಕಾಲು ಮುರಿದರೂ ಮುರಿಯಬಹುದೆಂಬ ಭಯದಿಂದ ತಾವು ಒಳದಾರಿಯಲ್ಲಿ ನಡೆದುಕೊಂಡೇ ಹೊರಟರು.

ಬಸ್ ನಿಲ್ದಾಣದಿಂದ ವಡ್ಯಾಣದ ಹಳ್ಳಿ ೧೦ ಮೈಲಿ ದೂರದಲ್ಲಿದೆ. ದಾರಿಯಲ್ಲಿ ಒಂದು ನದಿ ಸಿಕ್ಕುತ್ತದೆ. ಅದನ್ನು ದಾಟಿದ ಮೇಲೆ ರಾಜ್ಯವು ಪೂರವಾಗಿ ಮಲೆನಾಡಾಯಿತು. ಕಾಡು ಒಂದು ವಿಧವಾಗಿ ನಿಶ್ಯಬ್ದವಾಗಿ ಜೈ ಎನ್ನುತ್ತಿದ್ದಿತು. ತಿರುಗುವುದಕ್ಕೆ ಕೂಡಾ ದಾರಿಯಿಲ್ಲದುದರಿಂದ ಪೊದೆಗಳನ್ನು ಕಡಿದು ಕಾಲುದಾರಿಗಳನ್ನು ಮಾಡಿದ್ದರು. ಆ ಕಾಲುದಾರಿಗಳಲ್ಲಿ ಬಗ್ಗಿಕೊಂಡೇ ತಿರುಗಬೇಕಾಗಿದ್ದಿತು. ಆ ದಾರಿಯನ್ನು ನೋಡಿ ಮಾಧುವಿಗೆ ನಿಜವಾಗಿಯೂ ಭಯವುಂಟಾಯಿತು. ಅವನು ಅಂತಹ ಕಾಡನ್ನು ಅದುವರೆಗೆ ನೋಡಿರಲಿಲ್ಲ. ಶ್ಯಾಮನು ಅಲ್ಲಿ ಆನೆಗಳು ಆಗತಾನೆ ಬಂದು ಲದ್ದಿ ಹಾಕಿ ಹೋಗಿದ್ದುದನ್ನು ತೋರಿಸಿದಾಗಲಂತೂ ಮಾಧುವು "ಈ ಕಾಡಿಗೂ ಬೆಂಗಳೂರಿಗೂ ಏನೇನೂ ಸಂಬಂಧವಿಲ್ಲ. ನಾನು ಇಲ್ಲಿ ಬರದೆ ಇದ್ದಿದ್ದರೆ ಇಂಥಾ ಕಾಡು ಇರುವುದೆಂದು ನಂಬುತ್ತಲೇ ಇರಲಿಲ್ಲ" ಎಂದನು.

ವಡ್ಯಾಣದ ಹಳ್ಳಿಯ ಹತ್ತಿರ ಹತ್ತಿರಕ್ಕೆ ಹೋಗುವವರೆಗೆ ಮಾಧುವಿಗೆ ಆ ಊರು ಎಲ್ಲಿದೆ ಎಂಬುದರ ಊಹನೆ ಕೂಡ ಉಂಟಾಗಲಿಲ್ಲ. ಮಹಾ ಸಮುದ್ರದ ಮೇಲೆ ಮುಂದೇನು ಬರುವುದೆಂಬುದು ಗೊತ್ತಿಲ್ಲದಿದ್ದರೂ ಹೇಗೆ ಉತ್ಸಾಹದಿಂದ ಸಾಹಸಿಯು ಮುಂದುವರಿಯಿತ್ತಾನೋ ಹಾಗೆ ಮಾಧುವು ತನಗೆ ಅಪರೂಪವಾಗಿದ್ದ ಆ ಕಾಡಿನಲ್ಲಿ ಮಲೆನಾಡ ತಂಗಾಳಿಯನ್ನು ಕುಡಿದು ತೇಗುತ್ತಾ ಮುಂದುವರೆಯುತ್ತಿದ್ದನು. ಒಂದು ಕಾಲು ದಾರಿಯನ್ನು ಅವರು ದಾಟಿ ಮುಂದೆ ಬಂದ ಕೂಡಲೆ ೮-೧೦ ಅಡಿಕೆ ಮರಗಳೂ ಅವುಗಳಿಂದ ೪೦-೫೦ ಮಾರು ದೂರದಲ್ಲಿ ದೊಡ್ಡದಾದ ಒಂದು ತೊಟ್ಟಿ ಮನೆಯೂ ಅವರ ಕಣ್ಣಿಗೆ ಬಿದ್ದವು. ಶ್ಯಾಮನು ನಗುತ್ತಾ "ಲೋ ಮಾಧು, ಇದೇ ಇನ್ನು ಮೇಲೆ ನಿನ್ನ ಸೆರೆಮನೆ. ಇಲ್ಲಿಂದ ನೀನು ತಪ್ಪಿಸಿಕೊಂಡು ಹೋಗಬೇಕಾದರೆ ನಮ್ಮ ಅಪ್ಪಣೆ ಇಲ್ಲದೆ ಸಾಧ್ಯವಿಲ್ಲ. ಇಲ್ಲೇ ಹುಟ್ಟಿ ಬೆಳೆದ ನನಗೇ ಈ ದಾರಿ ತಬ್ಬಿಬ್ಬಾಗುವಾಗ, ಒಂದು ಗಳಿಗೆ ಎಲೆಕ್ಟ್ರಿಕ್ ದೀಪ ಆರಿದರೆ ಕೆಟ್ಟೆವೆಂದು ಕೊರಗುವ ಜಾತಿಯ ನಿನಗೆ ಇಲ್ಲಿ ಹಗಲು ಹೊತ್ತು ಸಹ ಕಣ್ಣು ಕಾಣುವುದಿಲ್ಲ" ಎಂದನು.

ಶ್ಯಾಮನ ಮನೆ ದೊಡ್ಡದಾದ ನಾಡ ಹಂಚಿನ ಮನೆಯಾಗಿತ್ತು. ಆ ಮನೆಯಲ್ಲಿ ಮೂರು ತೊಟ್ಟಿಗಳು ಒಂದರ ಮಗ್ಗುಲಲ್ಲಿ ಒಂದು ಇದ್ದುವು. ಹಳೆಯ ಕಾಲದ ಮನೆಯಾದುದರಿಂದಲೂ ಸಮೀಪದಲ್ಲೇ ಕಾಡು ಇದ್ದು ಮರಕ್ಕೆ ದಾರಿದ್ರ್ಯವಿಲ್ಲದಿದ್ದುದರಿಂದಲೂ ಅತ್ಯಂತ ದಪ್ಪ ದಪ್ಪ ತೊಲೆಗಳನ್ನು ಹಾಕಿದ್ದರು. ಬೀದಿಯ ಬಾಗಿಲು ಸುಮಾರು 9 ಅಡಿ ದಪ್ಪವಾಗಿದ್ದಿತು. ಮಾಧುವು "ಈ ಮನೆಯ ಸಾಮಾನಿನಲ್ಲಿ ನಾಲ್ಕು ಮನೆಯನ್ನು ಧಾರಾಳವಾಗಿ ಕಟ್ಟಬಹುದು" ಎಂದುಕೊಂಡನು.

ಮನೆಯ ಮುಂದೆ ಕಲ್ಲುಚಪ್ಪಡಿಗಳನ್ನು ನೆಟ್ಟು ಕಾಂಪೌಂಡ್ ಮಾಡಿದ್ದರು. ಅದರ ಹೊರಗಡೆ ಚಿರತೆಗಳು ಅನೇಕ ರಾತ್ರಿ ಬಂದು ಕುಳಿತಿರುತ್ತಿರುವವೆಂದು ಶ್ಯಾಮನು ಹೇಳಿದನು. ಆ ಕಾಂಪೌಂಡಿನಲ್ಲೇ ಬಹಳ ಅಗಲವಾದ ಸೇದುವ ಭಾವಿ ಇದ್ದಿತು. ಕಾಂಪೌಂಡಿನ ಆಚೆ ಈಚೆ ಎರಡು ಸಾಲು ಮನೆಯ ಭಾಗ ಕೈಗಳಂತೆ ನೀಡಿದ್ದುವು. ಒಂದರಲ್ಲಿ ಸ್ನಾನದ ಮನೆ, ಸೌದೆ ಒಟ್ಟುವುದು, ಭತ್ತ ಕುಟ್ಟುವ ಯಾತ, ಇವು ಇದ್ದುವು. ಮತ್ತೊಂದು ದನದ ಕೊಟ್ಟಿಗೆಯಾಗಿದ್ದಿತು. ತೊಟ್ಟಿ ಮನೆಯ ಹಿಂದೆ ಕೆರೆ ಇದ್ದು ಕೆರೆಯ ನೀರು ಮನೆಯ ಹಿಂದಲ ಮೆಟ್ಟಲ ಕಾಲನ್ನು ತೊಳೆಯುತ್ತಲಿದ್ದಿತು. ಅಲ್ಲಿ ನಿಂತುಕೊಂಡು ನೋಡಿದರೆ ಎದುರಿಗೆ ಕೆರೆಯೂ ಅದರ ತಳದಲ್ಲಿ ವಿಶಾಲವಾದ ಭತ್ತದ ಬಯಲೂ, ಬೈಲಿನ ಆಚೆ ವಡ್ಯಾಣದ ಹಳ್ಳಿಯೂ ಅದರ ಆಚೆ ಮತ್ತೆ ಕಾಡೂ ಎದ್ದು ಕಾಣುತ್ತಿದ್ದುವು. ಶ್ಯಾಮನ ಮನೆಯು ವಡ್ಯಾಣದ ಹಳ್ಳಿಗೆ ಒಂದು ವಿಧವಾದ ತೊಪ್ಪಲಿನಂತಿದ್ದಿತು.

ಶ್ಯಾಮನ ತಂದೆ ವಡ್ಯಾಣದ ಹಳ್ಳಿಯಲ್ಲಿ ದೊಡ್ಡ ಜಮೀನ್‌ದಾರರಾಗಿದ್ದರು. ದೊಡ್ಡ ಎಂದರೆ ಸಾವಿರಾರು ಖಂಡುಗ ಭತ್ತ, ರಾಗಿ ಬೆಳೆಯುತ್ತಿದ್ದರೆಂದು ಊಹಿಸಬಾರದು. ಅಲ್ಲದೆ ಸ್ವತಃ ಜಮೀನಿನ ಮೇಲೆ ದುಡಿದು ಕೆಲಸ ಮಾಡದೆ ಇರುವ ಬ್ರಾಂಹಣರಿಗೆ ಎಷ್ಟು ಜಮೀನಿದ್ದರೂ ಅದರಿಂದ ಕಂದಾಯದ ಭಾರ ಹೆಚ್ಚೇ ಹೊರತು ಲಾಭವೇನೂ ಇಲ್ಲ. ಶ್ಯಾಮನ ಮನೆಯಲ್ಲಿ ೧೦-೧೨ ಜೀತದ ಆಳು ಕೆಲಸ ಮಾಡುತ್ತಿದ್ದರು. ಅವರೆಲ್ಲ ಆದಿಕರ್ನಾಟಕರೇ. ಅವರ ಮುಖ್ಯವಾದ ಕೆಲಸ ಶ್ಯಾಮನ ತಂದೆಯ ಜಮೀನಿನ ಬೇಸಾಯ. ಮನೆಯಲ್ಲಿ ನಾಲ್ಕು ಜತೆ ಎತ್ತುಗಳಿದ್ದವು. ಒಟ್ಟಿನಲ್ಲಿ ಶ್ಯಾಮನ ತಂದೆಗೆ ವರುಷಕ್ಕೆ ಸುಮಾರು ೧೦೦ ಹೇರು ಭತ್ತದ ಬೆಳೆ ಬರುತ್ತಿದ್ದಿತು. ಅಂದರೆ ಸಾಧಾರಣವಾಗಿ ನಮ್ಮ ಕಡೆ ಬೆಲೆಯಲ್ಲಿ ೧೦೦೦ ರೂಪಾಯಿ ಉತ್ಪತ್ತಿ ಎನ್ನಬಹುದು. ಅದರಲ್ಲಿ ಹಾಳು ಕಂದಾಯ, ಕುರಾವು, ಬೆಳೆಯದ ಜಮೀನು, ಮರಳು ಜಮೀನು, ಊರ ಹತ್ತಿರದಲ್ಲಿ ಒಳ್ಳೆ ಸಾಗುವಳಿ ಇರುವ ಜಮೀನಿಗೆ ಹಾಕಿದಷ್ಟೆ, ಊರಿನಿಂದ ಮೈಲಿ ದೂರದಲ್ಲಿ ಸಾಗುವಳಿ ಇಲ್ಲದಿದ್ದ ಜಮೀನಿಗೂ ಕಂದಾಯ ಹಾಕಿದ್ದುದರಿಂದ, ಕಂದಾಯಕ್ಕಾಗಿಯೇ ೩೦೦/-ರೂಪಾಯಿ ಖರ್ಚಾಗುತ್ತಿದ್ದಿತು. ಆದರೂ ಶ್ಯಾಮನ ತಂದೆ ಒಟ್ಟಿನಲ್ಲಿ ಸುಖಿಗಳಾಗಿ ಸ್ವಲ್ಪ ಮಟ್ಟಿನ ಸಾವುಕಾರರೆನ್ನಿಸಿಕೊಂಡೇ ಇದ್ದರು.

ಅದು ಮೇ ತಿಂಗಳಾಗಿತ್ತು. ಆಗಲೇ ಅಡ್ಡಮಳೆಯು ಬಹಳ ಬಿರುಸಿನಿಂದ ಪ್ರಾರಂಭವಾಗಿತ್ತು. ಗಾಳಿಯು ಹೆಚ್ಚಾಗಿಲ್ಲದ ಮಲೆನಾಡಾದುದರಿಂದ ಮಳೆ ನಿಧಾನವಾಗಿ

ಅವಸರವಿಲ್ಲದೆ ಅಂತರಿಕ್ಷದ ಬಾಗಿಲನ್ನು ತೆರೆದಂತೆ ಒಂದೇ ಸಮನಾಗಿ ಶಾಂತವಾಗಿ ಸುರಿಯುತ್ತಿದ್ದಿತು. ಮಾಧುವಿಗೆ ಎಲ್ಲೋ ತಾನು ಸಾವಿರಾರು ಮೈಲಿಯ ಆಚೆ ನಿರ್ಜನವಾದ ಯಾವುದೋ ಸಮುದ್ರ ತೀರದ ದ್ವೀಪವೊಂದರಲ್ಲಿ ಇರುವಂತೆ ಭಾಸವಾಯಿತು. ಶ್ಯಾಮನ ಮನೆಯ ಆಳುಗಳು ಹೊರತು ಅವನ ಕಣ್ಣಿಗೆ ಮತ್ತಾರೂ ಮನುಷ್ಯ ಪ್ರಾಣಿ ಬೀಳುತ್ತಿರಲಿಲ್ಲ. ಆದರೂ ಅವನಿಗೆ ಬೇಸರಿಕೆಯಾಗಲಿಲ್ಲ. ಮಗುವು ಹೊಸ ಸಂಗತಿಯನ್ನು ಕುತೂಹಲದಿಂದ ನೋಡುವಂತೆ ಮಾಧುವು ಆ ಕಾಡಿನಲ್ಲಿ ಪ್ರಕೃತಿಯಲ್ಲಿ ಒಂದಾಗಿ ಸೇರಿಕೊಂಡನು. ಆ ಮಲೆನಾಡಿನ ಗಾನಕ್ಕೆ ತಾನೂ ಒಂದು ಶ್ರುತಿ ಎಂಬ ಭಾವ ಅವನಿಗೆ ಆಗ ಚೆನ್ನಾಗಿ ಮನವರಿಕೆಯಾಯಿತು. ಆ ವಿಸ್ತಾರವಾದ ಕಾಡು, ಅದರಲ್ಲಿಯ ಅಂತರಿಕ್ಷಚುಂಬಿಗಳಾದ ಮರಗಳು, ಎಲ್ಲೆಲ್ಲ ಮಾಲೆಗಳನ್ನು ಪೋಣಿಸಿದಂತೆ ತೋರುತ್ತಿದ್ದ ಬೆಟ್ಟಗಳ ಸಾಲು, ಸಂತರ್ಧಾರೆಯಾಗಿ ಕುಂಭದ್ರೋಣವಾಗಿ ಸುರಿಯುತ್ತಿದ್ದ ಮಳೆ, ಅವನು ಹಿಂದೆ ಕಾಣದಿದ್ದ, ಹೆಸರನ್ನು ಸಹ ಕೇಳದೆ ಇದ್ದ ಹಕ್ಕಿಗಳು, ಹುಳುಗಳು, ಚಿತ್ರ ವಿಚಿತ್ರವಾದ ಲತೆಗಳು, ಕಾಡುಮೃಗಗಳು ಇವುಗಳನ್ನು ಕಂಡು, ಆ ಪ್ರಕೃತಿಯ ಸ್ವಾಭಾವಿಕ ಮನೋಹರವಾದ ಮತ್ತು ರುದ್ರವಾಗಿದ್ದ ಬೆಡಗುಗಳ ಎದುರಿಗೆ, ಮಾಧುವಿಗೆ ತಾನು, ತನ್ನ ಅಧಿಕಾರ, ತನ್ನ ಬೆಂಗಳೂರು, ತನ್ನ ನಾಗರೀಕತೆ ಇವೆಲ್ಲಾ ಮಹತ್ ಆದುದರ ಎದುರಿಗೆ ಕ್ಷುದ್ರವಾದುದರಂತೆ ಕಂಡಿತು. ತಿರುಗುತ್ತಿರಬೇಕು, ಇಲ್ಲವೇ ಓದುತ್ತಿರಬೇಕು, ಅಥವ ಸಿನಿಮಾ ನಾಟಕ ನೋಡಬೇಕು, ಇಲ್ಲದಿದ್ದರೆ ಸ್ನೇಹಿತರೊಂದಿಗೆ ಹರಟುತ್ತಾ ಕಾಫಿ ಟೀ ಕುಡಿಯುತ್ತಿರಬೇಕು, ಇಲ್ಲದಿದ್ದರೆ ಹೊತ್ತು ಹೋಗುವುದಿಲ್ಲವೆಂದುಕೊಂಡಿದ್ದ ಮಾಧುವಿಗೆ ಶ್ಯಾಮನ ಮನೆಯಲ್ಲಿ ಒಂದು ಹೊಸ ಅನುಭವವುಂಟಾಯಿತು. ಆದ್ಯಂತರಹಿತವಾದ ಪ್ರಕೃತಿಯಲ್ಲಿ ತಲ್ಲೀನನಾಗಿ ಸುಮ್ಮನೆ ಕುಳಿತಿರುವುದೂ ಒಂದು ವಿಧವಾದ ಟಾನಿಕ್ ಎಂದು ಅವನಿಗೆ ಭಾಸವಾಯಿತು. ಎಲ್ಲಿಯಾದರೂ ಬೇಸರಿಕೆಯಿಲ್ಲದೆ ಹೀಗೆ ನಿಶ್ಯಬ್ದವಾಗಿ ಒಂದೇ ಸಮನಾಗಿ ಉತ್ಸಾಹದಿಂದ ಕುಳಿತಿರುವುದು ಸಾಧ್ಯವೆಂದು ಮಾಧುವು ಭಾವಿಸಿರಲಿಲ್ಲ. ಎಂತಹ ಆಪ್ತ ಗೆಳೆಯನ ಸ್ನೇಹವಾದರೂ ಸಾನ್ನಿಧ್ಯವಾದರೂ ಒಂದೊಂದು ಸಲ ಬೇಸರಿಕೆಯನ್ನುಂಟುಮಾಡಬಹುದು. ಆದರೆ ಪ್ರಕೃತಿಯ ಸಾನ್ನಿಧ್ಯದಲ್ಲಿ ಮನುಷ್ಯನಿಗೆ ಎಂದಿಗೂ ಬೇಸರಿಕೆಯಾಗುವುದಿಲ್ಲವೆಂಬುದು ಮಾಧುವಿಗೆ ಆಗ ಮಂದಟ್ಟಾಯಿತು. ಈ ಅನುಭವವಿಲ್ಲದಿದ್ದರೆ ಆ ಮಾತನ್ನು ಯಾರು ಹೇಳಿದ್ದರೂ ಅವನು ಒಪ್ಪುತ್ತಿರಲಿಲ್ಲ.

ಆದರೆ ವಡ್ಯಾಣದ ಹಳ್ಳಿಯಲ್ಲಿ ಮಾಧುವಿನ ಉತ್ಸಾಹವು ಪ್ರಕೃತಿಯೊಂದಿಗೆ ನಿಂತಿತೇ ಹೊರತು ಮನುಷ್ಯರವರೆಗೆ ಹೋಗಲಿಲ್ಲ. ರೈತರು, ಕೆಲಸಗಾರರು, ಕೂಲಿಗಳು ಎಂದರೆ ಅವನ ಮೈ ಚಿಟುರು ಚಿಟುರು ಆಗುತ್ತಿತ್ತು. ಶ್ಯಾಮನ ಮನೆಯ ರೈತರು, ಅವರು ಬೆಳೆಸಿಕೊಂಡಿದ್ದ ಗಡ್ಡ, ಮುಂಗಾಲುವರೆಗಿನ ಕೆಸರು, ಅವರ ಕೊಳಕಾಗಿದ್ದ ಬಟ್ಟೆಗಳು, ಅವರ ಮೈಯಿನ ಬೆವರುವಾಸನೆ, ಬಾಯಿನ ಹೊಗೆವಾಸನೆ, ಬಟ್ಟೆಯ ಕಂಟು ಇವುಗಳನ್ನೆಲ್ಲಾ ನೋಡಿ ಮಾಧುವು "ನಿತ್ಯಾ ಒಂದು ಸೀಸೆ ಫೆನಾಯಿಲ್ ಹಾಕಿಕೊಂಡು ಸ್ನಾನಮಾಡಬೇಕು. ಇಲ್ಲದಿದ್ದರೆ ಈ ಸಾಂಕ್ರಾಮಿಕದಿಂದ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ" ಎನ್ನುತ್ತಿದ್ದನು. ಸ್ವತಃ ಶ್ಯಾಮನ ಮನೆಯವರ ನಾಗರೀಕತೆಯೇ ಅವನಿಗೆ ಸರಿಬೀಳಲಿಲ್ಲ. ಶ್ಯಾಮನ ತಂದೆತಾಯಿಗಳೂ ಅವರ ನಡವಳಿಕೆಗಳೂ ಅವನಿಗೆ ಈಗಿನ ಹೊಸಕಾಲಕ್ಕೆ ಸಂಬಂಧವಿಲ್ಲದ ಹಳೆ ಕಂದಾಚಾರಗಳಾಗಿ ಕಂಡವು. "ಈ ಜನವನ್ನು ತಿದ್ದಬೇಕಾದರೆ ಪರಬ್ರಹ್ಮನಿಗೂ ಸಾಧ್ಯವಿಲ್ಲ" ಎಂದು ಅವನು ಹೇಳಿಕೊಂಡು ಸುಮ್ಮನಾದನು.

ಮಾಧುವು ಹಳ್ಳಿ ಸೇರಿದ ೮ ದಿನಗಳ ನಂತರ ಒಂದು ದಿನ ಬೆಳಿಗ್ಗೆ ಸುಮಾರು ೧೧-೩೦– ೧೨ ಗಂಟೆ ಸಮಯದಲ್ಲಿ ಮಳೆ ಬಿಟ್ಟು ಬಿಸಿಲು ಚೆನ್ನಾಗಿ ಬಂದಿತು. ೮ ದಿನಗಳಿಂದ ಬಿಸಿಲನ್ನೇ ಕಾಣದಿದ್ದ ಶ್ಯಾಮ ಮಾಧು ಇವರಿಗೆ ಒಳ್ಳೆಯ ಉತ್ಸಾಹವುಂಟಾಗಿ ಮನೆಯಿಂದ ಹೊರಗಡೆ ಹೊರಟರು. ಕಾಂಪೌಂಡನ್ನು ದಾಟಿದ ಕೂಡಲೆ ಬಲಗಡೆಗೆ ಒಂದು ಓಣಿಯಂತೆ ದಾರಿ ಹೋಗುತ್ತಿದ್ದಿತು. ಆ ದಾರಿಯಲ್ಲಿ ಅರ್ಧ ಮೈಲಿ ಹೋದರೆ ಅದರ ಕೊನೆಯಲ್ಲಿ ಹೇಮಾವತೀ ನದಿಯು ಕಾಣುತ್ತಿದ್ದಿತು. ಶ್ಯಾಮನು "ಮಳೆಯಿಂದ ನದಿ ಪ್ರವಾಹ ಬಂದಿರಬಹುದು. ನಡಿ ನೋಡೋಣ" ಎಂದನು. ಮಾಧುವೂ ಶ್ಯಾಮನೂ ಆ ಕಾಲುದಾರಿಯಲ್ಲಿ ನದಿಯ ಕಡೆಗೆ ಹೊರಟರು. ಮಳೆ ಬಿದ್ದಿದ್ದುದರಿಂದ ಜಿಗಟುಮಣ್ಣು ಜಾರುತ್ತಿದ್ದಿತು. ಬರಿಯ ಕಾಲಿನಲ್ಲಿ ಹೆಚ್ಚಾಗಿ ಅಂತಹ ಕಡೆ ನಡೆದು ಅಭ್ಯಾಸವಿಲ್ಲದಿದ್ದ ಮಾಧು ತತ್ತರಿಸುತ್ತ ಎಡಕ್ಕೂ ಬಲಕ್ಕೂ ಸರ್ಕಸ್ ಮಾಡುತ್ತಿದ್ದನು. ಸ್ವಲ್ಪ ಹೊತ್ತಿನೊಳಗೆ ಅವರು ನದಿಯ ತೀರಕ್ಕೆ ಬಂದರು. ನದಿಯು ಅವರು ನಿರೀಕ್ಷಿಸಿದ್ದಂತೆ ಪೂರ್ಣ ಪ್ರವಾಹದಿಂದ ಏರುತ್ತಿರಲಿಲ್ಲ. ನೀರು ಮಾತ್ರ ಕೆಂಪಾಗಿದ್ದಿತು.

ನೀರಿನಲ್ಲಿ ಸ್ವಲ್ಪ ದೂರ ಹಾದು ಹೋಗಿ ನದಿಯ ಮಧ್ಯದ ಬಂಡೆಯ ಮೇಲೆ ಕುಳಿತುಕೊಂಡು ಮಾಧುವೂ ಶ್ಯಾಮನೂ ಸುತ್ತಾ ಕಾಡನ್ನೂ ಮರಗಳನ್ನೂ ನದಿಯ ಬೆಡಗನ್ನೂ ನೋಡುತ್ತಿದ್ದರು. ಅವರು ಹಾಯಿದುಕೊಂಡು ಬಂದಿದ್ದ ದಡದಲ್ಲಿ ಮೇಲುಗಡೆಗೆ ಸುಮಾರು ಅರ್ಧಫರ್ಲಾಂಗ್ ದೂರದಲ್ಲಿ, ದಡದಿಂದ ನೀರಿನೊಳಕ್ಕೆ ೩೦ ಮಾರು ಬಿಟ್ಟು ಒಂದು ಭಾರಿ

ಅತ್ತಿಮರವು ಬೆಳದಿದ್ದಿತು. ಬೇಸಿಗೆ ಕಾಲದಲ್ಲಿ ಆ ಮರದವರೆಗೆ ನೀರು ಬರುತ್ತಿರಲಿಲ್ಲ. ಈಗ ಸ್ವಲ್ಪಮಟ್ಟಿಗೆ ಪ್ರವಾಹವು ಬರುತ್ತಿದ್ದುದರಿಂದ ಮರದ ತಳಭಾಗವು ನೀರಿನಲ್ಲಿ ಮುಳುಗಿ ಕೊಂಬೆಗಳು ನದಿಯಮೇಲೆ ಬಾಗಿದ್ದವು. ಅತ್ತಿಮರಕ್ಕೂ ನದಿಯ ದಡಕ್ಕೂ ನಡುವೆ ಬಿಟ್ಟಿದ್ದ ಪ್ರದೇಶದ ಸುತ್ತ, ಕೊಂಬೆಗಳು ಬಾಗಿದ್ದುದರಿಂದ ಆ ಜಾಗವು ಮರ ಮತ್ತು ಕೊಂಬೆಗಳಿಂದ ಸುತ್ತುವರಿದ ಒಂದು ಸಣ್ಣ ಕೊಳದಂತೆ ಕಾಣುತಿದ್ದಿತು. ಮಾಧುವೂ ಶ್ಯಾಮನೂ ಬಂಡೆಯ ಮೇಲೆ ಕುಳಿತು ಸುತ್ತಾ ನೋಡುತ್ತಾ ಇರುವಾಗ ಅವರ ದೃಷ್ಟಿಯು ಸ್ವಭಾವಿಕವಾಗಿ ಆ ಮರದ ಕಡೆಗೂ ಹೋಯಿತು. ಶ್ಯಾಮನು “ಆ ಮರದ ಹತ್ತಿರಕ್ಕೆ ಬಂದರೆ ಅರ್ಧ ಪ್ರವಾಹಕ್ಕೆ ನೀರು ಸ್ವಲ್ಪ ಕಮ್ಮಿ ಅದರ ತಳದಲ್ಲಿ ಸ್ವಲ್ಪ ಗುಂಡಿಬಿದ್ದು ಆಳವಾಗಿದೆ. ಈಜಬಹುದು. ಆ ಮರಕ್ಕೆ ೧೦೦ ವರುಷವಾಗಿದೆಯೆಂದು ನಮ್ಮ ತಂದೆಯವರು ಹೇಳುತ್ತಾರೆ. ಇಷ್ಟು ದೊಡ್ಡ ಅತ್ತಿಮರ ನಾನು ಎಲ್ಲ ನೋಡಲಿಲ್ಲ. ಅದರ ಬೊಡ್ಡೆ ನಮ್ಮ ಕೈಯಲ್ಲಿ ೬ ಮಾರು ದಪ್ಪವಾಗಿದೆ. ಈ ಪ್ರಾಂತದ ಹಕ್ಕಿಗಳೆಲ್ಲಾ ಅದರ ಮೇಲೆ ಗೂಡುಕಟ್ಟಿವೆ” ಎಂದು ಹೇಳುತ್ತಿರುವಾಗ ಮರದ ಕೊಂಬೆಯ ಮೇಲಿನಿಂದ ನದಿಯ ನೀರಿಗೆ ಯಾರೋ ಧುಮಿಕಿದುದು ಅವರಿಗೆ ಕಂಡಿತು. ಮಾಧುವಿನ ಕುತೂಹಲ ಹೆಚ್ಚಾಯಿತು. ಬಿದ್ದ ವ್ಯಕ್ತಿ ಹೆಣ್ಣಿನಂತೆ ಕಾಣುತ್ತಿದ್ದಿತು. ಶ್ಯಾಮನು “ಈ ಊರಲ್ಲಿ ಹೀಗೆ ಈಜುವ ಹುಡುಗಿಯರು ಇರಬಹುದೆಂದು ನಾನು ಯೋಚಿಸಿರಲಿಲ್ಲ. ಇವಳು ಯಾರಾಗಿರಬಹುದು?” ಎಂದನು. ಅಷ್ಟು ಹೊತ್ತಿಗೆ ನೀರಿಗೆ ಬಿದ್ದಿದ್ದ ಹೆಣ್ಣು ಸುಮಾರು ಒಂದು ನಿಮಿಷ ಕಾಲ ನೀರಿನಲ್ಲಿ ಮುಳುಗಿದ್ದು ಮೇಲಕ್ಕೆ ಬಂದು ಮತ್ತೆ ಮರದ ಕೊಂಬೆಗೆ ಜೋತುಬಿದ್ದು ಕೊಂಬೆಯ ಮೇಲೆ ಏರಿ ಕೂತಳು. ಅವಳಿಗೆ ತನ್ನನ್ನು ಯಾರಾದರೂ ನೋಡುತ್ತಿರಬಹುದೆಂದು ತಿಳಿಯಲಿಲ್ಲ. ಅವಳು ತನ್ನ ನೆರಿ ಸೀರೆಯನ್ನು ಗಂಡಸರಂತೆ ಕಾಸೆಹಾಕಿ ಉಟ್ಟಿದ್ದಳು. ರವಿಕೆಯನ್ನು ಬಲವಾಗಿ ಬಿಗಿದು ಗಂಟುಹಾಕಿದ್ದಳು. ಶಾಮನು “ಬಾ ಮರದ ಹತ್ತಿರಕ್ಕೆ ಹೋಗಿ ನೋಡೋಣ ಯಾರು ಎಂದು” ಎಂದನು. ಮಾಧುವು “ಬೇಡ, ಪಾಪ ಹುಡುಗಿ ನಾಚಿಕೆಪಟ್ಟುಕೊಳ್ಳಬಹುದು” ಎಂದನು. ಶ್ಯಾಮನು “ಅವಳಿಗೇಕೆ ನಾಚಿಕೆ, ಮೈ ತುಂಬ ಬಟ್ಟೆ ತೊಟ್ಟಿರವುದು ಕಾಣುವುದಿಲ್ಲವೆ? ಬಾ ಹೋಗೋಣ” ಎಂದು ಮಾಧುವನ್ನೂ ಕರೆದುಕೊಂಡು ಮರದ ಹತ್ತಿರಕ್ಕೆ ಹೊರಟನು.

ಮಾಧುವೂ ಶ್ಯಾಮನ ಬಂಡೆಯಿಂದ ಇಳಿದು ನೀರನ್ನು ಹಾಯಿದು, ಜೇಡಿಮಣ್ಣು ಕೆಸರು ಇವುಗಳಿಂದ ಜಾರುತ್ತಿದ್ದ ದಡವನ್ನು ಹತ್ತಿ ಅತ್ತಿ ಮರದ ನೇರಕ್ಕೆ ಬರುವ ವೇಳೆಗೆ ಸುಮಾರು ೧೫ ನಿಮಿಷಗಳಾಗಿದ್ದಿರಬಹುದು. ಈಜುತ್ತಿದ್ದ ಹೆಣ್ಣಿಗೆ ಇವರ ಸುಳಿವು ಅಷ್ಟು ಹೊತ್ತಿಗೆ

ಗೊತ್ತಾದುದರಿಂದಲೋ ಏನೋ ಅವಳು ನೀರಿನಿಂದ ಮೇಲೆ ಹತ್ತಿ ದಡಕ್ಕೆ ಬರುತ್ತಿದ್ದಳು. ಸ್ನಾನ ಮಾಡದೆ ಇದ್ದರೆ ಹೇಗೋ ಹಾಗೆ ಮೈತುಂಬ ಅವಳು ಪೂರ್ಣವಾಗಿ ಬಟ್ಟೆಗಳನ್ನು ಧರಿಸಿದ್ದುದರಿಂದ ಅವಳಿಗೆ ಇವರನ್ನು ನೋಡಿ ಹೆಚ್ಚು ನಾಚಿಕೆಯಾಗಲಿಲ್ಲ. ಸ್ವಲ್ಪ ಆಶ್ಚರ್ಯ ಮಾತ್ರವಾದಂತೆ ಕಂಡಿತು. ಅವಳ ಸೀರೆಯಿಂದ ನೀರು ಧಾರೆ ಧಾರೆಯಾಗಿ ಕೆಳಕ್ಕೆ ಸುರಿಯುತ್ತಿದ್ದಿತು. ಬಿಚ್ಚಿಕೊಂಡಿದ್ದ ಜಡೆಯಿಂದ ನೀರಿನ ಕಣಗಳು ಕೆಳಕ್ಕೆ ಉದುರುತ್ತಿದ್ದುವು. ಕುರುಳಿನ ಮೇಲೂ, ಹುಬ್ಬುಗಳ ಮೇಲೂ ತುಟಿಗಳ ಮೇಲೂ, ನೀರಿನ ಹನಿಗಳು ಮಂಜಿನ ಹನಿಗಳಂತೆಯೂ ಮುತ್ತಿನ ಹರಳುಗಳಂತೆಯ ಹೊಳೆಯುತ್ತಿದ್ದುವು. ತೋಯಿದ ಸೀರೆಯು ಅವಳ ಮೈಯಿನ ಆಕೃತಿಯನ್ನು ಅನುಸರಿಸಿ ಅದಕ್ಕೆ ಅಂಟಿಕೊಂಡಿತ್ತು. ತಲೆಗೆ ಮುಡಿದುಕೊಂಡಿದ್ದ ಚೆಂಡು ಹೂವು ನೆನೆದಿದ್ದರೂ ಕೆಳಕ್ಕೆ ಬೀಳದೆ ಅಲ್ಲಿಗೆ ಅಂಟಿಕೊಂಡಿತ್ತು. ಗಂಡು ಕಾಸೆಹಾಕಿ ಬಿಗಿದಿದ್ದ ಸೀರೆಯನ್ನು ಬಿಚ್ಚಿದ್ದರೂ ನೆರಿಯು ಮೊಣಕಾಲಿನವರೆಗೆ ಮಾತ್ರ ಇದ್ದು ಅದರ ಕೆಳಗೆ ಕಾಲಕಂಬವು ಪುಷ್ಟವಾಗಿ ದುಂಡಾಗಿ ಕಾಣುತ್ತಿದ್ದಿತು. ಅಂಗಾಂಗಳೆಲ್ಲಾ ಪೂರ್ಣವಾಗಿ ಬೆಳೆದು ತುಂಬಿಕೊಂಡು ಹೆಣ್ಣು ಒಳ್ಳೆ ಕಟ್ಟುಮಸ್ತಾದ ಹುಡುಗಿಯಾಗಿದ್ದಳು. ನೋಡಿದ ಕೂಡಲೇ ಅವಳ ದೇಹವು ಶಕ್ತಿಯಿಂದಲೂ ಚೈತನ್ಯದಿಂದಲೂ ಜೀವದಿಂದಲೂ ತುಂಬಿರುವುದು ಕಾಣುತ್ತಿದ್ದಿತು. ಅರೋಗದೃಢಕಾಯಳಾದ ಪುಷ್ಟಳಾದ ಗೆಲುವಾದ ಅಂತಹ ಹುಡುಗಿ ಯಾರನ್ನೂ ಮಾಧುವು ಅಷ್ಟು ಹತ್ತಿರದಲ್ಲಿ ಆ ಸ್ಥಿತಿಯಲ್ಲಿ ನೋಡಿರಲಿಲ್ಲ. ಆ ದೇಹದ ಕಟ್ಟನ್ನು ನೋಡಿ ಅವನು ಪೂರ್ಣವಾಗಿ ಮಂಕಾದನು. ಅವನು ಮನಸ್ಸಿನಲ್ಲಿ "ಇದೀಗ ನಿಜವಾದ ಹುಡುಗಿ. ಭರ್ಜರಿ ಹೆಣ್ಣು!" ಎಂದುಕೊಂಡನು.

ಹತ್ತಿರಕ್ಕೆ ಬಂದಕೂಡಲೆ ಶ್ಯಾಮನು "ಓ ಇವಳು ನಮ್ಮ ಲಕ್ಷ್ಮಿ" ಎಂದುಕೊಂಡು "ಏನೇ ಈಜೋದು ಕಲೀತಿಯಾ?" ಎಂದನು. ಲಕ್ಷ್ಮಿಯು "ಇಲ್ಲ ಬುದ್ಧಿ, ಮೈ ಕಡೀತಿತ್ತು, ತೊಳಕೊಂಡೆ" ಎಂದಳು. ಶ್ಯಾಮನು "ಬಟ್ಟೆ ಎಲ್ಲಾ ಒಗೆದಾಯಿತೇ?" ಎಂದು ಕೇಳಿದನು. ಲಕ್ಷ್ಮಿಯು "ಆಯಿತು ಬುದ್ಧಿ, ನೀವು ನಡೀರಿ. ನಾನು ಎಲ್ಲಾ ಹಿಂಡಿಕೊಂಡು ಬರತೇನೆ" ಎಂದಳು. ಒದ್ದೆ ಬಟ್ಟೆಯಲ್ಲಿದ್ದ ಅವಳ ಎದುರಿಗೆ ಇನ್ನು ಹೆಚ್ಚು ಹೊತ್ತು ನಿಂತಿರಬಾರದೆಂದು ಶ್ಯಾಮನೂ ಮಾಧುವೂ ಮನೆಯ ಕಡೆ ಹೊರಟರು. ನಾಲ್ಕು ಹೆಜ್ಜೆ ಮುಂದಿಟ್ಟ ಕೂಡಲೆ ಮಾಧುವು ಶಾಮನಿಗೆ ಪ್ರಶ್ನೆಗಳ ಮಳೆಕರಸಿ ಈ ಕೆಳಗಿನ ಸಂಗತಿಗಳನ್ನೆಲ್ಲಾ ಹೊರಡಿಸಿದನು.

"ಲಕ್ಷ್ಮೀ ವಡ್ಯಾಣದ ಹಳ್ಳಿಗೆ ಸೇರಿದವಳು. ಈಡಿಗರ ಜಾತಿಯವಳು. ತಂದೆಯಿಲ್ಲ. ತಾಯಿ ಇದ್ದಾಳೆ. ಮನೆಯಲ್ಲಿ ಮತ್ತಾರೂ ಇಲ್ಲ. ಲಕ್ಷ್ಮಿಗೆ ಮದುವೆ ಆಗಿದೆಯೋ ಇಲ್ಲವೋ ಗೊತ್ತಿಲ್ಲ. ಶ್ಯಾಮನ

ಮನೆಯಲ್ಲೇ ಕೆಲಸಕ್ಕೆ ಇದ್ದಾಳೆ. ಗುಡಿಸುವುದು, ಸಾರಿಸುವುದು, ಭತ್ತ-ರಾಗಿ ಕೇರುವುದು ಮಾಡುವುದು, ಹಸು ಎಮ್ಮೆ ಹಾಲು ಕರೆಯುವುದು ಅವಳ ಕೆಲಸ. ಎರಡು ಹೊತ್ತೂ ಶ್ಯಾಮನ ಮನೆಯಲ್ಲೇ ಊಟ ಮಾಡುತ್ತಾಳೆ. ಮಲಗಿಕೊಳ್ಳುವುದಕ್ಕೆ ಕೆಲವು ದಿವಸ ತನ್ನ ಮನೆಗೆ ಹೋಗುತ್ತಾಳೆ. ಇನ್ನು ಕೆಲವು ದಿವಸ ಶ್ಯಾಮನ ಮನೆ ಬಾಗಿಲಿನ ಕೋಣೆಯಲ್ಲಿ ಮಲಗುತ್ತಾಳೆ. ಆ ಕೋಣೆ ಅವಳ ಸ್ವಾಧೀನದಲ್ಲೇ ಇದೆ. ಅವಳು ಅದರಲ್ಲಿ ತನ್ನ ಹಾಸಿಗೆ ದನಗಳ ತಿಂಡಿ, ಹಿಂಡಿ, ತವಡು ಮುಂತಾದ ಸಾಮಾನುಗಳನ್ನು ಇಟ್ಟುಕೊಂಡು ಬೀಗ ಹಾಕಿಕೊಳ್ಳುತ್ತಾಳೆ. ಅವಳ ತಾಯಿಗೆ ಸಂಪಾದನೆ ಏನೂ ಇಲ್ಲ. ಅವಳು ಜೀವನ ಹೇಗೆ ನಡೆಸುತ್ತಾಳೆ ಎಂಬುದು ಊರಿಗೆಲ್ಲಾ ಒಂದು ಆಶ್ಚರ್ಯ. ಈಗ ನಿತ್ಯಾ ಲಕ್ಷ್ಮಿ ಮಾಧುವಿನ ಮತ್ತು ಶ್ಯಾಮನ ಬಟ್ಟೆಗಳನ್ನು ಒಗೆದು ಒಣಗಿಸಿ ಮಡಿಮಾಡುವ ಕೆಲಸವನ್ನೂ ಮಾಡುತ್ತಿದ್ದಾಳೆ. ಬಟ್ಟೆ ಅವಳು ಒಣಗಿಸಿ ತಂದುಕೊಡುವುದು ಶ್ಯಾಮನ ತಂದೆಗೆ ತಿಳಿಯದು. ಅವರು ವೈದಿಕರಾದುದರಿಂದ ಅದನ್ನು ಒಪ್ಪುವುದಿಲ್ಲ. "ಲಕ್ಷ್ಮಿ ತಂದ ಬಟ್ಟೆಗೆ ನೀರು ಹಾಕಿ ಅನಂತರ ಒಣಗಿಸಿ" ಎಂದು ಅವರು ಹೇಳುತ್ತಾರೆ. ಇದು ಲಕ್ಷ್ಮಿಗೂ ಗೊತ್ತು. ಈ ಮೋಸದಲ್ಲಿ ಅವಳೂ ಪಾಲುಗಾರಳು. ಹಳ್ಳಿಯಲ್ಲಿ ಲಕ್ಷ್ಮಿಯನ್ನು ಯಾರೂ ಅವಳ ಹೆಸರು ಹಿಡಿದು ಕರೆಯುವುದಿಲ್ಲ. ಈಡಿಗರ ಹೆಣ್ಣು ಎಂದು ಕರೆಯುವುದೇ ವಾಡಿಕೆ."

ಇಷ್ಟು ವಿಚಾರಗಳು ತಿಳಿದನಂತರ ಮಾಧುವು "ಹಾಗಾದರೆ ೮-೧೦ ದಿನಗಳಿಂದ ಈ ಹುಡುಗಿ ನಮ್ಮ ಕಣ್ಣಿಗೇ ಬೀಳಲಿಲ್ಲವಲ್ಲ?" ಎಂದನು. ಶ್ಯಾಮನು "ಹೇಗೆ ಬೀಳುತ್ತಾಳೆ. ಮಳೆಗಾಳಿಗಳಿಗೆ ಹೆದರಿ ನೀನು ಕೊಠಡಿ ಬಿಟ್ಟು ಹೊರಕ್ಕೆ ಕಾಲಿಡಲಿಲ್ಲ" ಎಂದನು. ಅವರು ಮನೆ ಸೇರುವ ವೇಳೆಗೆ ಲಕ್ಷ್ಮಿಯೂ ಬಟ್ಟೆಗಳನ್ನೆಲ್ಲಾ ತೆಗೆದುಕೊಂಡು ಹಿಂದೆ ಬಂದಳು. ಮಾಧುವು ಅವಳನ್ನು ಮತ್ತೆ ನೋಡಿದನು. ಅಂದಿನಿಂದ ಮಾಧುವಿಗೆ ಲಕ್ಷ್ಮಿಯ ಹುಚ್ಚು ಪೂರ್ತಿಯಾಗಿ ಹಿಡಿಯಿತು.

ಮಾಧುವಿಗೆ ಲಕ್ಷ್ಮಿಯದೇ ಜಪವಾಯಿತು. ಅವಳು ಎದುರಿಗೆ ಇದ್ದಾಗ ಅವಳಲ್ಲಿ ನೆಟ್ಟ ಕಣ್ಣು. ಅವಳು ಎದುರಿಗೆ ಇಲ್ಲದಿದ್ದಾಗ ಅವಳಲ್ಲಿ ನೆಟ್ಟ ಮನಸ್ಸು, ಅವನ ಸಮಸ್ತ ಕರಣಗಳೂ ಲಕ್ಷ್ಮಿಯ ಬೆನ್ನುಹತ್ತಿದ್ದವು. ಅವಳು ಇವನ ಬಟ್ಟೆಗಳನ್ನು ಒಗೆದು, ಬಿಸಲಿಲ್ಲದುದರಿಂದ ಒಣಗಿಸಲು ಸಾಧ್ಯವಿಲ್ಲದೆ ಒದ್ದೆಗಳನ್ನೇ ತಂದು ಇವನ ಕೊಠಡಿಯಲ್ಲಿ ಹರವುತ್ತಿರುವಾಗ ಮಾಧುವು ಅವಳು ಬಳಕುತ್ತಾ ಬಾಗುತ್ತಾ ವೈಯಾರದಿಂದ ಕೈಬೆರಳುಗಳಿಂದ ಬಟ್ಟೆಗಳನ್ನು ಆಡಿಸುವುದನ್ನು ಎವೆಯಿಕ್ಕದೆ ನೋಡುತ್ತಿದ್ದನು. ಅವಳು ಅರಿವೆಗಳನ್ನು ಸೆಣೆಯುತ್ತಿರುವಾಗ ಒಂದಿಲ್ಲೊಂದು

ನೆಪದಿಂದ ನದಿಗೆ ಹೋಗುತ್ತಿದ್ದನು. ಲಕ್ಷ್ಮಿಯು ಕೊಟ್ಟಿಗೆಯಲ್ಲಿ ಹಾಲು ಕರೆಯುತ್ತಿರುವಾಗ, ಆ ಸಗಣಿಗಂಜಲದ ಕೊಚ್ಚೆಯಲ್ಲಿ ಎಂದೂ ಕಾಲಿಡದವನು, ಮೆಲ್ಲನೆ ಕೊಟ್ಟಿಗೆಗೆ ಬಂದು ಹಸುವಿನ ನೆತ್ತಿಯನ್ನು ತುರಿಸುತ್ತಾ ಮಧ್ಯೆ ಮಧ್ಯೆ ತನಗೆ ಮುಟ್ಟಿಸುತ್ತಿದ್ದ ಸೊಳ್ಳೆಗಳಿಗೆ ತನ್ನ ದೇಹದ ಮೇಲೆಯೇ ಒಂದೊಂದು ಕೊಡುತ್ತಿದ್ದನು. ಇವನಿಗೆ ಒಂದು ದಿನ ಸ್ವಲ್ಪ ಉಷ್ಣವಾದಂತೆ ಆಗಿ ಕಣ್ಣು ಉರಿಯುತ್ತಿರಲು, ಶ್ಯಾಮನ ತಂದೆ, “ನಿತ್ಯಾ ಬೆಳಿಗ್ಗೆ ಒಂದು ಲೋಟ ನೊರೆ ಹಾಲನ್ನು ಕುಡಿಯುವಂತೆ” ಹೇಳಿದರು. ಮಾಧುವು ನಿತ್ಯಾ ಬೆಳಿಗ್ಗೆ ದನದ ಕೊಟ್ಟಿಗೆಯಲ್ಲಿ ಲಕ್ಷ್ಮಿಯ ಕೈಯಿಂದಲೇ ಅವಳು ಆಗ ತಾನೆ ಕರೆದಿದ್ದ ಹಾಲನ್ನು ಒಂದು ಲೋಟ ಕುಡಿಯುತ್ತಿದ್ದನು. ಮೊದಲು ಔಷಧಿ ಎಂದು ಪ್ರಾರಂಭಮಾಡಿದುದು, ಮಾಧುವಿಗೆ ಬರಬರುತ್ತಾ ದಿನದ ಕೆಲಸಗಳಿಗೆ ಅತ್ಯಂತ ಉತ್ಸಾಹಪೂರ್ಣವಾದ ಪ್ರಾರಂಭವಾಯಿತು. ತನ್ನ ರೂಪಕ್ಕೆ ಪಟ್ಟಣದ ಈ ನಾಗರಿಕ ಒಲಿದಿದ್ದುದು ಆ ಹೆಣ್ಣಿಗೆ ತಿಳಿಯದೆ ಇರಲಿಲ್ಲ. ಲಕ್ಷ್ಮಿಗೆ ತಾನು ಎಲ್ಲಿಗೆ ಹೋದರೂ ಮಾಧುವಿನ ಕಣ್ಣುಗಳು ತನ್ನನ್ನೇ ಅನುಸರಿಸುತ್ತಿರುವುದು ಕಾಣುತ್ತಿದ್ದಿತು. ಅವಳಿಗೂ ಮಾಧುವಿನಲ್ಲಿ ಅರ್ಧ ಕುತೂಹಲ ಅರ್ಧ ಪ್ರೇಮವುಂಟಾದುವು.

ಒಂದು ದಿವಸ ಬೆಳಿಗ್ಗೆ ಲಕ್ಷ್ಮಿಯು ಕೊಟ್ಟಿಗೆಯಲ್ಲಿ ದೊಡ್ಡ ಹಸುವಿನ ಹಾಲನ್ನು ಕರೆಯುತ್ತಾ ಕುಳಿತಿದ್ದಳು. ಆಗ ತಾನೆ ಮನೆ ಮುಂದಲ ಹೊಲದಲ್ಲಿ ಬೆಳೆದಿದ್ದ ಮರದ ಸಂಪಿಗೆ ಹೂವುಗಳನ್ನು ತಲೆಗೆ ಮುಡಿದುಕೊಂಡಿದ್ದುದರಿಂದ ಅವಳ ಸ್ವಾಭಾವಿಕವಾದ ಸೊಬಗು ಮತ್ತಷ್ಟು ಹೆಚ್ಚಾಗಿದ್ದಿತು. ದನದ ಕೊಟ್ಟಿಗೆಯೆಲ್ಲಾ ಸಂಪಿಗೆ ಸುವಾಸನೆಯಿಂದ ತುಂಬಿತ್ತು. ಮಾಧುವು ನಿತ್ಯದ ತನ್ನ ಪದ್ಧತಿಯಂತೆ ನೊರೆಹಾಲನ್ನು ಕುಡಿಯಲು ಬಂದನು. ಲಕ್ಷ್ಮಿಯು ಅವನಿಗೆ ಬಹಳ ಹಿತವಾಗಿ ಇಷ್ಟವಾಗಿ ಕಂಡಳು. ಅವಳೇ ಅವನಿಗೆ ಸಮಸ್ತ ಜಗತ್ತು ಸರ್ವಸ್ವವೂ ಆಗಿ ತೋರಿದಳು. ಲಕ್ಷ್ಮಿಯಿಲ್ಲದಿದ್ದರೆ ತನ್ನ ಬಾಳು ಎಂದಿಗೂ ಸುಖದಾಯಕವೂ ಪೂರ್ಣವೂ ಆಗುವುದಿಲ್ಲವೆಂದು ಅವನಿಗೆ ಇದ್ದಕ್ಕಿದ್ದಂತೆ ಹೊಳೆಯಿತು. ಲಕ್ಷ್ಮಿಯು ಲೋಟಕ್ಕೆ ಹಾಲನ್ನು ತುಂಬಿ ಪದ್ಧತಿಯಂತೆ ಅವನ ಮುಂದಕ್ಕೆ ನೀಡಿದಳು. ಮಾಧುವು ಅವಳ ಬಲತೋಳನ್ನು ಹಿಡಿದುಕೊಂಡು ರವಿಕೆಯನ್ನು ಹಿಂದಕ್ಕೆ ತಳ್ಳಿ ಮೃದುವಾಗಿ ಬೆಚ್ಚಗಿದ್ದ ತೋಳಿನ ಒಳಭಾಗವನ್ನು ಬಲವಾಗಿ ಚುಂಬಿಸಿದನು. ಲಕ್ಷ್ಮಿಯ ಕೈಯಿನ ಹಾಲು ತುಳುಕಿತು. ಅವಳು ಅದನ್ನು ನೆಲದ ಮೇಲೆ ಇಟ್ಟು ಮನೆಯೊಳಕ್ಕೆ ಹೊರಟು ಹೋದಳು.

ಒಂದು ದಿನ ರಾತ್ರಿ ಸುಮಾರು ೧೨ ಗಂಟೆ ಸಮಯದಲ್ಲಿ ಮಾಧುವು ನಿದ್ರೆ ಬರದೆ ಹಾಸಿಗೆಯ ಮೇಲೆ ಹೊರಳಾಡುತ್ತಾ ಮಲಗಿದ್ದನು. ಸುತ್ತಿನ ಕಾಡಿನ ಹುಳಗಳು ವಿಧವಿಧವಾಗಿ ಧ್ವನಿ ಮಾಡುತ್ತಿರುವುದೂ, ದೂರದಲ್ಲಿ ಗುಳ್ಳೆಲಕ್ಕಗಳು ಕೂಗುತ್ತಿರುವುದೂ ಕೇಳಿಸುತ್ತಿದ್ದಿತು. ಇದ್ದಕ್ಕಿದ್ದಂತೆ ಯಾರೋ ಲಕ್ಷ್ಮಿಯ ಕೊಠಡಿಯ ಬಾಗಿಲನ್ನು ಬಹು ಮೆಲ್ಲಗೆ ತಟ್ಟಿದಂತಾಯಿತು. ಮಾಧುವು ತನ್ನ ಕೊಠಡಿಯ ಕಿಡಿಕೆಯನ್ನು ಸ್ವಲ್ಪ ತೆರೆದು ಹೊರಗೆ ನೋಡಿದನು. ಬೆಳದಿಂಗಳು ಚೆನ್ನಾಗಿ ಬಿದ್ದಿತ್ತು. ಲಕ್ಷ್ಮಿಯ ಬಾಗಿಲಿನಲ್ಲಿ ಒಬ್ಬ ಗಂಡಸು ನಿಂತಿದ್ದನು. ಲಕ್ಷ್ಮಿಯು ಬಾಗಿಲನ್ನು ತೆರೆದುಕೊಂಡು ಹೊರಕ್ಕೆ ಬಂದಳು. ಅವರಿಬ್ಬರೂ ಪಿಸಪಿಸನೆ ಮಾತನಾಡಿದುದು ಮಾಧುವಿಗೆ ಕೇಳಿಸಿತು. ಆದರೆ ಧ್ವನಿ ಮಾತ್ರ ಕೇಳಿಸಿತೇ ಹೊರತು ಮಾತು ಏನೆಂಬುದು ತಿಳಿಯಲಿಲ್ಲ. ಮಾತು ಮುಗಿದ ಮೇಲೆ, ಲಕ್ಷ್ಮಿಯು ಮತ್ತೆ ತನ್ನ ಕೊಠಡಿಗೆ ಹೋದಳು. ಬಂದಿದ್ದವನು ಬಾಗಿಲಿನಲ್ಲಿಯೇ ನಿಂತನು. ಸ್ವಲ್ಪ ಹೊತ್ತಾದ ಮೇಲೆ ಲಕ್ಷ್ಮಿಯು ಹೊರಕ್ಕೆ ಬಂದಳು. ಅವಳ ವೇಷವನ್ನು ನೋಡಿ ಮಾಧುವಿಗೆ ಆಶ್ಚರ್ಯವೂ ಗಾಬರಿಯೂ ಉಂಟಾಯಿತು. ಲಕ್ಷ್ಮಿಯು ನಮ್ಮ ಮಲೆನಾಡು ರೈತರಂತೆ ಕಚ್ಚೆ ಪಂಚೆಯನ್ನು ಮಂಡಿಯಿಂದ ಸ್ವಲ್ಪ ಕೆಳಗಿನವರೆಗೆ ಉಟ್ಟು ಮೇಲೆ ಒಂದು ಕೋಟನ್ನು ತೊಟ್ಟಿದ್ದಳು. ತಲೆಗೆ ಒಂದು ಲಪ್ಪಟ್ಟೆಯನ್ನು ಸುತ್ತಿಕೊಂಡಿದ್ದಳು. ಕೈಯಲ್ಲಿ ಒಂದು ಮಚ್ಚು ಇದ್ದಿತು. ಅದರ ಅಲುಗು ಬೆಳದಿಂಗಳಿನಲ್ಲಿ ಹೊಳೆಯುತ್ತಿದ್ದಿತು. ಲಕ್ಷ್ಮಿಯು ಬಾಗಿಲಿಗೆ ಬೀಗವನ್ನು ಹಾಕಿಕೊಂಡು ಬಂದವನ ಜತೆಯಲ್ಲಿ ಹೊರಟಳು. ಮಾಧುವಿಗೆ ಬಗೆಬಗೆಯ ಯೋಚನೆಗಳುಂಟಾದುವು. ಈ ಬಂದವನು ಯಾರು? ಈ ಹನ್ನೆರಡು ಗಂಟೆಯಲ್ಲಿ ಅವನು ಬರಲು ಕಾರಣವೇನು? ಇವನು ಇಲ್ಲಿಗೆ ಎಷ್ಟು ದಿವಸಗಳಿಂದ ಬರುತ್ತಿರಬಹುದು? ಅದೂ ಇರಲಿ, ಇದೇನು ಈ ಆಶ್ಚರ್ಯ—ಇವಳಿಗೆ ಈ ಗಂಡಸಿನ ಉಡುಪೇಕೆ? ಈ ಕತ್ತಲೆಯಲ್ಲಿ ಅವನೊಂದಿಗೆ ಇವಳು ಹೋಗುವುದಾದರೂ ಎಲ್ಲಿಗೆ? ಮಾಧುವೂ ಹಾಸಿಗೆಯಿಂದ ಎದ್ದು ಹೊದ್ದಿದ್ದ ಶಾಲುವನ್ನೇ ಹೊದ್ದುಕೊಂಡು ಮೆಲ್ಲಮೆಲ್ಲನೆ ಅವರ ಹಿಂದೆ ಹೋದನು.

ಅವರ ಮನೆಯಿಂದ ಸುಮಾರು ½ ಮೈಲಿ ಹೋಗುವುದರೊಳಗೆ ಘನವಾದ ಈಚಲ ಕಾಡು ಸಿಕ್ಕಿತು. ದಾರಿಯಿಂದ ಸ್ವಲ್ಪ ಮರೆಯಾಗಿ ಒಂದು ಮರದ ನೆರಳಿನಲ್ಲಿ ಒಂದು ಗಂಡುವ್ಯಕ್ತಿ ನಿಂತಿದ್ದಿತು. ಲಕ್ಷ್ಮಿಯೂ, ಅವಳ ಜತೆಗಾರನೂ ಬರುತ್ತಿದ್ದುದನ್ನು ನೋಡಿ ಅದು ಮುಂದಕ್ಕೆ ಬಂದಿತು. ಅನಂತರ ಮೂರು ಜನವೂ ಕೊನೆಯಲ್ಲಿ ಬಂದವನು, ಮರದ ನೆರಳಿನಲ್ಲಿ ಇಟ್ಟಿದ್ದ ದೊಡ್ಡದಾದ ಮೂರು ಗಡಿಗೆಗಳನ್ನು ತೆಗೆದುಕೊಂಡು ಮುಂದೆ ಹೊರಟರು. ಕೊನೆಯಲ್ಲಿ ಬಂದ

ವ್ಯಕ್ತಿ ಗಂಡುವೇಷವನ್ನು ಹಾಕಿದ್ದರೂ ಅದು ಹೆಣ್ಣು ಎಂಬುದು ಅದರ ನಡಿಗೆಯಿಂದ ಮಾಧುವಿಗೆ ಗೊತ್ತಾಯಿತು. ಗಡಿಗೆಗಳನ್ನು ನೋಡಿದ ಕೂಡಲೆ ಮಾಧುವಿಗೆ ಅವರು ಹೋಗುತ್ತಿದ್ದ ಉದ್ದೇಶ ಗೊತ್ತಾಯಿತು.

ಅವರು ಕಂಟ್ರಾಕ್ಟುದಾರನಿಗೂ ಸರ್ಕಾರಕ್ಕೂ ತಿಳಿಯದಂತೆ, ಅವರಿಬ್ಬರಿಗೂ ಮೋಸಮಾಡಿ ಕಳ್ಳ ಭಟ್ಟಿಯನ್ನು ಇಳಿಸುವುದಕ್ಕೆ ಹೋಗುತ್ತಿದ್ದರು. ಇದೇ ಲಕ್ಷ್ಮಿಯ ತಾಯಿಯ ಮುಖ್ಯ ಜೀವನೋಪಾಯವಾಗಿತ್ತು. ಜತೆಯಲ್ಲಿ ಬಂದಿದ್ದವಳು ಲಕ್ಷ್ಮಿಯ ತಾಯಿಯೇ ಎಂಬುದರಲ್ಲಿ ಮಾಧುವಿಗೆ ಅನುಮಾನ ಉಳಿಯಲಿಲ್ಲ. ಬೆಳದಿಂಗಳಿನಲ್ಲಿ ಮಾಧುವು ನೋಡಿದಾಗ, ಅವರ ಜತೆಯಲ್ಲಿದ್ದ ಗಂಡಸು ಕಟ್ಟುಮಸ್ತಾದ ೨೫-೨೬ ವರುಷದ ಯುವಕನಾಗಿರುವುದು ಕಂಡಿತು. ಅವನು ಪ್ರತಿದಿನವೂ ಹಗಲು ಯಾವುದಾದರೂ ಒಂದು ಹೊತ್ತಿನಲ್ಲಿ ಹೋಗಿ, ಕಾಡಿನಲ್ಲಿ ಮರಗಳಿಗೆ ಗಡಿಗೆಗಳನ್ನು ಕಟ್ಟಿ ಬರುತ್ತಿದ್ದನು. ಅರ್ಧರಾತ್ರಿಯಲ್ಲಿ ಮೂರು ಜನರೂ ಹೋಗಿ ಆ ಗಡಿಗೆಗಳ ಹೆಂಡವನ್ನು ಬೇರೆ ಗಡಿಗೆಗಳಿಗೆ ತುಂಬಿಕೊಂಡು, ಮರುದಿವಸಕ್ಕೆ ಬೇಕಾಗುವ ಆ ಗಡಿಗೆಗಳನ್ನು ಅಲ್ಲೆ ಮುಚ್ಚಿಟ್ಟು ಮನೆಗೆ ಬರುತ್ತಿದ್ದರು. ಹೆಂಡವು ಲಕ್ಷ್ಮಿಯ ತಾಯಿಯ ಮನೆಯಲ್ಲಿ ಉಳಿಯುತ್ತಿದ್ದಿತು. ಬೆಳಗಾದ ಮೇಲೆ ಗೊತ್ತಿರುವ ಗುರುತಿರುವ ಗಿರಾಕಿಗಳು ಅಲ್ಲಿಗೆ ಗುಟ್ಟುಗುಟ್ಟಾಗಿ ಬಂದು ಕುಡಿದು ಹೋಗುತ್ತಿದ್ದರು. ಲಕ್ಷ್ಮಿಯ ತಾಯಿಯು, ಕಂಟ್ರಾಕ್ಟುದಾರನಷ್ಟು ನೀರನ್ನು ಅದಕ್ಕೆ ಬೆರಸುತ್ತಿರಲಿಲ್ಲವಾದುದರಿಂದ ಆ ಹೆಂಡವು, ಪಡಕಾನೆಯ ಹೆಂಡಕ್ಕಿಂತ ರುಚಿಯಾಗಿರುತ್ತಿದ್ದಿತು. ಸುತ್ತಾ ೫ ಮೈಲಿಗಳಿಂದಲೂ ಲಕ್ಷ್ಮಿಯ ತಾಯಿಗೆ ಗಿರಾಕಿಯಿದ್ದಿತು. ಅವಳ ಈ ಎಲ್ಲಾ ಕೆಲಸಗಳಲ್ಲೂ ಅವರ ಜತೆಯಲ್ಲಿ ಈಗ ಇದ್ದ ಯುವಕನು ಸಹಾಯಕನಾಗಿದ್ದನು. ಕಂಟ್ರಾಕ್ಟುದಾರನ ದೂರಿನ ಮೇಲೆ ಅನೇಕ ಸಲ ಪೋಲಿಸಿನವರೂ ಎಕ್ಸೈಜ್ ಬಾಬಿನವರೂ ಇವರನ್ನು ಹಿಡಿಯಲು ಪ್ರಯತ್ನಪಟ್ಟು, ಒಂದಿಲ್ಲೊಂದು ಕಾರಣದಿಂದ ವಿಫಲರಾಗಿದ್ದರು. ಆದರೆ ಅವರ ಭಯ, ಕಳ್ಳ ಭಟ್ಟಿ ಇಳಿಸುತ್ತಿದ್ದವರಿಗೆ ತಪ್ಪಿರಲಿಲ್ಲ.

ವಿಷಯವು ಪೂರ್ಣವಾಗಿ ತಿಳಿದ ಕೂಡಲೆ ಮಾಧುವು ಮುಂದೆ ಹೋಗುತ್ತಿದ್ದ ಮೂರು ಜನರನ್ನು ಬೇಗ ಬೇಗ ಹೋಗಿ ಹಿಡಿದನು. ಸರ್ಕಾರಕ್ಕೆ ಅನ್ಯಾಯ ಮಾಡುವುದರಿಂದ ಕಂಟ್ರಾಕ್ಟ್‌ದಾರನಿಗೆ ನಷ್ಟವಾಗುವುದಿರಲಿ, ಸಿಕ್ಕಿಬಿದ್ದರೆ ಶಿಕ್ಷೆ ಅನುಭವಿಸಬೇಕಾಗುವುದೆಂದೂ ಎಚ್ಚರಿಸಿದನು. ಯಾರೂ ಇವನಿಗೆ ಜವಾಬುಕೊಡಲಿಲ್ಲ. ಲಕ್ಷ್ಮಿಯು ಮಾತ್ರ "ಗದ್ದಲ ಮಾಡಬೇಡಿ. ಪೋಲಿಸಿನವರು ಬಂದರೂ ಬರಬಹುದು" ಎಂದಳು. ಮಾಧುವಿಗೆ ಏನು ಮಾಡುವುದಕ್ಕೂ

ತೋಚಲಿಲ್ಲ. "ಸದ್ಯ ಇವತ್ತಿಗೆ ಬಚಾವಾದರೆ ಸಾಕು, ಮುಂದೆ ಇದನ್ನು ಸರಿಮಾಡುತ್ತೇನೆ" ಎಂದುಕೊಂಡನು. ಲಕ್ಷ್ಮಿಯು "ನಿಮಗೆ ಭಯವಾದರೆ ನೀವು ಹೋಗಿ ಮಲಗಿಕೊಳ್ಳಿ" ಎಂದಳು. ಕಳ್ಳ ಭಟ್ಟಿ ಇಳಿಸುವುದರಲ್ಲಿ ಸೇರುವುದರಲ್ಲಿ ಮಾಧುವಿಗೂ ಒಂದು ವಿಧವಾದ ಅಪಾಯದ ಆನಂದವು ಉಂಟಾಯಿತು. ಅವನೂ ಆ ಮೂವರನ್ನೂ ಅನುಸರಿಸಿ ನಡೆದನು.

ಅವರು ಕಾಡಿನ ಅನೇಕ ಒಳದಾರಿಗಳಲ್ಲಿ ನುಗ್ಗಿ ಹೋದರು. ಆ ದಾರಿಯಲ್ಲಿ ಒಬ್ಬನೇ ಹಿಂದಿರುಗಲು ತನಗೆ ಖಂಡಿತ ಗೊತ್ತಾಗುವುದಿಲ್ಲವೆಂದು ಮಾಧು ನಿಶ್ಚಯಿಸಿಕೊಂಡನು. ಸ್ವಲ್ಪ ಹೊತ್ತಿನೊಳಗಾಗಿ ಅವರು, ಅವರ ಜತೆಯಲ್ಲಿದ್ದವನು ಕಟ್ಟಿದ್ದ ಮರಗಳ ಬಳಿಗೆ ಬಂದರು. ಮೇಲಿದ್ದ ಗಡಿಗೆಗಳು ಸ್ವಲ್ಪ ದಪ್ಪವಾಗಿದ್ದವು. ಗಂಡಸು ಅವುಗಳನ್ನೆಲ್ಲಾ ಬಿಚ್ಚಿ ಲಕ್ಷ್ಮಿಯ ಕೈಗೆ ಕೊಟ್ಟನು. ಅನಂತರ, ತಾವು ತಂದಿದ್ದ ಗಡಿಗೆಗಳನ್ನು ಅಲ್ಲೇ ೧೦ ಮಾರು ದೂರದಲ್ಲಿ ಯಾವುದೋ ಪೊದೆಯಲ್ಲಿ ಮುಚ್ಚಿಟ್ಟನು. ಲಕ್ಷ್ಮಿಯೂ ಅವಳ ತಾಯಿಯ ಜತೆಯಲ್ಲಿದ್ದ ಗಂಡಸೂ (ಅವನ ಹೆಸರು ದೇವನೆಂದು ಮಾಧುವಿಗೆ ಆಮೇಲೆ ತಿಳಿಯಿತು) ಮನೆ ಕಡೆಗೆ ಸರಸರನೆ ಹೊರಟರು. ಅಷ್ಟು ಹೊತ್ತಿಗೆ ಮಗ್ಗಲು ಪೊದೆಯಲ್ಲಿ ಒಂದು ಶಿಳ್ಳಿನ ಸದ್ದಾಯಿತು. ಮಾಧುವು ಇದೇನೆಂದು ಯೋಚಿಸುವುದರೊಳಗಾಗಿ ಅವನ ಜತೆಯಲ್ಲಿದ್ದ ಮೂವರೂ ತಲೆಯ ಮೇಲಿದ್ದ ಗಡಿಗೆಗಳೊಂದಿಗೆ ಭರದಾಂಡು ಓಡಲು ಪ್ರಾರಂಭಿಸಿದರು. ಲಕ್ಷ್ಮಿಯು ಮಾಧುವಿಗೆ "ಓಡಿ, ಓಡಿ, ನಾವು ಸಿಕ್ಕುವುದಿಲ್ಲ. ನೀವು ಸಿಕ್ಕಿಬಿದ್ದರೆ ನಮ್ಮ ಕೆಲಸವೂ ತೀರಿತು" ಎಂದಳು. ಅವರು ಐದು ನಿಮಿಷದೊಳಗೆ ನೂರು ಮುಂದಾಗಿ ತಿರುಗಿದರು. ಮಾಧುವು ಲಕ್ಷ್ಮಿಯ ಸೆರಗನ್ನು ಹಿಡಿದು ಕೊಳ್ಳದೆ ಇದ್ದಿದ್ದರೆ ಅವನಿಗೆ ಬೇರೆ ಅವರ ಜತೆಯಲ್ಲಿ ಹೋಗಲು ಸಾಧ್ಯವಾಗುತ್ತಿರಲಿಲ್ಲ. ಶಿಳ್ಳಿನ ದನಿಯೂ ಅವರನ್ನು ಹಿಂದೆ ಹಿಂದೆ ಅನುಸರಿಸುತ್ತಾ ಬರುತ್ತಿದ್ದಿತು. ಮಾಧುವು ಲಕ್ಷ್ಮಿಗೆ "ಈ ಗಡಿಗೆಗಳನ್ನು ಇಲ್ಲಿ ಎಸೆದು ಬಿಡಿ, ಬೇಗ ಓಡಬಹುದು?" ಎಂದನು. ಲಕ್ಷ್ಮಿಯು "ಉಂಟೆ? ಇಲ್ಲಿ ಎಸೆದರೆ ನಾವು ಹೆಂಡವನ್ನು ಇಳಿಸುವುದಕ್ಕೆ ಬಂದಿದ್ದೇವೆಂದು ಖಂಡಿತ ಗೊತ್ತಾಗುವುದು. ಮುಂದೆ ಕೊಳ ಸಿಕ್ಕುತ್ತೆ. ಅದರೊಳಕ್ಕೆ ಎಸೆಯೋಣ" ಎಂದಳು. ಹಿಂದೆ ಅಟ್ಟುತ್ತಿದ್ದವರು ಮುಂದಲವರಷ್ಟು ಕಾಡುದಾರಿಗಳಲ್ಲಿ ಪರಿಶ್ರಮವುಳ್ಳವರಾಗಿರಲಿಲ್ಲ. ಮುಂದಲವರು ಪೊದೆಪೊದೆಗಳಲ್ಲಿ ನುಸುಳಿಕೊಂಡು ಹೋಗುತ್ತಿದ್ದುದನ್ನು ಕಂಡು ಇವರು ತಪ್ಪಸಿಕೊಳ್ಳುವುದು ಖಂಡಿತವೆಂದು ಅವರು ಮೊದಲೇ ಕೈನಲ್ಲಿ ಸಿದ್ಧ ಮಾಡಿಕೊಂಡಿದ್ದ ದೊಣ್ಣೆಗಳನ್ನು ಇವರ ಮೇಲೆ ಬೀರಿದರು. ಒಂದು ದೊಣ್ಣೆಯ ಏಟು ಲಕ್ಷ್ಮಿಯ ಕೈಗೆ ಬಿದ್ದಿತು. ಆ ಏಟಿಗೆ ಅವಳ ಗಡಿಗೆಯು ಒಡೆದು ಚೂರಾಗಿ

ಹೆಂಡವೆಲ್ಲಾ ಅವಳ ಮೇಲೆಯೇ ಸುರಿಯಿತು. ಕೈಯೂ ಸೌತೆಕಾಯಿ ಗಾತ್ರ ಬಾತಿತು. ಮತ್ತೊಂದು ದೊಣ್ಣೆ ಏಟು ಮಾಧುವಿನ ಮೊಣಕಾಲಿಗೆ ಲಟ್ ಎಂದು ತಗಲಿತು. ಮತ್ತೆ ೪-೫ ಪೊದೆಗಳನ್ನು ಬಳಸುವುದರೊಳಗೆ ಅಲ್ಲಿ ಒಂದು ಕೊಳವು ಸಿಕ್ಕಿತು. ದೇವನೂ ಲಕ್ಷ್ಮಿಯ ತಾಯಿಯೂ ತಮ್ಮ ತಲೆಗಳ ಮೇಲಿದ್ದ ಗಡಿಗೆಗಳನ್ನು ಕೊಳದೊಳಕ್ಕೆ ಒಗೆದರು. ದೇವನೂ ಅವಳೂ ಬೇರೆ ಹಾದಿ ಹಿಡಿದರು. ಲಕ್ಷ್ಮಿಯು ಮಾಧುವನ್ನು ಎಳೆದುಕೊಂಡು ಕಾಲುದಾರಿಗಳನ್ನೂ ಅಡ್ಡದಾರಿಗಳನ್ನೂ ಬಿದ್ದು ಶ್ಯಾಮನ ಮನೆಗೆ ಬಂದು ಸೇರಿದಳು. ಮನೆ ಸೇರಿದ ಮೇಲೆ ಲಕ್ಷ್ಮಿಯು "ಪೋಲಿಸಿನವರು ೧೫ ದಿನಗಳಿಂದ ನಮ್ಮನ್ನು ಕಾಯುತ್ತಿದ್ದಾರೆ. ಇವತ್ತು ಖಂಡಿತ ಸಿಕ್ಕಿದೆವೆಂದುಕೊಂಡಿದ್ದರು. ನಮಗೂ ಅವರಿಗೂ ಮರೆಯಾಗಿದ್ದುದು ಒಂದೇ ಒಂದು ಪೊದೆ" ಎಂದಳು. ಮಾಧುವು ಏನೂ ಹೇಳದೆ ಮೊಣಕಾಲು ಮುಟ್ಟಿ ನೋಡಿಕೊಳ್ಳುತ್ತಾ ತನ್ನ ಕೊಠಡಿಯಲ್ಲಿ ಹೋಗಿ ಮಲಗಿದನು.

ಮರುದಿವಸ ಬೆಳಗಾಗುವ ಹೊತ್ತಿಗೆ ೩-೪ ಜನ ಪೋಲೀಸ್ ಇಲಾಖೆಯವರೂ ಶೇಂದಿ ಇಲಾಖೆಯವರೂ ಕಂಟ್ರಾಕ್ಟರ್‌ದಾರರೂ ಶ್ಯಾಮನ ಮನೆಗೆ ಬಂದು ಅವರ ತಂದೆಯವರ ಹತ್ತಿರ ರಾತ್ರಿ ನಡೆದ ವಿಚಾರವನ್ನೆಲ್ಲಾ ಹೇಳುತ್ತಿದ್ದರು. "ಈ ಸಲ ಸಿಕ್ಕಿದ್ದರು. ಸ್ವಲ್ಪದರಲ್ಲಿ ಮೀರಿ ಹೋಯಿತು. ಊರೊಳಗೆಲ್ಲಾ ವಿಚಾರ ಮಾಡುತ್ತಿದ್ದೇವೆ, ರಾತ್ರಿ ಯಾರಾದರೂ ಮನೆ ಬಿಟ್ಟು ಕಾಡಿಗೆ ಹೋಗಿದ್ದರೇ ಎಂದು. ನಿಮ್ಮ ಮನೆ ಹೆಣ್ಣಾಳು ಗಂಡಾಳು ಎಲ್ಲಾ ರಾತ್ರಿ ಮನೆಯಲ್ಲಿಯೇ ಮಲಗಿದ್ದರೇ?" ಎಂದರು. ಶ್ಯಾಮನು "ನಮಗೇ ನಿದ್ರೆ. ಮನೇಲಿ ಮಲಗದೆ ಈ ಕಾಡಿನಲ್ಲಿ ಎಲ್ಲಿ ಹೋಗ್ತಾರೆ?" ಎಂದನು. ಮಾಧುವು ಮಾತನಾಡಲಿಲ್ಲ. ಅಷ್ಟು ಹೊತ್ತಿಗೆ ಲಕ್ಷ್ಮಿಯು ಹಾಲನ್ನು ಕರೆದುಕೊಂಡು ಬಂದಳು. ಅವಳ ಕೈ ಊದಿದ್ದನ್ನು ಪೋಲೀಸಿನವರು ಕಂಡು "ಕೈಗೆ ಏನು ಏಟು?" ಎಂದರು. ಲಕ್ಷ್ಮಿಯು "ರಾತ್ರಿ ಹಸ ಒದೆಯಿತು" ಎಂದುಕೊಂಡು ಒಳಕ್ಕೆ ಹೋದಳು.

ಮಾಧುವಿಗೆ ಅಲ್ಲಿಂದ ಮುಂದೆ ಕಳ್ಳಭಟ್ಟಿ ಇಳಿಸುವುದನ್ನು ಲಕ್ಷ್ಮಿಗೆ ತಪ್ಪಿಸುವುದೇ ೧೫ ದಿನಗಳ ಕೆಲಸವಾಯಿತು. ಲಕ್ಷ್ಮಿಯು "೧೫ ವರುಷದಿಂದ ಅಮ್ಮನಿಗೆ ಇದೇ ಕಸಬು. ಇದು ಬಿಟ್ಟರೆ ಹೊಟ್ಟೆಗೇ ಇಲ್ಲ. ಒಂದು ಅಂಗೈ ಅಗಲ ಜಮೀನಿಲ್ಲ. ಇದ್ದರೂ ಮಾಡುವುದಕ್ಕೆ ಯಾರನ್ನು ತರಲಿ? ನನಗೇನೋ ಇದರಲ್ಲಿ ಸೇರಿ ರಾತ್ರಿ ರಾತ್ರಿ ಹೆಂಡವನ್ನು ಕದ್ದು ಮಾರುವುದಕ್ಕೆ ಸಂತೋಷವೇ, ನನಗೆ ಅದೇ ಒಂದು ಹಬ್ಬ, ಪೋಲೀಸಿನವರ ಕೈಯಿಂದ ತಪ್ಪಿಸಿಕೊಂಡು ಬರುವುದೇ ಒಂದು ಸಾಹಸ" ಎಂದಳು. ಕೊನೆಗೆ ಬಿಡುವುದಾಗಿ ಮಾತುಕೊಟ್ಟಳು.

ಈ ಮಧ್ಯೆ ಬೆಂಗಳೂರಿನಲ್ಲಿ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯ ಫಲಿತಾಂಶಗಳು ಪ್ರಕಟವಾದುವು. ಮೊದಲೇ ನಿರೀಕ್ಷಿಸಿದ್ದಂತೆ ಮಾಧುವಿಗೆ ಮೊದಲನೆಯ ರ್‍ಯಾಂಕ್ ಬಂದಿತು. ಶ್ಯಾಮನಿಗೆ ಎರಡನೆಯ ರ್‍ಯಾಂಕ್ ಬಂದಿತು. ಲಕ್ಷ್ಮಿಯಲ್ಲಿ ಮಾಧುವಿಗೆ ಉಂಟಾಗಿದ್ದ ಮಂಕು ಶ್ಯಾಮನಿಗೆ ತಿಳಿಯದೆ ಇರಲಿಲ್ಲ. ಆದರೆ ವಡ್ಯಾಣದ ಹಳ್ಳಿಯನ್ನು ಬಿಟ್ಟು ಬೆಂಗಳೂರಿಗೆ ಹೋದನಂತರ ಎಲ್ಲವೂ ಸರಿಹೋಗುವುದೆಂದು ಅವನು ತಿಳಿದಿದ್ದನು. ಪರೀಕ್ಷೆಯ ಫಲಿತಾಂಶಗಳು ಪ್ರಕಟವಾಗಿ ಸುದ್ದಿಯು ಹಳ್ಳಿಗೆ ಬಂದಾಗ ಮಾಧು ಏನೂ ಉತ್ಸಾಹವನ್ನು ತೋರಿಸಲೇ ಇಲ್ಲ. ಉದಾಸೀನನಾಗಿಯೇ ಇದ್ದನು. ಶ್ಯಾನುನು ಬೆಂಗಳೂರಿಗೆ ಹೊರಟಾಗಲೂ ಮಾಧುವು ಹೊರಡಲಿಲ್ಲ. “ಇನ್ನೂ ಕೆಲವು ಕಾಲ ಇಲ್ಲೇ ಇರುತ್ತೇನೆ” ಎಂದನು. ಶ್ಯಾಮನು ವಿಧಿಯಿಲ್ಲದೆ ತಾನೊಬ್ಬನೇ ಬೆಂಗಳೂರಿಗೆ ಹೋದನು. ಅವನು ಹೊರಟ ಮಾರನೇ ದಿನ ಮಾಧುವೂ ಶ್ಯಾಮನ ಮನೆಯನ್ನು ಬಿಟ್ಟು ಲಕ್ಷ್ಮಿಯ ಮನೆಗೇ ಹೋದನು.

ಬೆಂಗಳೂರಿನಿಂದ ಶ್ಯಾಮನೂ, ಭಾಸ್ಕರರಾಯರೂ ಮಾಧುವಿಗೆ ಅನೇಕ ಕಾಗದಗಳನ್ನು ಬರೆದರು. ಕೊನೆಯಲ್ಲಿ ಮಾಧುವಿಗೆ ಪ್ರೊಬೆಶನರಿ ಅಸಿಸ್ಟಂಟ್ ಕಮಿಷನರ್ ಆರ್ಡರ್ ಬಂದಿತು. ಆಗಲೂ ಮಾಧುವು ಆ ಕಾಗದಕ್ಕೆ ಲಕ್ಷ್ಯ ಮಾಡಲಿಲ್ಲ. ಕೊನೆಯಲ್ಲಿ ಒಂದು ದಿನ ಶ್ಯಾಮನೂ ಭಾಸ್ಕರರಾಯರೂ ಮತ್ತೆ ಮಾಧುವನ್ನು ನೋಡಲು ವಡ್ಯಾಣದ ಹಳ್ಳಿಗೆ ಬಂದರು.

ಅವರು ಬಂದಾಗ ಸುಮಾರು ಮಧ್ಯಾಹ್ನ೧೨ ಗಂಟೆ ಆಗಿತ್ತು. ಆದರೂ ಸೂರ್ಯನ ಕಾವು ಬಹಳ ಜೋರಾಗಿರಲಿಲ್ಲ. ಮಾಧುವು ಲಕ್ಷ್ಮಿಯ ಮನೆಯಲ್ಲಿ ಇಲ್ಲದುದನ್ನು ಕಂಡು ಅವನ ತಂದೆಯೂ ಶ್ಯಾಮನೂ ಅವನನ್ನು ಹುಡುಕಿಕೊಂಡು ಹೊಲದ ಬಳಿಗೆ ಬಂದಿದ್ದರು. ಮಾಧುವು ಹೊಲವನ್ನು ಉಳುತ್ತಿರುವುದು ಅವರಿಗೆ ದೂರದಿಂದಲೇ ಕಾಣಿಸಿತು. ಹತ್ತಿರಕ್ಕೆ ಬಂದಾಗ ಮಾಧುವು ತಲೆಗೆ ಲಪ್ಪಟೆಯನ್ನು ಸುತ್ತಿರುವುದೂ, ಅವನ ಮುಖದಲ್ಲಿ ಬೆವರಿನ ಹನಿಗಳು ಮುತ್ತಾಗುತ್ತಿರುವುದೂ, ಅವನ ಗಡ್ಡ ಮೀಸೆಗಳು ಬೆಳೆದಿರುವುದೂ ಕಾಣಿಸಿದುವು. ಕೆನ್ನೆಯನ್ನು ಗಾಜಿನಂತೆ ನಯವಾಗಿ ನಿತ್ಯಾ ಕ್ಷೌರಮಾಡಿಕೊಳ್ಳುತ್ತಿದ್ದ ಮಾಧು ಹೀಗೆ ಗಡ್ಡ ಬೆಳೆಸಿರುವುದನ್ನು ನೋಡಿ ಅವನ ತಂದೆಗೂ ಸ್ನೇಹಿತನಿಗೂ ಆಶ್ಚರ್ಯವಾಯಿತು. ಮಾಧು, ಒಳ್ಳೆಯ ಅನುಭವಶಾಲಿಯಂತೆ ಸರಾಗವಾಗಿ ಉಳುತ್ತಿದ್ದನು. ಶ್ಯಾಮನು ತಾನೂ ಉಳಬೇಕೆಂದು ಪ್ರಯತ್ನಿಸಿ ಪೂರ್ಣವಾಗಿ ವಿಫಲನಾದನು.

ಬದುವಿನಲ್ಲಿದ್ದ ಹೊಂಗೆ ಮರದ ನೆರಳಿನಲ್ಲಿ ಶ್ಯಾಮನೂ, ಮಾಧುವಿನ ತಂದೆಯು ಕುಳಿತರು. ಮಾಧು "ಇದು ಎರಡು ಸಾಲು ಹೊಡೆದು ಬರುತ್ತೇನೆ" ಎಂದು "ಅರ್ರ್ರ್ರ್ರ" ಎಂದನು. ಅಷ್ಟು ಹೊತ್ತಿಗೆ ಲಕ್ಷ್ಮಿಯು ದೂರದಲ್ಲಿ ತಲೆಯ ಮೇಲೆ ಕುಕ್ಕೆಯನ್ನು ಹೊತ್ತುಕೊಂಡು ಕೈಯಲ್ಲಿ ಸೂರ್ಯನ ಮರಿಯಂತೆ ಬೆಳಗುತ್ತಿದ್ದ ಒಂದು ತಾಮ್ರದ ಚೆಂಬನ್ನೂ ಹಿಡಿದುಕೊಂಡು ಬರುತ್ತಿರುವುದು ಕಂಡಿತು. ಲಕ್ಷ್ಮಿಯು ಹಾರುತ್ತ ತೇಲುತ್ತಾ ಬಳುಕುತ್ತಾ ಹೊಂಗೆ ಮರದ ಬಳಿಗೆ ಬಂದಳು. ಅವಳ ಚೆಂದವನ್ನು ಶ್ಯಾಮ, ಹಿಂದೆ ಕಂಡಿದ್ದನಾದರೂ ಇಂದು ಅವಳು ತೋರಿದಷ್ಟು ಸುಂದರಿಯಾಗಿ ಯಾವಾಗಲೂ ಅವನ ಕಣ್ಣಿಗೆ ಕಂಡಿರಲಿಲ್ಲ. ಶ್ಯಾಮನ ಕಣ್ಣಿಗೆ ಅವಳು ವನದೇವತೆಯಾಗಿ, ಗಂಧರ್ವಕನ್ನಿಕೆಯಾಗಿ ಕಂಡಳು. ಇಂಥವಳಿಗಾಗಿ ಸ್ವರ್ಗವನ್ನೂ ಕೂಡ ಬಿಡುವುದು ಸಾಧ್ಯವೆಂದು ಒಂದು ಗಳಿಗೆ ಅವನಿಗೆ ತೋರಿತು. "ಸದ್ಯ ಇವಳು ಮಾಧುವಿಗೆ ಒಲಿದಿದ್ದಾಳೆ. ಇಲ್ಲದಿದ್ದರೆ ನನ್ನ ಗತಿ ಏನಾಗುತ್ತಿತ್ತೊ" ಎಂದು ಅವನು ಅಂದುಕೊಂಡನು. ಲಕ್ಷ್ಮಿಯು ದೂರದಿಂದ ಬರುವಾಗಲೇ ಮರದ ಕೆಳಗಿದ್ದವರನ್ನು ನೋಡಿ, ನಿಧಾನವಾಗಿ ಬಂದು ತನ್ನ ಕುಕ್ಕೆಯನ್ನು ನೆಲದ ಮೇಲಿಟ್ಟು ದೂರದಲ್ಲಿ ನಿಂತುಕೊಂಡಳು. ಮಾಧುವೂ ಆರನ್ನು (ನೇಗಿಲನ್ನೂ ಎತ್ತನ್ನೂ) ನಿಲ್ಲಿಸಿ ಶ್ಯಾಮನೂ ತನ್ನ ತಂದೆಯೂ ಕುಳಿತಿದ್ದ ಸ್ಥಳಕ್ಕೆ ಬಂದನು.

ಮೊದಲೇ ಗೊತ್ತಾಗಿದ್ದಂತೆ ಶ್ಯಾಮನೇ ಮಾತುಗಳನ್ನು ಪ್ರಾರಂಭಿಸಿದನು. ಮಾಧುವಿನ ತಂದೆ ಯಾವ ಮಾತನ್ನೂ ಆಡಲೇ ಇಲ್ಲ. ಶ್ಯಾಮನು "ನೋಡು ಸಿವಿಲ್ ಸರ್ವಿಸ್ ಮಾಡಿ ಇದಾವ ಹಣೆಬರಹ? ನಿನಗೆ ಮೊದಲನೆ ರ್‍ಯಾಂಕ್ ಬಂದಿದೆ. ನಿನ್ನ ಮನೆಯವರೆಲ್ಲಾ ಸದ್ಯ ನೀನು ಬಂದರೆ ಸಾಕು ಅಂತ ಕಾದಿದಾರೆ. ಮಣಿ ಕಾದಿದಾಳೆ. ನೀನು ಮೇಧಾವಿ. ಮುಂದೆ ಡೆಪುಟಿ ಕಮಿಶನರ್, ಮಿನಿಸ್ಟರ್ ದಿವಾನ್ ಆಗುವುದರಲ್ಲಿ ಸಂದೇಹವಿಲ್ಲ. ನೀನು ಓದಿ ಪ್ಯಾಸು ಮಾಡಿದುದೇನು? ಈಗ ನೀನು ಮಾಡುತ್ತಿರುವುದೇನು? ಈ ಉಳುವುದನ್ನು ಕಲಿಯುವುದಕ್ಕಾಗಿಯೇ ನೀನು ಇಷ್ಟು ದಿನ ಇಂಗ್ಲಿಷ್ ಓದಿ ರ್‍ಯಾಂಕ್ ಪಡೆದುದು? ಹೇಗಾದರೂ ಆಗಲಿ, ಈಗ ಬಂದಿರೋ ಅಧಿಕಾರ ತಕೋ, ಬೆಂಗಳೂರಿಗೆ ಹೋಗೋಣ ನಡಿ" ಎಂದನು. ಮಾಧುವು ಒಂದು ಗಳಿಗೆ ಸುಮ್ಮನಿದ್ದು ಅನಂತರ "ಶ್ಯಾಮ, ನೀನು ಇಲ್ಲಿಂದ ಹೋಗು. ನಾನು ಇಲ್ಲಿ ಸುಖವಾಗಿದ್ದೇನೆ. ನನಗೆ ಇದಕ್ಕಿಂತ ಬೇರೆ ಏನೂ ಬೇಕಿಲ್ಲ." ಎಂದನು. ಶ್ಯಾಮನು "ನೀನು ಹೇಳುತ್ತಿದ್ದೆಯಲ್ಲ—ಅಧಿಕಾರಿಯಾಗಿ ಹಾಗಿರಬೇಕು, ಹೀಗಿರಬೇಕು—ಎಂದು. ಆ ಆಸೆಯೆಲ್ಲಾ ಎಲ್ಲಿ?" ಎಂದನು. ಮಾಧುವು "ಶ್ಯಾಮ ಅದೆಲ್ಲಾ ನಿನಗೇ ಬಿಟ್ಟಿದ್ದೇನೆ. ಅಧಿಕಾರ, ದರ್ಪ, ಅದಕ್ಕೆ ಸೇರಿದ ಕುತಂತ್ರ, ಅದರ ಬೆನ್ನು ಹತ್ತಿದ ಗುಲಾಮಗಿರಿ ಎಲ್ಲಾ

ನಿನಗೇ ಇರಲಿ. ನನಗೆ ಡೆಪುಟಿ ಕಮಿಶನರೂ ಬೇಡ. ಮಿನಿಸ್ಟರ್‌ಗಿರಿಯೂ ಬೇಡ. ರಾಜಸೇವಾಸಕ್ತನೂ ಬೇಡ. ರಾವಬಹದ್ದೂರನೂ ಬೇಡ. ಇದೆಲ್ಲವೂ ನಿನಗೆ ದೊರೆತರೂ ನೀನು ಖಂಡಿತ ನನ್ನಷ್ಟು ಸುಖಿಯಾಗಿರಲಾರೆ. ಮನುಷ್ಯನಿಗೆ ಬೇಕಾದುದು ಸುಖ, ಶಾಂತಿ. ಅದು ಇಲ್ಲಿ ನನಗೆ ಇದೆ. ಅದು ದೊರೆತಮೇಲೆ ಇನ್ನೇನು ಬೇಕು? ಸದ್ಯ ದೇವರು ನನ್ನನ್ನು ಅಧಿಕಾರದ ಕೂಪದಲ್ಲಿ ಹಾಕದೆ ಪಾರುಮಾಡಿದ. ಈಗ ನೋಡು. ೩-೪ ಎಕರೆ ಜಮೀನು ಮಾಡಿದ್ದೇನೆ. ೨-೩ ಹಸುಗಳನ್ನಿಟ್ಟಿದ್ದೇನೆ. ನನ್ನ ದುಡುಮೆಯಿಂದ ನಾನು ತಿನ್ನುತ್ತೇನೆ. ಹೆಂಡವನ್ನು ಕದ್ದು ಮಾರುತ್ತಿದ್ದ ಈ ಸಂಸಾರವನ್ನು ದಾರಿಗೆ ತಂದೆ. ಇಲ್ಲಿ ಯಾರ ಹಂಗೂ ಇಲ್ಲ; ಯಾರ ಭಯವೂ ಇಲ್ಲ. ಯಾರ ದಾಕ್ಷಿಣ್ಯವೂ ಇಲ್ಲ. ಯಾರಿಗಾಗಿಯೂ ಯಾವ ವೇಷವನ್ನೂ ಬಾಹ್ಯನಟನೆಯನ್ನೂ ಅನುಸರಿಸಬೇಕಾದುದಿಲ್ಲ. ಯಾರಿಗೂ ನಮಸ್ಕರಿಸಬೇಕಾದುದಿಲ್ಲ. ಯಾರ ನಮಸ್ಕಾರವನ್ನೂ ಸ್ವೀಕರಿಸಬೇಕಾದುದಿಲ್ಲ. ಅಲ್ಲಿ ನೋಡು ಆ ಎತ್ತು ಹೇಗೆ ಸ್ವೇಚ್ಛೆಯಿಂದ ಮೇಯುತ್ತಿದೆ. ನಾನೂ ಹಾಗೇ ಇದ್ದೇನೆ. ನನ್ನ ಜೀವ ಪೂರ್ಣವಾಗಿದೆ. ನಿಮ್ಮ ನಗರ, ನಿಮ್ಮ ನಡವಳಿಕೆ, ನಿಮ್ಮ ಕಾತರತೆ, ನಿಮ್ಮ ಜೀವದ ಕೃತಕತೆ ಇವುಗಳನ್ನು ನಾನೂ ಅನುಭವಿಸಿ ಸಾಕಾಗಿ ಈ ಭೂಮಿ, ಈ ಬಯಲು, ಈ ಕಾಡು, ಈ ನದಿ, ಈ ಆಕಾಶ, ಈ ಮೋಡಗಳು, ಈ ಶಾಂತಿ ಇವುಗಳ ಮಡಲಿನಲ್ಲಿ ಆಶ್ರಯವನ್ನು ಹೊಂದಿದ್ದೇನೆ." ಎಂದನು. ಶ್ಯಾಮನು ಲಕ್ಷ್ಮಿಯ ಕಡೆಗೆ ಹುಬ್ಬು ಮಾಡಿ "ಅವಳೋ!" ಎಂದನು. ಮಾಧುವು "ಅವಳೇ ನನ್ನ ಜೀವದ ಸಂಗಾತಿ. ಅವಳ ಹೆಸರು ಹೇಳಿದರೇ ನನ್ನ ಹೃದಯ ಜೋರಾಗಿ ಮಿಡಿಯುತ್ತದೆ. ಅವಳನ್ನು ಮದುವೆಯಾಗುತ್ತೇನೆ." ಎಂದನು. ಶ್ಯಾಮನು "ಆಮೇಲೆ ಮಕ್ಕಳ ಗತಿ?" ಎಂದನು ಮಾಧುವ "ನೋಡಿದೆಯ, ಆಗಲೇ ಪಟ್ಟಣದ ಲೆಕ್ಕಾಚಾರ ಇಲ್ಲಿ ತೆಗೆದೆ. ಈಗಿನ ಸುಖದ ಒಂದು ದಿನಕ್ಕೆ ಮುಂದಲ ನೂರು ವರುಷವನ್ನೇ ಬೇಕಾದರೂ ಬಲಿ ಕೊಡಬಲ್ಲೆ" ಎಂದನು.

ಮಾತನಾಡಬಾರದೆಂದು ನಿಶ್ಚಯಿಸಿದ್ದರೂ ತಡೆಯಲಾರದೆ ಭಾಸ್ಕರರಾಯರು "ಮೂರ್ಖ! ನಿನಗೆ ದೇವರು ಕೂಡ ಇಲ್ಲವೆ?" ಎಂದರು. ಮಾಧುವು ಕೋಪಿಸಿಕೊಳ್ಳದೆ ಲಕ್ಷ್ಮಿಯನ್ನೂ, ವಿಸ್ತಾರವಾಗಿ ಹರಡಿದ್ದ ಭೂಮಿಯನ್ನೂ ತೋರಿಸಿ "ಇದೇ ದೇವರು; ಇದೇ ದೇವಾಲಯ" ಎಂದನು. ಭಾಸ್ಕರರಾಯರು "ನಿನ್ನನ್ನು ಡಿಸ್ ಇನ್‌ಹೆರಿಟ್ (Disinherit) ಮಾಡುತ್ತೇನೆ" ಎಂದು ಎದ್ದರು.

ನಾಲ್ಕು ಮಾರು ಹೋದನಂತರ ಶ್ಯಾಮನು ಹಿಂದಿರುಗಿ ನೋಡಿದನು. ಮಾಧುವಿಗೆ ಲಕ್ಷ್ಮಿಯು ಬಡಿಸುತ್ತಿದ್ದಳು. ಮಾಧುವು ಏನೂ ನಡೆಯದಿದ್ದವನಂತೆ ಊಟಮಾಡುತ್ತಿದ್ದನು. ದೂರದಲ್ಲಿ ಎರಡು ಹುಲ್ಲೆ ಕರುಗಳು ನೆಗೆದಾಡುತ್ತಿದ್ದುವು. ಒಂದು ನವಿಲು ಮಾರುದ್ದದ ಬಾಲವನ್ನು ಬಣ್ಣದ ಛತ್ರಿಯಾಗಿ ಮಾಡಿಕೊಂಡು ನಲಿದಾಡುತ್ತಿದ್ದಿತು. ಹಸುಗಳೆರಡು ಹೊಂಗೆ ಮರದ ನೆರಳಿನಲ್ಲಿ ಮಾಧುವಿನ ಸಮೀಪದಲ್ಲಿ ಬಂದು ಮೆಲುಕು ಹಾಕುತ್ತಾ ಮಲಗಿದುವು. ಎಲ್ಲೋ ಒಂದೆರಡು ಮಧ್ಯಾನ್ಹದ ಹಕ್ಕಿಗಳು ಆಗಿಂದಾಗ್ಗೆ ಕೂಗುತ್ತಿದ್ದುವು. ಲಕ್ಷ್ಮಿಯ ಸೆರಗು ಗಾಳಿಪಟದಂತೆ ಹಾರಾಡುತ್ತಿದ್ದಿತು. ಶ್ಯಾಮನು "ಇವರೂ ಪ್ರಕೃತಿಯಲ್ಲಿ ಸೇರಿ ಈ ನದಿ ಈ ಕಾಡು ಈ ನವಿಲು ಈ ಜಿಂಕೆಗಳಂತೆ ಅದರ ಭಾಗವೇ ಆಗಿದ್ದಾರೆ?" ಎಂದುಕೊಂಡನು.

# ಪುಟ್ಟ ಮಲ್ಲಿಗೆ

ನಮ್ಮೂರ ಒಕ್ಕಲಿಗರ ಪೈಕಿ ನಿಂಗನು ನಮ್ಮೂರಿಗೆ ಬಾಲಚಾರನಂತೆ (scout) ಇದ್ದನು. ಅವನಿಗೆ ಬಾರದ ಕೆಲಸ ಯಾವುದೂ ಇರಲಿಲ್ಲ. ಅವನು ಮನೆಗಳನ್ನು ಕಟ್ಟುತ್ತಿದ್ದನು. ಬಡಗಿಯ ಕೆಲಸವನ್ನು ಮಾಡುತ್ತಿದ್ದನು. ನೇಗಿಲುಗಳನ್ನು ಕೆತ್ತಿ ಸರಿಮಾಡುತ್ತಿದ್ದನು. ನಿಂಗನು ಎಲ್ಲಾ ಕೆಲಸಗಳನ್ನೂ ಬಲ್ಲವನಾಗಿದ್ದನು. ಆದರೆ ಒಂದನ್ನೂ ಹಿಡಿದು ಮಾಡುತ್ತಿರಲಿಲ್ಲ. ನಾಯಿ, ಕುದುರೆ, ಹಸು, ಎಮ್ಮೆಗಳಿಗೆ ರೋಗ ಬಂದರೆ ಅವುಗಳನ್ನು ಗುಣಪಡಿಸುವುದೂ ಅವನಿಗೆ ತಿಳಿದಿದ್ದಿತು. ಅವನು ಮನುಷ್ಯರಿಗೂ ಔಷಧಿಯನ್ನು ಕೊಡುತ್ತಿದ್ದನು; ಒಂದು ಸಲ ಒಂದು ಬೊಕ್ಕೆಯನ್ನು ಚಾಕುವಿನಿಂದ ಕುಯ್ದು ಶಸ್ತ್ರಚಿಕಿತ್ಸೆ ಮಾಡುವವರೆಗೆ ಅವನ ವೈದ್ಯ ಪ್ರಯೋಗವು ಮುಂದುವರಿದಿದ್ದಿತು.

ನಿಂಗನು ಬಹಳ ಬುದ್ಧಿವಂತನಾಗಿ ಗಟ್ಟಿಗನಾಗಿದ್ದುದರಿಂದ ಜನರಿಗೆಲ್ಲಾ ಅವನಲ್ಲಿ ವಿಶೇಷ ಪ್ರೀತಿಯಿದ್ದಿತು. ಅವನು ಬಹಳ ವಿನೋದಪ್ರಿಯನಾಗಿದ್ದನು. ಮೂರು ವರ್ಷಗಳ ಕೆಳಗೆ, ಅವನು ಸತ್ತ ರೀತಿಯೂ ಅವನ ಮಹಿಮೆಯನ್ನು ವಿಶೇಷವಾಗಿ ಹೆಚ್ಚಿಸಿತ್ತು. ಆಗ ನಿಂಗನಿಗೆ ಜ್ವರವು ಬಂದಿದ್ದರೂ ಅವನು ನದಿಯ ಪ್ರವಾಹದಲ್ಲಿ ತೇಲಿಹೋಗುತ್ತಿದ್ದ ನಮ್ಮೂರ ಉಪಾದ್ರ ಮಗನನ್ನು ಈಜಿ ಬದುಕಿಸಿದುದರಿಂದ ವಿಷಮಶೀತಜ್ವರವುಂಟಾಗಿ ಅದರ ಫಲವಾಗಿ ಸತ್ತು ಹೋದನು. ಅವನ ಮರಣದಿಂದ ನಮ್ಮೂರೇ ಬಿಂ ಎನ್ನುತ್ತಿದೆ. ಈಗ ಅವನ ಸ್ಥಾನಕ್ಕೆ ಸರಿಯಾದವರು ನಮ್ಮೂರಿನಲ್ಲಿ ಯಾರೂ ಇಲ್ಲ. ಯುವಕರೇನೋ ಕರಿಯನನ್ನು ನಿಂಗನ ಸ್ಥಾನಕ್ಕೆ ಏರಿಸಲು ಪ್ರಯತ್ನಿಸುತ್ತಿದ್ದಾರೆ. ಆದರೆ ಕರಿಯನಿಗೆ ಏನೂ ಗೊತ್ತಿಲ್ಲ. ಅವನು ಯಕ್ಷಗಾನದ ಹಾಡುಗಳನ್ನು ಹೇಳುತ್ತಾನೆ, ಬೇಟೆಯಾಡುತ್ತಾನೆ, ಒಳ್ಳೆಯ ಕತೆಗಳನ್ನು ಹೇಳುತ್ತಾನೆ, ಹಾಡುಗಳನ್ನು ಕಟ್ಟುತ್ತಾನೆ. ಇತರರನ್ನು ಅನುಕರಣಮಾಡಿ ಹಾಸ್ಯ ಮಾಡುತ್ತಾನೆ. ಎಲ್ಲಾ ನಿಶ್ಚಯ. ಆದರೆ ನಿಂಗನ ಯೋಗ್ಯತೆಗೆ ಹೋಲಿಸಿದರೆ ಇದೆಲ್ಲಾ ಯಾವ ಕಡೆಗೆ? ಕರಿಯನು ಯಾವ ಹುಚ್ಚನಾಯಿಯ ಕಾಲನ್ನು ಮುರಿದಿದ್ದಾನೆ? ಯಾವ ಹಂದಿಯನ್ನು ಕೊಂದಿ ದ್ದಾನೆ? ನದಿಯನ್ನು ಪ್ರವಾಹದ ಕಾಲದಲ್ಲಿ ಎಲ್ಲಿ ಈಜಿದ್ದಾನೆ? ಯಾರ ಗಾಯವನ್ನು ಚಾಕುವಿನಿಂದ ಕುಯ್ದು ಶಸ್ತ್ರಚಿಕಿತ್ಸೆ ಮಾಡಿದ್ದಾನೆ ? ನದಿಯ ಪ್ರವಾಹದಲ್ಲಿ ಯಾವ ಮಗುವನ್ನು ಬದುಕಿಸಿದ್ದಾನೆ? ಇಲ್ಲ ಇಲ್ಲ. ಕರಿಯನು ನಿಂಗನಿಗೆ ಎಂದಿಗೂ ಸಮವಾಗಲಾರನು.

ನಿಂಗನ ಮರಣದಿಂದ ನಮ್ಮ ಊರಿನಲ್ಲಿ ಭಾರಿ ಅರಕೆಯುಂಟಾಗಿದೆ. ನಿಂಗನ ಮನೆಯಲ್ಲಂತೂ ಆ ಅರಕೆ ಬಹಳ ತಾಪತ್ರಯವನ್ನು ಉಂಟು ಮಾಡಿದೆ. ನಿಂಗನು ಸತ್ತಾಗ ಅವನ ಹೆಂಡತಿಯು ಎರಡು ಹುಡುಗಿಯರ ಜತೆಯಲ್ಲಿ ಅನಾಥೆಯಾದಳು. ನಿಂಗನ ಮೊದಲನೆಯ ಹುಡುಗಿ ಪುಟ್ಟ ಮಲ್ಲಿಗೆಗೆ ಅವಳ ತಂದೆಯು ಸಾಯುವಾಗ ಹದಿನೇಳು ವರ್ಷ, ಎರಡನೆಯ ಹುಡುಗಿಗೆ ಹದಿನಾಲ್ಕು ವಯಸ್ಸು. ನಿಂಗನು ಸತ್ತಾಗ ಮೊದಮೊದಲು ಅವನ ಮನೆಯವರು ಬಹಳ ಕಷ್ಟವನ್ನು ಅನುಭವಿಸಬೇಕಾಯಿತು. ಆದರೆ ಆ ಕಷ್ಟವನ್ನೆಲ್ಲಾ ನಗುನಗುತ್ತಾ ಅನುಭವಿಸಿದರು. ಗಂಡಸರ ಸಹಾಯವಿಲ್ಲದೆ ಸ್ವತಂತ್ರವಾಗಿ ಜೀವನವನ್ನು ಸಂಪಾದಿಸಲು ಅವರು ಪಡುತ್ತಿದ್ದ ಕಷ್ಟವೂ ಹಿಟ್ಟಿಗಾಗಿ ಇತರರಿಗೆ ತಲೆ ತಗ್ಗಿಸಕೂಡದೆಂಬ ನಿಂಗನ ಹೆಂಡತಿಯ ಹೆಮ್ಮೆಯೂ ಜನರಿಗೆ ಅವರಲ್ಲಿ ಆದರವನ್ನೂ ಗೌರವವನ್ನೂ ಉಂಟುಮಾಡಿದುವು. ನಿಂಗನ ಹೆಂಡತಿ ಆರಂಭದಲ್ಲಿ ಬಹಳ ಗಟ್ಟಿಗಳಾಗಿದ್ದಳು. ನಿಂಗನ ಮನೆಯಲ್ಲಿ ನಿಂಗನಿಲ್ಲದಿದ್ದರೂ ಭತ್ತ, ರಾಗಿ ತುಂಬಿರುತ್ತಿದ್ದಿತು. ಕೊಟ್ಟಿಗೆಯಲ್ಲಿ ಎಮ್ಮೆಗಳೂ ಎತ್ತುಗಳೂ ಹಸುಗಳೂ ಆನಂದದಿಂದ ಕೊಬ್ಬಿ ಬೆಳೆದು ಹುಲ್ಲು ಮೇಯುತ್ತಿದ್ದುವು. ಅವನ ಮನೆಯ ಕೋಳಿಗಳೂ ಹಂದಿಗಳೂ ದಿನದಿನಕ್ಕೆ ಉಬ್ಬಿ ಬೆಳೆಯುತ್ತಿದ್ದುವು. ನಿಂಗನ ಹೆಂಡತಿಗೆ ತನ್ನ ಮನೆಯ ದನಗಳನ್ನೂ ಹಂದಿಗಳನ್ನೂ ಕಂಡರೆ ವಿಶೇಷ ಮಮತೆಯಿದ್ದಿತು. ಆದರೆ ಅವಳ ಮುಖ್ಯವಾದ ಆನಂದವು ಪುಟ್ಟಮಲ್ಲಿಗೆಯೇ ಆಗಿದ್ದಳು.

ಇಲ್ಲಿ ನಮ್ಮ ಹಳ್ಳಿಗಾಡಿನ ಹುಡುಗ ಹುಡುಗಿಯರ ಬೆಳವಣಿಗೆಯನ್ನು ಕುರಿತು ಎರಡು ಮಾತನ್ನು ಹೇಳಬೇಕು. ನನಗೆ ನನ್ನ ಹಳ್ಳಿಯಲ್ಲಿ ಆರು ವರ್ಷದಿಂದ ಎಂಭತ್ತು ವರ್ಷದವರೆಗೆ ಇರುವ ಗಂಡಸರೆಲ್ಲಾ ಚೆನ್ನಾಗಿ ಗೊತ್ತು. ಆದರೆ ನಮ್ಮ ಹಳ್ಳಿಯ ಎಲ್ಲಾ ಹೆಂಗಸರನ್ನೂ ನಾನು ಬಲ್ಲೆನೆಂದು ಅಷ್ಟೇ ಧೈರ್ಯವಾಗಿ ಹೇಳಲಾರೆ. ಅವರು ಯಾವಾಗಲೂ ಸಂಸಾರದ ತಾಪತ್ರಯದಲ್ಲಿ ಮುಳುಗಿರುತ್ತಾರೆ. ಆದರೆ ಹುಡುಗಿಯರನ್ನು ನೋಡುವುದು ಅಪರೂಪವಲ್ಲ. ಅವರು ಬಿಸಿಲಿನಲ್ಲಿ ಒಣಗುತ್ತಾ ನೀರಿನಲ್ಲಿ ತೊಳೆದಾಡುತ್ತಾ ಧೂಳಿನಲ್ಲಿ ಹೊರಳಾಡುತ್ತಾ ಗಂಡುಹುಡುಗರಿಗಿಂತ ಹೆಚ್ಚು ಶಕ್ತರಾಗಿ, ಕೊಳಕರಾಗಿ, ಮಳೆ ಬಿಸಿಲು ಗಾಳಿ ಇವುಗಳಿಗೆ ಹೆದರದೆ ಇರುವುದರಲ್ಲಿ ಗಂಡು ಹುಡುಗರನ್ನೂ ವಿಚಾರಿಸಿದ್ದಾರೆ. ಪದೇ ಪದೇ ಕಣ್ಣಿಗೆ ಬೀಳುವುದರಿಂದ ಯಾವ ಯಾವ ಹುಡುಗಿ ಯಾರ ಯಾರ ಮಗಳೆಂಬುದು ತಿಳಿಯಲೇಬೇಕು. ಆದರೆ ಬೆಳವಣಿಗೆ ಎಂಬುದಿದೆಯಲ್ಲಾ! ಗಂಡುಹುಡುಗರೂ ಬೆಳೆಯುತ್ತಾರೆ; ಹೆಣ್ಣು ಹುಡುಗರೂ ಬೆಳೆಯುತ್ತಾರೆ; ನಿಶ್ಚಯ. ಆದರೆ ಹೆಣ್ಣು

ಹುಡುಗಿಯರು ಕ್ಷಣಕ್ಷಣದಲ್ಲಿಯೂ ಬದಲಾಯಿಸುತ್ತಾರೆ. ಅವರ ಆ ಬದಲಾವಣೆಯು ನಮಗೆ ಆಶ್ಚರ್ಯವನ್ನೂ ಮಂಕನ್ನೂ ಉಂಟು ಮಾಡುತ್ತದೆ.

ಹಳ್ಳಿಯಲ್ಲಿ ಹುಡುಗಿ ಮೊದಲು ನಮ್ಮ ಕಣ್ಣಿಗೆ ಬೀಳುವುದು ಅಂಬೆಗಾಲಿಕ್ಕುತ್ತಾ ಧೂಳಿನಲ್ಲಿ ತೆವಳುತ್ತಿರುವಾಗ. ಮನೆ ಕೆಲಸದಲ್ಲಿ ತೊಡಗಿರುವ ತಾಯಿಯೋ ಅಕ್ಕನೋ ಅದನ್ನು ನೆಲದ ಮೇಲೆ ಕೆಡವಿ ಹೋಗಿರುತ್ತಾಳೆ. ಆರೋಗ್ಯವೇ ಮೂರ್ತಿವೆತ್ತಂತಿರುವ ಆ ಕೂಸು ನಿಲ್ಲುವ ಮತ್ತು ನಡೆಯುವ ಸಾಧಕಗಳನ್ನು ಮಾಡಲು ಪ್ರಯತ್ನ ಪಡುತ್ತಾ ಕೈಕಾಲುಗಳನ್ನು ನೀಡಿಕೊಂಡು ಮಣ್ಣನ್ನು ಕೆರೆಯುತ್ತಾ ನಗುತ್ತಾ ಕಿರಿಚುತ್ತಾ ಚೇಷ್ಟೆ ಮಾಡುತ್ತಿರುತ್ತದೆ. ಅಥವಾ ಅಂಗಿಯ ಮೇಲೆಲ್ಲಾ ಜೊಲ್ಲನ್ನು ಸುರಿಸಿಕೊಂಡು ಅದರ ಮೇಲೆ ಧೂಳಿನ ಅಭಿಷೇಕವನ್ನು ಮಾಡಿಕೊಳ್ಳುತ್ತಿರುತ್ತದೆ. ಆಗ ಅದು ಹೆಣ್ಣೋ ಗಂಡೋ ಎಂಬುದೇ ಗೊತ್ತಾಗುವುದಿಲ್ಲ. ಯಾಕೆಂದರೆ, ಹಳ್ಳಿಯ ಹೆಣ್ಣು ಗಂಡುಗಳೆಲ್ಲಾ ಒಂದೇ ಸಮವಾಗಿ ಅಗಲವಾದ ಕಣ್ಣುಗಳುಳ್ಳವುಗಳಾಗಿ, ಗಾಳಿ ಮಳೆ ಬಿಸಿಲಿಗೆ ಬೆಂದ ಮುಖಗಳುಳ್ಳವುಗಳಾಗಿ ಹೆದರಿಕೆ ಎಂಬುದನ್ನೇ ಕಾಣದವುಗಳಾಗಿರುತ್ತವೆ. ಹಳ್ಳಿಯ ಮಕ್ಕಳು ಹೆಣ್ಣೋ ಗಂಡೋ ಎಂಬುದನ್ನು ಮುಖಚರ್ಯೆಯಿಂದಲಾಗಲಿ ಉಡಪಿನಿಂದಲಾಗಿ ಕಂಡುಹಿಡಿಯುವುದು ಕಷ್ಟ. ಹುಡುಗಿಗೆ ಮೂರು-ನಾಲ್ಕು ವಯಸ್ಸಾಗುವ ಕಾಲಕ್ಕೆ ಅದು ಚಿಂದಿ ಬಟ್ಟೆಯನ್ನು ಧರಿಸಿಕೊಂಡು ಊರಲ್ಲೆಲ್ಲಾ ಅಲೆದಾಡುತ್ತದೆ.

ಹುಡುಗಿಗೆ ಆರು ವರ್ಷ ವಯಸ್ಸಾದಾಗ ಅದು ಸ್ವಲ್ಪ ಎತ್ತರವಾಗಿ ಬೆಳೆಯಲು ಪ್ರಾರಂಭಿಸುತ್ತದೆ. ಸಂಸಾರದ ತಾಪತ್ರಯಗಳು ಅವಳಿಗೆ ಆಗಲೇ ಪ್ರಾರಂಭವಾಗುತ್ತವೆ. ಹಳ್ಳಿಯ ಸಂಸಾರದಲ್ಲಿ ಮನೆಯಲ್ಲಿ ಯಾರು ಕೆಲಸ ಮಾಡದೆ ಇದ್ದರೂ ಸಂಸಾರ ನಡೆಯುವುದು ಕಷ್ಟ. ಮಾತನಾಡುವುದಕ್ಕೆ ಕೂಡ ಸರಿಯಾಗಿ ಬಾರದಿರುವ ಮಗುವೂ ಕೂಡ ಒಂದು ಆಡನ್ನೋ ಕುರಿಯನ್ನೋ ಬೆಳಗಿನಿಂದ ಸಂಜೆಯವರೆಗೆ ಮೇಯಿಸಿಕೊಂಡು ಬರುತ್ತದೆ. ಹುಡುಗಿಯು ಹದಿಮೂರು-ಹದಿನಾಲ್ಕು ವಯಸ್ಸಿಗೆ ಬಂದಾಗ ಲಕ್ಷಣವಾಗಿ ಬೆಳೆಯಲು ಪ್ರಾರಂಭಿಸುತ್ತಾಳೆ. ಹಳ್ಳಿಯ ಹೆಂಗಸರು ಸುಂದರಿಯರಾಗಿರುತ್ತಾರೆಂದು ಹೇಳಲಾರೆ. ಸೌಂದರ್ಯಕ್ಕಿಂತ ಅಂಗಾಂಗಗಳಲ್ಲಿ ಸರಿಯಾದ ಬೆಳವಣಿಗೆಯ ಶಕ್ತಿಯ ಒಂದು ವಿಧವಾದ ಗಂಡಸುತನದ ಧಾರ್ಷ್ಟ್ಯವೂ ಅವರಲ್ಲಿ ಇರುತ್ತವೆ. ಜೀವನದ ಯಾವ ಕಷ್ಟವನ್ನಾದರೂ ಎದುರುಗೊಳ್ಳುವ ಶಕ್ತಿಯ ಮನೋಧಾರ್ಢ್ಯವೂ ಬಾಲ್ಯದಿಂದಲೇ ಅವರಲ್ಲಿ ಬೆಳೆಯುತ್ತವೆ. ನಾಳೆ ಏನೋ, ನಾಡಿದ್ದೇನೋ ಎಂಬ ಭಯವೂ ಅನಾರೋಗ್ಯಕರವಾದ ಕಾತರವೂ ಅವರನ್ನು ಎಂದೂ ಸೋಕುವುದಿಲ್ಲ.

"ಸರಳದ (ಶರೀರದ) ಬೆಮ್ರು ಹರಿಸಿ, ಗೇಮೆ ಮಾಡೋರ್ಗೆ ಯಾರ್ದೇನು ಭಯ, ಯಾರ್ದೇನು ಹಂಗು?"

ಸಾಧಾರಣವಾಗಿ ನಮ್ಮ ಹಳ್ಳಿಯ ಒಕ್ಕಲಿಗರ ಹುಡುಗಿಯರು ಹದಿನಾರು, ಹದಿನೇಳು, ಹದಿನೆಂಟು ವಯಸ್ಸಿಗೆ ಮದುವೆಯಾಗುತ್ತಾರೆ. ಆ ವಯಸ್ಸಿನಲ್ಲಿ ಅವರು ಬಹಳ ಚೆಂದಾಗಿ ಕಾಣುತ್ತಾರೆ. ನಿಂಗನ ಮಗಳು ಪುಟ್ಟಮಲ್ಲಿಗೆಗೆ ಆ ವಯಸ್ಸು ಬಂದಿತ್ತು. ಅವಳು "ನೋಡೋಕೆ ಬಲು ವೈನಾಗಿದ್ದಳು." ನಮ್ಮೂರಿನಲ್ಲಿ ಮಾತ್ರವಲ್ಲದೆ ಸುತ್ತಾ ಹನ್ನೆರಡು ಹಳ್ಳಿಯಲ್ಲೂ ಪುಟ್ಟಮಲ್ಲಿಗೆ ಸುಂದರಿ ಎಂದು ತೀರ್ಮಾನವಾಗಿತ್ತು. ಪುಟ್ಟಮಲ್ಲಿಗೆ "ನೋಡೋಕೆ ಕಪ್ಪಾಗಿದ್ದಳು. ದೇಹದ ಬೆಳವಣಿಗೆ ಪುಟ್ಟವಾಗಿತ್ತು. ಕೂತರೆ, ನಿಂತರೆ, ನಡೆದರೆ, ಮಾತನಾಡಿದರೆ ಎಲ್ಲಾ ಗಂಭೀರ. ಹಕ್ಕಿ ಹಂಗೆ ಚಟುವಟಿಕೆ, ಚುರುಕು, ಮೆತ್ತಾನೆ (ಮೃದುವಾದ) ದನಿ, ದೊಡ್ಡ ಕಪ್ಪೆ ಚಿಪ್ಪಿನ ಅಗಲ ಕಣ್ಣು." ಪುಟ್ಟಮಲ್ಲಿಗೆ ಎರಡೇ ರೂಪಾಯಿ ಬಾಳುವ ಕರೇಶಾಲೆ ಉಟ್ಟಿದ್ದರೂ ಬಹಳ ಚೆಲುವೆಯಾಗಿದ್ದಳು.

ಪುಟ್ಟಮಲ್ಲಿಗೆ ಒಳ್ಳೆಯ ಹುಡುಗಿಯಾಗಿದ್ದಳು. ಅವಳು ಉದಾರಿಯೂ ಆಗಿದ್ದಳು. ಬಡವರ ಉದಾರತೆಯು ಅವರಿಗೆ ಯಾವಾಗಲೂ ಭೂಷಣವಾದುದು. ಯಾಕೆಂದರೆ, ಅವರು ತಮಗೆ ಯಾವುದು ಆವಶ್ಯಕವಾದುದೋ ಅದನ್ನೇ ಇತರರಿಗೆ ಕೊಡುತ್ತಾರೆ. ಪುಟ್ಟಮಲ್ಲಿಗೆಯು ತನ್ನ ತೋಟದ ಹೂವುಗಳನ್ನೂ ಹಣ್ಣುಗಳನ್ನೂ ತನಗೆ ಬೇಕಾದವರಿಗೆ ಧಾರಾಳವಾಗಿ ಕೊಡುತ್ತಿದ್ದಳು. ಆ ಹೂವು ಹಣ್ಣುಗಳನ್ನು ಅವಳೇ ಕಷ್ಟಪಟ್ಟು ಬೆಳೆಯುತ್ತಿದ್ದುದರಿಂದ ಅವುಗಳನ್ನು ಕೊಡುವಾಗ ಅವಳ ಕೈ ಹಿಡಿತವಾಗುತ್ತಿರಲಿಲ್ಲ. ಇದರ ಮೇಲೆ ಪುಟ್ಟಮಲ್ಲಿಗೆಯು ಆವಶ್ಯಕವಿದ್ದವರಿಗೆ ದುಡಿದು ಸಹಾಯ ಮಾಡುವುದಕ್ಕೂ ಹಿಂಜರಿಯುತ್ತಿರಲಿಲ್ಲ. ಸ್ತ್ರೀಯರಿಗೆ ಸಹಜವಾದ ಕೆಲಸಗಳಲ್ಲಿ ಅವಳಿಗಿದ್ದ ಚಟುವಟಿಕೆಯ ಜತೆಗೆ ತನ್ನ ತಂದೆ ನಿಂಗನಿಂದ ಅವಳು ಕೆಲವು ಕಸುಬುಗಳನ್ನು ಕಲಿತಿದ್ದಳು. ಅವಳು ಹೊಲಿಯುತ್ತಿದ್ದ ಮನೆಯ ಹಳೆಯ ಬಟ್ಟೆಗಳು ಹೊಸ ಬಟ್ಟೆಗಳಿಗಿಂತ ಚೆನ್ನಾಗಿ ಕಾಣುತ್ತಿದ್ದುವು. ದನಗಳನ್ನೂ ಕುರಿಕೋಳಿಗಳನ್ನೂ ಸಾಕುವುದರಲ್ಲಿ ಪುಟ್ಟಮಲ್ಲಿಗೆ ನಿಸ್ಸೀಮಳಾಗಿದ್ದಳು. ಅವಳ ಮನೆಯಲ್ಲಿ ಹಂದಿಗಳಾಗಲಿ ಕೋಳಿಗಳಾಗಲಿ ಯಾವ ರೋಗದಿಂದಲೂ ( ರೈತರು ಹೇಳುವಂತೆ "ನಸೀಬು ಖೋಟಾ" ಆಗಿ ) ಸಾಯುತ್ತಿರಲಿಲ್ಲ. ಅಂತಹ ಅವಮಾನಕರವಾದ ರೀತಿಯಲ್ಲಿ ಪ್ರಪಂಚವನ್ನು ಬಿಟ್ಟು ಹೋಗುವುದು ಅವುಗಳ ಕನಸಿನಲ್ಲಿಯೂ ಬರುತ್ತಿರಲಿಲ್ಲ. ಅವಳ ಹಂದಿ-ಹುಂಜಗಳು "ಲಡಾಯದ ವೀರರಂತೆ" ಚಾಕುವಿನಿಂದ ಕುಯ್ಯಿಸಿಕೊಂಡು ಆರ್ಭಟಿಸುತ್ತಾ ಸಾಯುತ್ತಿದ್ದುವು.

ಒಕ್ಕಲಿಗರಲ್ಲಿ ಹೆಣ್ಣು ಬ್ರಾಂಹಣರಲ್ಲಿರುವಷ್ಟು ಅಗ್ಗವಾಗಿಲ್ಲ. ಪ್ರತಿಯೊಂದು ಹುಡುಗಿಯಿಂದಲೂ ಹೆಣ್ಣಿನ ತಂದೆಗೆ ಸಂಪಾದನೆಯುಂಟು. ಹುಡುಗಿ ಕಟ್ಟುಮಸ್ತಾಗಿ ಕಾಡುಹೂವಿನಂತೆ ಬೆಳೆದು ಚೆಂದವಾಗಿದ್ದರಂತೂ ತಂದೆಗೆ ಅದು ಚಿನ್ನದಗಣಿಯೇ ಆಗುವುದು. ಹುಡುಗಿಯ ತಂದೆಗೆ ನೂರಾರು ರೂಪಾಯಿ "ತೆರ" ಕೊಟ್ಟ ಹೊರತು ಯಾವ ಗಂಡಿಗೂ ಅವಳು ದೊರೆಯುವಂತೆ ಇಲ್ಲ. ಮದುವೆಯಾದ ಮೇಲೆ ಗಂಡನು ಹೆಂಡತಿಯ ಸಹಾಯದಿಂದ ತನ್ನ ಸಂಪಾದನೆಯನ್ನು ಹೆಚ್ಚಿಸಿಕೊಳ್ಳುತ್ತಾನೆ. ಆ ಹುಡುಗಿಯರು "ತೀರ್ಥ ತೆಗೆದುಕೊಂಡರೆ ಶೀತ, ಮಂಗಳಾರತಿಗೆ ಉಷ್ಣ"ದ ಜಾತಿಗೆ ಸೇರದವರಾದುದರಿಂದ ಗಂಡನೊಂದಿಗೆ ಹೊಲದಲ್ಲಿಯೂ ತೋಟದಲ್ಲಿಯೂ ದುಡಿದು ತಮಗಾಗಿ ಅವನು ತೆತ್ತ ಹಣವನ್ನು ನಾಲ್ಕಾರು ವರ್ಷದಲ್ಲಿ ಸಂಪಾದಿಸಲು ಸಹಾಯಮಾಡುತ್ತಾರೆ. ಗಂಡನು ತನ್ನ ಪಾಡಿಗೆ ತಾನು ಕೆಲಸ ಮಾಡುತ್ತಿರುವುದು, ಹೆಂಡತಿಯು ಸುಖವಾಗಿ ಮನೆಯಲ್ಲಿ ಇರುವುದು ಇದು ಒಕ್ಕಲಿಗರಲ್ಲಿ ಪದ್ಧತಿಯಲ್ಲ. ಹೆಂಡತಿಯು ಕೆಲಸ ಮಾಡದಿದ್ದರೆ ಗಂಡನು ಅವಳನ್ನು "ನಿನ್ಗಾಗಿ ಆರಿಪ್ಪತ್ತು (ಆರು ಇಪ್ಪತ್ತು ಅಂದರೆ ನೂರಿಪ್ಪತ್ತು ರೂಪಾಯಿ) ತೆತ್ತಿಲ್ವೆ, ಗೊಬ್ಬರ ಹೊರೋಕೆ ಬಾ" ಎಂಬುದಾಗಿ ಕರೆಯುತ್ತಾನೆ.

ಯೋಗ್ಯತೆಯಲ್ಲಿ ಪುಟ್ಟಮಲ್ಲಿಗೆಯ ತಂದೆ ನಿಂಗನಿಗೆ ತಾನು ಸಮಾನನೆಂದು ಹೇಳಿಕೊಳ್ಳುತ್ತಿದ್ದ ಕರಿಯನಿಗೆ ಮೂವತ್ತು ವರ್ಷವಾಗಿದ್ದರೂ ಮದುವೆಯಾಗಿರಲಿಲ್ಲ. ಕರಿಯನ ಹತ್ತಿರ ತೆರದ ಹಣ ಇರಲಿಲ್ಲ. ಅವನಿಗೆ ಯಾರೂ ಹೆಣ್ಣು ಕೊಟ್ಟಿರಲಿಲ್ಲ. ಹೊಸಬಿಯನ್ನು[3] ಮದುವೆಯಾಗಬೇಕೆಂದು ಅವನು ಅನೇಕ ಹಂಚಿಕೆಗಳನ್ನು ಮಾಡಿದನು. ಆದರೆ ಹೊಸಬಿ ಅದೊಂದನ್ನೂ ಲಕ್ಷ್ಯಕ್ಕೆ ತಾರದೆ ಮಾದನನ್ನೇ ಮದುವೆಯಾದಳು. ಹೊಸಬಿಯ ಮದುವೆಯಾದನಂತರ ಕರಿಯನು ತನ್ನ ಬಲೆಯನ್ನು ಪುಟ್ಟಮಲ್ಲಿಗೆಯ ಕಡೆಗೆ ಎಸೆಯಲು ಪ್ರಾರಂಭಿಸಿದನು.

ಕರಿಯನನ್ನು ನಮ್ಮೂರಿನವರು "ತಳವಾರ"ನೆಂದು ಕರೆಯುತ್ತಾರೆ. ವಾಸ್ತವವಾಗಿ ಅವನು ನಮ್ಮೂರ ತಳವಾರನಲ್ಲ. ನಮ್ಮ ಊರಿನಲ್ಲಿ ಪೋಲಿ ದನಗಳನ್ನು ಕೂಡಲು ಸರ್ಕಾರಿ ದೊಡ್ಡಿ ಇಲ್ಲ. ಊರಿನ ರೈತರು ದನಗಳನ್ನು ಕಾಯುವುದಕ್ಕೆ ಕರಿಯನನ್ನು ನಿಯಮಿಸಿದ್ದರು. ನಮ್ಮೂರಿನ ರೈತರೂ ಬ್ರಾಹ್ಮಣರೂ ದನಗಳನ್ನು ಹೆಚ್ಚಾಗಿ ಪೋಲಿ ಬಿಡುವುದರಿಂದ ರೈತರು ಆ ದನಗಳನ್ನು

---

[3] ಈ ಲೇಖನದಲ್ಲಿ ಬರುವ ಹೊಸಬಿ, ಮಾದ ಮತ್ತು ನಾಣಿ ಇವರನ್ನು ಕುರಿತು ಹೆಚ್ಚು ವಿಚಾರಗಳನ್ನು "ಗಂಡುಬೀರಿ ಹೊಸಬಿ" ಮತ್ತು "ನಮ್ಮೂರಿನ ರಸಿಕರು" ಎಂಬ ಲೇಖನಗಳಲ್ಲಿ ತಿಳಿಯಬಹುದು.

ಕಾಯುವುದಕ್ಕೆ ಪ್ರತಿ ವರ್ಷವೂ ಒಬ್ಬೊಬ್ಬ “ತಳವಾರ”ನನ್ನು ಗೊತ್ತು ಮಾಡುತ್ತಾರೆ. ನಮ್ಮ ಹಳ್ಳಿಗೆ ಐದಾರು ವರ್ಷಗಳಿಂದಲೂ ಕರಿಯನೇ ತಳವಾರನಾಗುತ್ತಿದ್ದಾನೆ. ಊರ ಸುತ್ತ ಹೊಲಗದ್ದೆಗಳ ಬಳಿ ದನಗಳು ಬಾರದಂತೆ ತಿರುಗಾಡುವುದು, ಬಂದರೆ ಅವುಗಳನ್ನು ಓಡಿಸುವುದು ಇದು ತಳವಾರನ ಕೆಲಸ. ಇದಕ್ಕಾಗಿ ತಳವಾರನಿಗೆ ರೈತರು ಒಕ್ಕಲಿಗೆ ವರ್ಷಕ್ಕೆ ಇಪ್ಪತ್ತು ಸೇರು ರಾಗಿಯನ್ನು ಕೊಡುತ್ತಾರೆ. ಹೀಗೆ ಮಾಡುವುದರಿಂದ ಹಳ್ಳಿಯಲ್ಲಿ ಪೈರಿಗೆ ದನಗಳ ಹಾವಳಿ ಬಹಳ ಕಡಿಮೆಯಾಗಿದೆ. ತಳವಾರನ ಎಚ್ಚರಿಕೆಗೆ ಲಕ್ಷ್ಯಕೊಡದೆ ದನಗಳನ್ನು ಹೊಲಗಳ ಮೇಲೆ ಪೋಲಿ ಬಿಟ್ಟರೆ ತಳವಾರನು ಅವುಗಳನ್ನು ಹೊಡೆದುಕೊಂಡು ಹೋಗಿ ತನ್ನ ಮನೆಯಲ್ಲಿ ಕಟ್ಟಿಹಾಕಿಕೊಳ್ಳುತ್ತಾನೆ. ದನಗಳ ಯಜಮಾನನು ಪ್ರತಿಯೊಂದು ದನಕ್ಕೂ ತಳವಾರನಿಗೆ ಎರಡೂವರೆ ಸೇರು ರಾಗಿಯನ್ನು ಕೊಟ್ಟು ದನಗಳನ್ನು ಬಿಡಿಸಿಕೊಂಡು ಬರಬೇಕಾಗುತ್ತದೆ.

ಕರಿಯನು ತಳವಾರನಾಗುವುದಕ್ಕಿಂತ ಮುಂಚೆ ಇದ್ದ ತಳವಾರರು ಸಾಧಾರಣವಾಗಿ ಯಾರ ದನಗಳನ್ನೂ ಮನೆಗೆ ಹೊಡೆದುಕೊಂಡುಹೋಗಿ ಕಟ್ಟಿಹಾಕಿಕೊಳ್ಳುತ್ತಿರಲಿಲ್ಲ. ಬಂದ ದನಗಳನ್ನು ಹೊಲಗಳಿಂದ ಮನೆಗೆ ಓಡಿಸುತ್ತಿದ್ದರು. ಆದರೆ ಕರಿಯನು ತಳವಾರನಾದ ಮೇಲೆ ಅವನ ಕೊಟ್ಟಿಗೆಯಲ್ಲಿ ಹೆಚ್ಚಾಗಿ ದನಗಳು ಸೇರಲು ಪ್ರಾರಂಭವಾಯಿತು. ಕರಿಯ ಬಹಳ ಜೋರಾದ ಆಸಾಮಿ. ಅವನ ಮಾತು ಒಂದು ಮೈಲಿ ದೂರ ಕೇಳಿಸುತ್ತಿದ್ದಿತು. ಅವನ ದನಿಗೆ ಹುಡುಗರು ಬೆಚ್ಚುತ್ತಿದ್ದರು. ದನಗಳೂ ಕೂಡ ಅವನ ದನಿಯನ್ನು ಕೇಳಿ ಹೆದರುತ್ತಿದ್ದುವು. ಕರಿಯನು ರಾಗಿಯ ಆಸೆಯಿಂದ ಬೀದಿಯ ದನಗಳನ್ನೆಲ್ಲಾ ಕೊಟ್ಟಿಗೆಗೆ ಕೂಡಿಕೊಳ್ಳಲು ಪ್ರಾರಂಭಿಸಿದನು. ಯಾರಾದರೂ ಆಕ್ಷೇಪಿಸಿದರೆ ಗದರಿಸಿ ದೊಣ್ಣೆಯನ್ನು ತೋರಿಸುತ್ತಿದ್ದನು. ಚಿಕ್ಕ ಹುಡುಗರು ದನಗಳನ್ನು ಮೇಯಿಸುತ್ತಿದ್ದರೆ ಅವರನ್ನು ಹೆದರಿಸಿ ಓಡಿಸಿ, ದನಗಳನ್ನು ಮನೆಗೆ ಅಟ್ಟಿಕೊಂಡು ಬರುತ್ತಿದ್ದನು. ಆದುದರಿಂದ ಕರಿಯನನ್ನು ಊರಿನಲ್ಲಿ ಅನೇಕರು ದ್ವೇಷಿಸುತ್ತಿದ್ದರು.

ಕರಿಯನು ಪುಟ್ಟಮಲ್ಲಿಗೆಯನ್ನು ಮದುವೆಯಾಗಲು ಬಾಯಿಬಿಡುತ್ತಿದ್ದನು. ಆದರೆ ಪುಟ್ಟಮಲ್ಲಿಗೆಗೆ ಅವನನ್ನು ಕಂಡರೆ ಸೇರುತ್ತಿರಲಿಲ್ಲ. ಅವನು ಬೀದಿಯ ದನಗಳನ್ನೆಲ್ಲಾ ರಾಗಿಯ ಆಸೆಯಿಂದ ತನ್ನ ಮನೆಯಲ್ಲಿ ಕೂಡಿಕೊಳ್ಳುವುದನ್ನು ಕಂಡು ಅವಳಿಗೆ ಮೈ ಉರಿಯುತ್ತಿದ್ದಿತು. ತನ್ನನ್ನು ಮದುವೆಯಾಗಲು ಕರಿಯನು ಹವಣಿಸುತ್ತಿರುವುದು ಪುಟ್ಟಮಲ್ಲಿಗೆಗೆ ತಿಳಿದಿದ್ದಿತು. ಆದರೆ ಹೊಸಬಿಯು ಅವನ ಬಲೆಯಿಂದ ಪಾರಾದಂತೆ ತಾನೂ ಯಾವುದಾದರೂ ಉಪಾಯದಿಂದ ಪಾರಾಗುವೆನೆಂದು ಅವಳು ನಂಬಿದ್ದಳು.

ನಮ್ಮ ಮಲೆನಾಡಿನ ರೈತರು ಭತ್ತವನ್ನೂ ರಾಗಿಯನ್ನೂ ಬೇಕಾದಂತೆ ಬೆಳೆಯುತ್ತಾರೆ. ಪೈರು ಬೆಳೆದು ಹಣ್ಣಾಗಿ ಕುಯ್ಯುವುದಕ್ಕೆ ಸಿದ್ಧವಾಗಿರುವಾಗ ಭತ್ತದ ಬೈಲುಭೂಮಿಗೆಲ್ಲಾ ಚಿನ್ನದ ತಗಡನ್ನು ಹಾಸಿದಂತೆ ಇರುತ್ತದೆ. ಆ ಪೈರನ್ನು ಕುಯ್ಯಲು ಬೇರೆ ಊರುಗಳಿಂದ ಬೇಕಾದಂತೆ ಆಳುಗಳು ಬರುತ್ತಾರೆ. ಅವರು ನಮ್ಮೂರಿನಲ್ಲಿ ಕೂಲಿ ಮಾಡಿ ರಾಗಿ ಭತ್ತವನ್ನು ಕುಯಿದು ಬಂದ ಉತ್ಪತ್ತಿಯಿಂದ ಜೀವನವನ್ನು ಸ್ವಲ್ಪಕಾಲ ಸಾಗಿಸುತ್ತಾರೆ.

ವ್ಯವಸಾಯಗಾರರಿಗೆ ಪೈರನ್ನು ಬಿತ್ತುವ ಕಾಲವೂ ಬೆಳೆದ ಪೈರನ್ನು ಕುಯ್ಯುವ ಕಾಲವೂ ಬಹಳ ಮುಖ್ಯವಾದುವು, ಮಳೆ ಬಂದಾಗ ಭೂಮಿ ಬಿತ್ತನೆಗೆ ಹದವಾಗಿರುವುದನ್ನು ನೋಡಿ ಬಿತ್ತಬೇಕು. ಹೆಚ್ಚು ಮಳೆ ಬಿದ್ದು ನೆಲದಲ್ಲಿ ಶೈತ್ಯವಿದ್ದರೆ ಬೀಜವು ಕೊಳೆತುಹೋಗುವುದು. ಕಡಿಮೆ ಮಳೆ ಬಿದ್ದು ಮಣ್ಣು ಸ್ವಲ್ಪ ಮಾತ್ರ ನೆನೆದಿದ್ದರೆ ಬೀಜವು ಮೊಳಕೆಯಾಗಲು ಬಿರಿದು ಸತ್ತುಹೋಗುವುದು. ಮಣ್ಣು ಶೈತ್ಯದಿಂದ ಕೂಡಿ ಹುಡಿಹುಡಿಯಾಗಿರುವಾಗ ಬಿತ್ತಬೇಕು. ಇದೇ ಬಿತ್ತನೆಯ ಬೆರಗು. ಸಕಾಲದಲ್ಲಿ ಬಿತ್ತದಿದ್ದರೆ "ಕೃಷಿ ಕೆಡುಗುಪೇಕ್ಷೆಯಲಿ" ಎಂದಾಗುವುದು.

ಪೈರನ್ನು ಕುಯ್ಯುವಾಗಲೂ ಸಕಾಲದಲ್ಲಿ ಕುಯ್ಯಬೇಕು. ಗಿಡವು ಹಳದಿಯಾಗಿ ರಾಗಿಯಾಗಲಿ ಭತ್ತವಾಗಲಿ ಮೂರುಪಾಲು ಒಣಗಿರುವಾಗ ಪೈರಿಗೆ ಕುಡುಗೋಲನ್ನು ಹಾಕಬೇಕು. ರಾಗಿಯನ್ನು ಸಕಾಲದಲ್ಲಿ ಕುಯ್ಯದೆ ಅದು ಒಣಗಿದರೆ ಕಾಳು ನೆಲಕ್ಕೆ ಉದುರಿಹೋಗುವುದು. ಭತ್ತದ ಪೈರನ್ನು ಕಾಲ ಮೀರಿ ಕುಯ್ದರೆ, ಕಾಳು ಹೆಚ್ಚಾಗಿ ಒಣಗಿ (ಕಡಗಿ) ಅಕ್ಕಿ ಬಹಳ ನುಚ್ಚಾಗುವುದು. ಪೈರು ಎಲ್ಲಾ ಕಡೆಯೂ ಒಂದೇ ಕಾಲದಲ್ಲಿ ಕಟಾವಿಗೆ ಬರುವುದರಿಂದ ಕುಯ್ಯುವ ಕಾಲದಲ್ಲಿ ರೈತರಿಗೆ ಆಳುಗಳ ಅವಶ್ಯಕತೆ ಬಹಳ ಹೆಚ್ಚಾಗಿರುತ್ತದೆ.

ಪೈರನ್ನು ಕುಯ್ಯುವುದು ಬಹಳ ಸುಲಭವಾದ ಕೆಲಸ. ಹೆಂಗಸರೂ ಗಂಡಸರೂ ಎಲ್ಲರೂ ನಮ್ಮ ಹಳ್ಳಿಯಲ್ಲಿ ಇದನ್ನು ಕಲಿತಿದ್ದಾರೆ. ಅವರು ಪೈರನ್ನು ಕುಯ್ಯುವುದನ್ನು ನೋಡಿದರೆ, ಅದು ಒಂದು ವಿಧವಾದ ಆಟದಂತೆ ತೋರುವುದೇ ಹೊರತು ಕಷ್ಟವಾದ ಕೆಲಸದಂತೆ ತೋರುವುದಿಲ್ಲ. ಆಗ ಅವರ ನಗುವೇನು, ಉತ್ಸಾಹವೇನು, ತಮ್ಮ ಕಷ್ಟದಿಂದ ಬೆಳೆದ ಪೈರನ್ನು ಕುಯ್ಯುತ್ತಿರುವಾಗ ಉಂಟಾಗುವ ಸ್ವಾವಲಂಬನದ ಹೆಮ್ಮೆಯೇನು! ಭೂಮಿತಾಯಿಯ ತೋಳ ಬಲವೂ ಇರುವವರೆಗೆ ಹೆದರುವುದಿಲ್ಲವೆಂದುಕೊಳ್ಳುತ್ತಿರುವ ಅವರ ಮುಖದ ಧೈರ್ಯವೇನು! ಹೆದರುವುದಿಲ್ಲವೆಂಬ ಧೈರ್ಯವು ಅವರಿಗೆ ಇರುವಷ್ಟು ಪಟ್ಟಣದ ನಾಗರಿಕರಿಗೆ ಎಲ್ಲಿಂದ ಬಂದೀತು ?

ನಮ್ಮ ಹಳ್ಳಿಗೆ ಸುಗ್ಗಿಯ ಕಾಲದಲ್ಲಿ ಪೈರನ್ನು ಕುಯ್ಯುವ ಆಳುಗಳು ತುಂಬಿಕೊಳ್ಳುತ್ತಾರೆ. ಹಾಗೆ ಬರುವ ಕೂಲಿಗಳು ಆರಂಬಗಾರರಲ್ಲ. ವರ್ಷಾನುಕಾಲವೂ ಅವರು ಒಂದಿಲ್ಲೊಂದು ರೀತಿಯಲ್ಲಿ ಕೂಲಿಯಿಂದಲೇ ಜೀವಿಸುತ್ತಾರೆ. ಅನೇಕ ರೈತರೂ ಜಮೀನುದಾರರೂ ನನ್ನೂರಿಗೆ ಬಂದು ಕಾದಿದ್ದು ಪರ ಊರುಗಳಿಂದ ಅಲ್ಲಿಗೆ ಬರುವ ಕೂಲಿಗಳನ್ನು ಕರೆದುಕೊಂಡು ತಮ್ಮ ಊರುಗಳಿಗೆ ಹೋಗುತ್ತಾರೆ. ಹೋದ ಸಲ ನಮ್ಮೂರಿಗೆ ಪೈರು ಕಟಾವಿನ ಕಾಲದಲ್ಲಿ ಪೆರಿಯಾಪಟ್ಟಣದ ಸಾಹುಕಾರ ಬಸವೇಗೌಡ ಬಂದ. ಪೆರಿಯಾಪಟ್ಟಣ ನಮ್ಮೂರಿಗೆ ಮೂವತ್ತು ಮೈಲಿ ದೂರದಲ್ಲಿದೆ. ಕಟಾವಿಗೆ ಬಂದಿದ್ದ ಪೈರನ್ನು ಕುಯ್ಯಲು ಆಳುಗಳನ್ನು ಕರೆದುಕೊಂಡು ಹೋಗುವುದೇ ಬಸವಯ್ಯನು ನಮ್ಮೂರಿಗೆ ಬಂದ ಉದ್ದೇಶವಾಗಿತ್ತು. ಯಾರ ಜಮೀನಿನ ಪೈರನ್ನು ಆಳುಗಳು ಕುಯ್ಯುತ್ತಾರೋ ಅವರೇ ಆಳುಗಳಿಗೆ ಹಿಟ್ಟನ್ನಿಕ್ಕಬೇಕು. ನಮ್ಮ ಹಳ್ಳಿಗೆ ಬಸವಯ್ಯ ಬಂದ ದಿನವೇ ಆಳುಗಳಿಗೆ ಗದ್ದೆಯಲ್ಲಿ ಹಿಟ್ಟನ್ನು ಬಡಿಸುತ್ತಿದ್ದ ಪುಟ್ಟಮಲ್ಲಿಗೆಯನ್ನು ನೋಡಿದನು. ಪುಟ್ಟಮಲ್ಲಿಗೆ "ವೈನಾದ ಹುಡುಗಿ" ಎಂಬುದು ಆಗಲೇ ಅವನ ಮನಸ್ಸಿಗೆ ಬಂದಿತು.

ಬಸವಯ್ಯನ ತಂದೆ ನಮ್ಮ ಪ್ರಾಂತದಲ್ಲಿ ಅನುಕೂಲಸ್ತ. ನೂರಾರು ಖಂಡುಗ ಭತ್ತ ಬೆಳೆಯುತ್ತಾನೆ. ಲೇವಾದೇವಿಯನ್ನೂ ಮಾಡುತ್ತಾನೆ. ಬಸವಯ್ಯನಿಗೆ ಬಡ ಹುಡುಗಿಯಾದ ಪುಟ್ಟಮಲ್ಲಿಗೆಯನ್ನು ಮದುವೆಯಾಗಬೇಕೆಂಬ ಆಸೆ ಬಲವಾಯಿತು. ಆಳುಗಳನ್ನು ಕರೆದುಕೊಂಡು ಹೋಗಲು ನಮ್ಮೂರಿಗೆ ಬಂದ ಗೃಹಸ್ಥ ತಾನೇ ಆಳಾಗಿ ಉಳಿದ ಕೂಲಿಗಳೊಡನೆ ಸೇರಿಕೊಂಡು ಪುಟ್ಟಮಲ್ಲಿಗೆಯ ಹೊಲಗಳನ್ನೂ ಗದ್ದೆಗಳನ್ನೂ ಕುಯ್ಯಲು ಪ್ರಾರಂಭಿಸಿದ. ಅವನ ಗುರುತು ನಮ್ಮ ಊರಿನಲ್ಲಿ ಯಾರಿಗೂ ಇಲ್ಲದೆ ಇದ್ದುದರಿಂದ, ಅವರಿಗೆ ಇದರಿಂದ ಆಶ್ಚರ್ಯವಾಗಲಿಲ್ಲ. ಪುಟ್ಟಮಲ್ಲಿಗೆಯ ಕೈಯಿಂದ ಎಸರನ್ನೂ ಹಿಟ್ಟನ್ನೂ ತೆಗೆದು ಊಟಮಾಡುವುದೇ ಬಸವಯ್ಯನ ದೊಡ್ಡ ಆನಂದವಾಗಿದ್ದಿತು. ಪುಟ್ಟಮಲ್ಲಿಗೆಯ ನಮ್ಮ ಊರಿನ ಇತರರೂ ಅವನು ಒಬ್ಬ ಸಾಧಾರಣ ಕೂಲಿ ಎಂದು ತಿಳಿದಿದ್ದರು.

ಪೆರಿಯಾಪಟ್ಟಣದ ಕೂಲಿಗೆ ತನ್ನ ವಿಷಯದಲ್ಲಿ ಉಂಟಾಗಿದ್ದ ಮನೋಭಾವವು ಪುಟ್ಟಮಲ್ಲಿಗೆಗೆ ತಿಳಿಯದೆ ಇರಲಿಲ್ಲ. ಗಂಡಸಿನ ಮುಖದಲ್ಲಿಯೂ ಚರ್ಯೆಯಲ್ಲಿಯೂ ಮಾತಿನಲ್ಲಿಯೂ ತೋರುವ ಪ್ರೇಮವನ್ನು ಹೆಂಗಸರು ಬಹು ಬೇಗ ಕಂಡುಕೊಳ್ಳುತ್ತಾರೆ. ಕೆಲವು ಹೆಂಗಸರು ತಾವು ಅರಿತುದನ್ನು ತೋರಿಸಿಕೊಳ್ಳದೆ ಗಂಡಸರೆದುರಿಗೆ ಹೆಮ್ಮೆಯಿಂದ ಯಾವುದರಿಂದಲೂ ವಿಚಲಿತರಾಗದವರಂತೆ ಇರುತ್ತಾರೆ. ಆದರೆ ಮತ್ತೆ ಕೆಲವರು

ಗಂಡಸಿನಲ್ಲಿರುವ ಪ್ರೇಮಕ್ಕೆ ಪ್ರತಿಯಾಗಿ ಸರಳವಾದ ಪ್ರೇಮವನ್ನು ತೋರಿಸಿ ಅವನ ಆನಂದವನ್ನು ಪೂರ್ಣಮಾಡುತ್ತಾರೆ. ಬಸವಯ್ಯ ಯಾವಾಗಲೂ ಪುಟ್ಟ ಮಲ್ಲಿಗೆಯ ಎದುರಿನಲ್ಲಿಯೇ ಇರುತ್ತಿದ್ದನು. ಬಿಸಿಲಿನಲ್ಲಿ ಕೆಲಸ ಮಾಡುವುದು ಅವನಿಗೆ ಬಹಳ ಅಭ್ಯಾಸವಿಲ್ಲದಿದ್ದರೂ ಪುಟ್ಟಮಲ್ಲಿಗೆಯ ಎದುರಿಗೆ ಅವನಿಗೆ ಯಾವ ಕೆಲಸವೂ ಕಷ್ಟವಾಗಿ ತೋರುತ್ತಿರಲಿಲ್ಲ.

ಪೆರಿಯಾಪಟ್ಟಣದ ಕೂಲಿಯ ವಿಷಯದಲ್ಲಿ ಪುಟ್ಟಮಲ್ಲಿಗೆಗೆ ಉಂಟಾಗಿದ್ದ ಪ್ರೇಮದ ಮನೋಭಾವವು ನಮ್ಮ ಹಳ್ಳಿಯವರಿಗೆ ತಿಳಿದಿದ್ದಿತು. ಬಸವಯ್ಯನೇನೋ ಕಟ್ಟುಮಸ್ತಾಗಿ ಗಟ್ಟಿಯಾದ ಆಳಾಗಿದ್ದನು. ಆದರೆ ಅವನು ಮಾಡುತ್ತಿದ್ದುದು ಕೂಲಿಯ ಕೆಲಸ. ನಮ್ಮ ಊರಿನವರ ಅಭಿಪ್ರಾಯದಲ್ಲಿ ರಾಣಿಯಾಗಿರಲು ಅರ್ಹಳಾದ ಪುಟ್ಟಮಲ್ಲಿಗೆ ಆ ಬಡ ಕೂಲಿಯನ್ನು ಯಾಕೆ ಮದುವೆಯಾಗಬೇಕೆಂಬುದು ಅವರಾರಿಗೂ ಬಗೆಹರಿಯದೆ ಹೋಯಿತು. ಪುಟ್ಟಮಲ್ಲಿಗೆಯ ತಾಯಿಗೆ ಬಸವಯ್ಯನಲ್ಲಿ ವಿಶ್ವಾಸವೇನೋ ಇತ್ತು. ಆದರೆ ಕೂಲಿಯಿಂದ ಜೀವಿಸುತ್ತಿರುವ ದೂರದ ಹಳ್ಳಿಯ ಒಕ್ಕಲಿಗನಿಗೆ ತನ್ನ ಗಿಣಿಮರಿಯನ್ನು ಕೊಡಲು ಅವಳಿಗೆ ಇಷ್ಟವಿರಲಿಲ್ಲ. ಆದರೆ ಪುಟ್ಟಮಲ್ಲಿಗೆ ಧೈರ್ಯವಾಗಿ ತಾನು ಬಸವಯ್ಯನನ್ನೇ ಮದುವೆಯಾಗುತ್ತೇನೆಂದೂ ಅವನ ಜತೆಯಲ್ಲಿ ಎಲ್ಲಾದರೂ ಸರಿಯೆ ಸುಕವಾಗಿರುತ್ತೇನೆಂದೂ ತಾಯಿಗೆ ಹೇಳಿದಳು. ಅವಳ ತಾಯಿಯು “ನಿನ್ನ ಸುಕಕ್ಕೆ ನಾನ್ಯಾಕೆ ಅಡ್ಡಿ ಬಂದೇನು? ಆದರೆ ನನಗೆ ಏನೂ ತಿಳಿಯಲೊಲ್ಲದು” ಎಂದಳು.

ಪುಟ್ಟಮಲ್ಲಿಗೆಯೊಂದಿಗೆ ಬಸವಯ್ಯನ ವಿವಾಹಕ್ಕೆ ತಳವಾರ ಕರಿಯನು ಅಡ್ಡಿಯಾಗಿದ್ದನು. ಹೊಸಬಿಯು ಕೈತಪ್ಪಿದಂದಿನಿಂದ ಪುಟ್ಟಮಲ್ಲಿಗೆಯನ್ನು ಮದುವೆಯಾಗಲೇಬೇಕೆಂದು ಅವನು ಹವಣಿಸುತ್ತಿದ್ದನು. ನಿಂಗನು ತೀರಿಕೊಂಡ ಮೇಲಂತೂ ಅವನ ಮಗಳು ತನ್ನ ಬಲೆಗೇ ಬೀಳುವಳೆಂದು ಅವನಿಗೆ ನಂಬಿಕೆಯಾಗಿದ್ದಿತು. ಬಸವಯ್ಯ ನಮ್ಮೂರಿಗೆ ಬರುವವರೆಗೆ ಪುಟ್ಟಮಲ್ಲಿಗೆ ತನ್ನ ಹೆಂಡತಿಯಾಗುವಳೆಂಬ ವಿಚಾರದಲ್ಲಿ ಕರಿಯನಿಗೆ ಸ್ವಲ್ಪವೂ ಅನುಮಾನವಿರಲಿಲ್ಲ. ಪುಟ್ಟಮಲ್ಲಿಗೆಯು ಮನೆಯಿಂದ ಹಿಟ್ಟನ್ನೂ ಎಸರನ್ನೂ ದೊಡ್ಡ ಕುಕ್ಕೆಯಲ್ಲಿ ಹೊತ್ತುಕೊಂಡು ಬಂದು ತನ್ನ ಗದ್ದೆಯ ಆಳುಗಳಿಗೆಲ್ಲಾ ಬಡಿಸುತ್ತಿರುವಾಗ, ಅವಳ ಕಡೆಗೆ ಬಸವಯ್ಯನು ಎಸೆದ ನೋಟಗಳಿಂದ ಅವಳಲ್ಲಿ ಬಸವಯ್ಯನಿಗೆ ಮನಸ್ಸುಂಟಾಗಿದೆಯೆಂದು ಕರಿಯನಿಗೆ ಚೆನ್ನಾಗಿ ಗೊತ್ತಾಯಿತು. ಪುಟ್ಟಮಲ್ಲಿಗೆ ತನ್ನನ್ನು ಬಿಟ್ಟು ಎಲ್ಲಿಗೆ ಹೋದಾಳೆಂದು ಅದುವರೆಗೆ ಧೈರ್ಯದಿಂದಿದ್ದ ಅವನಿಗೆ ಆಗನಿಂದಲೇ ಬಸವಯ್ಯನ

ಮೇಲೆ ದ್ವೇಷವಂಟಾಯಿತು. ಅಲ್ಲಿಂದ ಮುಂದೆ ಈ ಮದುವೆಯನ್ನು ಹೇಗೆ ಮಾಡಿ ಮುರಿಯಬೇಕೆಂಬುದೇ ಅವನ ಯೋಚನೆಯಾಯಿತು.

ಪುಟ್ಟಮಲ್ಲಿಗೆಗೂ ಅವಳ ತಾಯಿಗೂ ದೇವರು, ಶಕುನ ಮುಂತಾದವುಗಳಲ್ಲಿ ಹಳ್ಳಿಯ ಜನರಿಗೆಲ್ಲಾ ಸಾಧಾರಣವಾಗಿ ಇರುವಂತೆ ಹೆಚ್ಚಾದ ನಂಬಿಕೆಯಿದ್ದಿತು. ಕರಿಯನಿಗೆ ಇದು ಚೆನ್ನಾಗಿ ಗೊತ್ತು. ಪುಟ್ಟಮಲ್ಲಿಗೆಗೆ ಶಕುನದ ಮೂಲಕ ತನ್ನನ್ನೇ ಮದುವೆಯಾಗುವುದು ಒಳ್ಳೆಯದೆಂಬ ನಂಬಿಕೆಯನ್ನು ಉಂಟುಮಾಡಿದ ಹೊರತು ಪೆರಿಯಾಪಟ್ಟಣದ ಆಳಿನ ಆಸೆಯು ಅವಳಿಗೆ ಬಿಡಲಾರದೆಂದು ಅವನಿಗೆ ತೋರಿತು. ಕರಿಯನ ಈ ಉದ್ದೇಶವನ್ನು ಸಾಧಿಸುವುದಕ್ಕೆ ನಮ್ಮ ಊರ ಪೂಜಾರಿ ಸಹಾಯಕನಾದನು. ಇದಕ್ಕೆ ಒಂದು ಕಾರಣವಿತ್ತು. ಪೂಜಾರಿಯ ಮನೆಯಲ್ಲಿ ಒಂದು ಬಸವ ಇದೆ. ಅವನು ಅದನ್ನು ಬೇರೆ ಊರುಗಳಿಗೂ ಸಂತೆಗಳಿಗೂ ಸವಾರಿ ಮಾಡಿಕೊಂಡು ಹೋಗಲು ಉಪಯೋಗಿಸುತ್ತಾನೆ. ಈ ಬಸವ ನಮ್ಮ ಹಳ್ಳಿಯಲ್ಲಿ ಎಲ್ಲಾ ಹೊಲಗದ್ದೆಗಳಿಗೂ ನುಗ್ಗಿ ರಾಗಿಯನ್ನೂ ಭತ್ತವನ್ನೂ ಬೇಕಾದಂತೆ ಮೇಯುತ್ತದೆ. ಪೂಜಾರಿಯು ಅದನ್ನು ಪ್ರತಿ ರಾತ್ರಿಯೂ ಪೋಲಿ ಬಿಡುತ್ತಾನೆ. ಅದು ರಾಗಿಯ ಗುಡ್ಡೆಯನ್ನು ಮಿತಿಮೀರಿ ಮೇದು ಜೀರ್ಣಿಸಿಕೊಳ್ಳಲಾರದೆ, ಸಗಣಿಯಲ್ಲೆಲ್ಲಾ ರಾಗಿಯೇ ಸೇರಿಕೊಂಡು ದೇವಸ್ಥಾನದ ಪ್ರಾಕಾರದಲ್ಲೆಲ್ಲಾ ರಾಗಿಯ ಪೈರು ಬೆಳೆದು ಹೊಲವಾಗಿದೆ. ಬಸವನನ್ನು ಪೋಲಿ ಬಿಟ್ಟುದಕ್ಕೆ ರೈತರು ಕೂಗಾಡಿದರೆ ಪೂಜಾರಿ "ಇದು ದೇವ್ರ ಬಸವ" ಎನ್ನುತ್ತಾನೆ. ಇನ್ನೂ ಹೆಚ್ಚಾಗಿ ಕೂಗಾಡಿದರೆ "ತಳವಾರನ್ಗೆ ಹೇಳು. ದನ ಪೋಲಿ ಬಿಟ್ರೆ ಕೂಡ್ಕೊಳ್ಳೋದು ಅವನ ಕೆಲಸ" ಎನ್ನುತ್ತಾನೆ. ಆದರೆ ತಳವಾರನು ಪೂಜಾರಿಯ ಬಸವನನ್ನು ದೊಡ್ಡಿಗೆ ಕೂಡಿಕೊಳ್ಳುತ್ತಿಲ್ಲ. ಇದನ್ನು ಕಂಡು ಕೆಲವರು ಕರಿಯನಿಗೆ ದೇವರಲ್ಲಿ ಭಕ್ತಿ ಹೆಚ್ಚಾಗಿದೆ ಎನ್ನುತ್ತಾರೆ. ಇನ್ನು ಕೆಲವರು ಕರಿಯನಿಗೂ ಪೂಜಾರಿಗೂ ಬಹಳ ಸ್ನೇಹವೆಂದುಕೊಳ್ಳುತ್ತಾರೆ. ತನ್ನ ಬಸವನು ಈ ರೀತಿಯಾಗಿ ಕೊಬ್ಬಿ ಪೋಲಿ ಮೇಯುತ್ತಿರುವುದರಿಂದ ಪೂಜಾರಿಯೂ ಕರಿಯನ ವಿಷಯದಲ್ಲಿ ದಯಾವಂತನಾಗಿದ್ದಾನೆ.

ಒಂದು ದಿವಸ ಪೂಜಾರಿಯು ದೇವಸ್ಥಾನದಲ್ಲಿ ತೂಕಡಿಸುತ್ತಾ ಕುಳಿತಿದ್ದನು. "ಬಸವನಂತೂ ಊರವರ ವೆಚ್ಚದಲ್ಲಿ ಮೇದು ಕೋಣನಾಗ್ತಾ ಇದೆ. ಇದೇನೋ ಸವಾರಿಗೆ ಆಯ್ತು; ಇನ್ನೊಂದು ಕರಾವಿನ ಹಸ ಏಕೆ ಇಡಬಾರದು? ಆಗ ಬಸವನ ಜತೆಗೆ ಅದರ ಯಜಮಾನನ ಮೈಯೂ ಬೆಳೆಯುತ್ತೆ" ಎಂಬುದಾಗಿ ಅವನು ಯೋಚಿಸುತ್ತಿದ್ದನು. ಆ ಹೊತ್ತಿಗೆ ತಳವಾರ ಕರಿಯನು ಅಲ್ಲಿಗೆ ಬಂದನು. ಬಂದವನೆ "ಐನೂರ, ನಿಮ್ಮಿಂದ ನನ್ಗೆ ಒಂದ್ಕೆಲಸ ಆಗಬೇಕಲ್ಲ?"

ಎಂದನು. ಐನೂರು "ಆಗಲಿ ಅದಕ್ಕೇನು" ಎಂದನು. ತಳವಾರನು "ಆ ತುಂಟ ಹುಡುಗಿ ಪುಟ್ಟಮಲ್ಲಿಗೆ ನನ್ನ ಬಿಟ್ಟು ಪೆರಿಯಾಪಟ್ಟಣದ ಆಳನ್ನ ಮದ್ವೆ ಆಗ್ತಾಳೆ, ಅವಳ್ನ ಮದ್ವೆ ಆಗಬೇಕು ಅಂತ ಹತ್ತು ವರ್ಷದಿಂದ ಬಾಯಿಬಿಟ್ಟುಕೊಂಡು ಕೂತಿದೀನಿ. ಅವಳಿಗೆ ನಿಮ್ಮ ಮಾತಿನಲ್ಲಿ ಬಾರಿ ವಿಶ್ವಾಸ. ನೀವು ಅವಳಿಗೆ 'ಈ ಮದ್ವೆ ಇಂದ ಬಾರಿ ನಷ್ಟ ಅಯ್ತೆ, ಇಬ್ಬರಿಗೂ ಒಳ್ಳೇದಲ್ಲ' ಅಂತ ಹೇಳಿಬಿಟ್ರೆ ಎಲ್ಲಾ ಸರಿಹೋಯ್ತದೆ" ಎಂದನು. ತಳವಾರನ ಮಾತನ್ನು ಕೇಳಿ, ಐನೂರು "ಇಲ್ಲ, ಆಗೋಕಿಲ್ಲ. ಆ ಹುಡುಗಿ ಬಲು ಒಳ್ಳೆ ಹುಡುಗಿ. ದೇವರಲ್ಲಿ ಅದ್ಕೆ ಭಾರಿ ಭಕ್ತಿ ಅಯ್ತೆ. ನನ್ಕಂಡ್ರೆ ದೇವರ್ಕಂಡಂಗೆ ನಡ್ಕೊತಾಳೆ. ನಾ ಒಲ್ಲೆ, ನೀನೆ ಅವಳಿಗೆ ಬೇಕಾದ ಸಕನ ಸಾಲಾವಳಿ ಹೇಳು" ಎಂದನು. ತಳವಾರನಿಗೆ ಬಹಳ ಕೋಪವುಂಟಾಯಿತು. ಅವನು "ಏ ಪೂಜಾರಯ್ಯ, ಹಂಗೋ. ಆಗ್ಲಿ. ನಿನ್ಗೆ ನನ್ಗಿಂತ ಆ ಹುಡುಗಿ ಹೆಚ್ಚಾಗಿಹೋಯ್ತು. ನಾಳೆ ಇಂದ ನಿನ್ನ ಬಸವನ್ನ ಬೀದಿಗೆ ಬಿಡೋದು ತೋರಸ್ತೀನಿ, ನಾಳೆ ಮಾತ್ರ ನೀನು ಬಿಡು. ಒಂದು ವರ್ಷದ್ದು ರಾಗಿ ನಾಲ್ಕು ಖಂಡಗ ತೆರಸ್ತೀನಿ. ಪೂಜಾರಿಗಳ್ನ ನಂಬೋಕಾಗದು. ದೇವರ ಗಂಟ್ನೆ ನುಂಗೋರು ಮನಸನ ಗಂಟ ತಿನ್ನದೆ ಬಿಡ್ತಾರಾ?" ಎಂದನು. ಪೂಜಾರಿ ಆಯ್ಯನಿಗೆ ನಾಲ್ಕು ಖಂಡುಗ ರಾಗಿ ತೆರುವುದಕ್ಕೆ ಸುತರಾಂ ಇಷ್ಟವಿರಲಿಲ್ಲ. ನಿತ್ಯ ತನ್ನ ಬಸವನನ್ನು ಆನೆಯಂತೆ ಪೋಲಿ ಮೇಯಿಸುತ್ತಿದ್ದ ತಳವಾರನೊಂದಿಗೆ ಹೊಡೆದಾಡಲೂ ಅವನಿಗೆ ಮನಸ್ಸಿರಲಿಲ್ಲ. ಆದುದರಿಂದ ಪೂಜಾರಿಯು ತಳವಾರನ ಮಾತಿನಂತೆ ಪುಟ್ಟಮಲ್ಲಿಗೆಗೆ ಪೆರಿಯಾಪಟ್ಟಣದ ಆಳನ್ನು ಮದುವೆ ಆಗದಂತೆ ಹೇಳುವೆನೆಂದು ಒಪ್ಪಿಕೊಂಡನು.

ಮರುದಿವಸ ಆಳುಗಳೆಲ್ಲರೂ ಪುಟ್ಟಮಲ್ಲಿಗೆಯ ಹೊಲದಲ್ಲಿ ರಾಗಿಯನ್ನು ಕಯ್ಯುತ್ತಿದ್ದರು. ಹೊಲದ ಒಂದು ಭಾಗ ಅನೇಕ ವರ್ಷಗಳಿಂದ ಮೇಡಾಗಿದ್ದು (ಎತ್ತರ) ಅದನ್ನು ಈ ವರ್ಷ ಕಡಿದು ಸರಿಮಾಡಿ ಮೊದಲನೆಯ ಸಲ ಅದಕ್ಕೆ ರಾಗಿಯನ್ನು ಹಾಕಿದ್ದರು. ಅಲ್ಲಿ ರಾಗಿಯು ಹೊಲದ ಉಳಿದ ಭಾಗಗಳಿಗಿಂತ ಬಹಳ ಹುಲುಸಾಗಿ ಬೆಳೆದಿದ್ದಿತು. ತೆನೆಗಳೆಲ್ಲಾ ಕಾಳುಗಳಿಂದ ತುಂಬಿ ದಪ್ಪವಾಗಿ, ಆ ಕಾಳುಗಳ ಹೊರೆಯನ್ನು ತಾಳಲಾರದೆ ಪೈರು ನೆಲಕ್ಕೆ ಬಾಗಿದ್ದಿತು. ನಮ್ಮ ಹಳ್ಳಿಯಲ್ಲಿ ಯಾವಾಗಲೂ ಯಾರ ಹೊಲದಲ್ಲಿಯೂ ಬೆಳೆಯದಷ್ಟು ಸೊಂಪಾಗಿ ಆಗ ಪೈರು ಬೆಳೆದಿದ್ದಿತು. ಆ ಪೈರನ್ನು ನೋಡಿದರೆ ಆಶ್ಚರ್ಯವಾಗಿ ದೃಷ್ಟಿ ತಗುಲುವಂತೆ ಇತ್ತು. ಹೊಲದ ಉಳಿದ ಕಡೆ ನಾಲ್ಕು ಮುಂಬು(ಸಾಲು)ಗಳನ್ನು ಕುಯ್ಯುವ ಹೊತ್ತಿಗೆ ಅಲ್ಲಿ ಎರಡೇ ಮುಂಬುಗಳನ್ನು ಕುಯ್ಯಬಹುದಾಗಿದ್ದಿತು. ಪುಟ್ಟಮಲ್ಲಿಗೆಯೂ ಪೆರಿಯಾಪಟ್ಟಣದ ಕೂಲಿಯೂ ಒಬ್ಬರ ಮಗ್ಗುಲಲ್ಲೊಬ್ಬರು ಆ ಭಾಗದಲ್ಲಿ ಪೈರನ್ನು ಕುಯ್ಯುತ್ತಿದ್ದರು.

ಆ ವೇಳೆಗೆ ಅಲ್ಲಿಗೆ ಐನೂರು ಬಂದನು. ತಳವಾರ ಕರಿಯನೂ ಉಳಿದವರ ಜತೆಯಲ್ಲಿ ಅಲ್ಲಿಯೇ ಹೊಲವನ್ನು ಕುಯ್ಯುತ್ತಿದ್ದನು. ಪುಟ್ಟಮಲ್ಲಿಗೆಯೂ ಬಸವಯ್ಯನೂ ಕುಯ್ಯುತ್ತಿದ್ದ ಜಾಗವು ಉಳಿದವರು ಕುಳಿತಿದ್ದ ಜಾಗದಿಂದ ಇಪ್ಪತ್ತು ಮಾರು ದೂರದಲ್ಲಿತ್ತು. ಮಧ್ಯೆ ಪೈರು ಹೆಚ್ಚಾಗಿ ಬೆಳೆದು ಎತ್ತರವಾಗಿದ್ದುದರಿಂದ ಉಳಿದವರಿಗೆ ಅವರು ಕಾಣುತ್ತಿರಲಿಲ್ಲ. ಪೂಜಾರಿ ಅಯ್ಯನು ಎರಡು ಮೂರು ಸಲ ನಿಟ್ಟುಸಿರು ಬಿಟ್ಟು ಪುಟ್ಟಮಲ್ಲಿಗೆಯೂ ಬಸವಯ್ಯನೂ ಕುಯ್ಯುತ್ತಿದ್ದ ಪೈರಿನ ಕಡೆ ನೋಡುತ್ತಾ “ಗ್ರಹಚಾರ, ಒಳ್ಳೆ ಹುಡ್ಗಿ, ಅಯ್ಯೋ ಪಾಪ! ಅದ್ಕೇ ಪೈರು ಹಂಗೆ ಬಂದಯ್ತೆ” ಎಂದನು. ತಳವಾರ ಕರಿಯನು “ಅದೇನು ನೀವು ಹೇಳೋದು ಐನೂರು?” ಎಂದನು. ಐನೂರು “ನಿನಗೇನು ಆ ಸಮಾಚಾರ ಕಟ್ಕೊಂಡು? ನಿನ್ಕೆಲ್ಸ ನೀ ನೋಡು” ಎಂದನು. ಹೊಲದಲ್ಲಿ ಪೈರನ್ನು ಕುಯ್ಯುತ್ತಿದ್ದ ಉಳಿದವರೆಲ್ಲಾ “ಅದೇನು ಹೇಳಿ ಐನೂರು?” ಎಂದರು. ಐನೂರು ಗಂಭೀರವಾಗಿ “ಇಂತಾ ಇಚಾರ ನಾವು ಹೇಳಬಾರದು. ಈಶ್ವರನ ಇಷ್ಟವಿದ್ದಂತೆ ಆಗಲಿ. ಅಲ್ಲಿ ನೋಡಿ ಪುಟ್ಟಮಲ್ಲಿಗೆ ಆಳಿನೊಂದಿಗೆ ಪೈರು ಕುಯ್ತಾ ಇದಾಳೆಲ್ಲ. ಅಂತಾ ಬೆಳೆ ಈ ಊರಲ್ಲಿ ಇನ್ಯಾವದಾದರೂ ಹೊಲದಲ್ಲಿ ಬೆಳದಿದ್ದನ್ನ ನೀವು ನೋಡಿದಿರಾ? ಇದೇ ಹೊಲದಲ್ಲಿ ಹಿಂದೆ ಹಿಂಗೆ ಎಂದಾದರೂ ಬೆಳೆದಿತ್ತೆ? ಇಲ್ಲ. ಈ ಬೇಳೆ ಸುಖಕ್ಕೆ ಬಂದಿಲ್ಲ. ಕೇಡ್ಗಾಲ್ಕೆ ಬಂದಿದೆ. ಪುಟ್ಟಮಲ್ಲಿಗೆ ಕೇಡ್ಗಾಲ್ಕೆ ಈ ಬೆಳೆ ಒಂದೇ ಬಂದಿಲ್ಲ. ಇನ್ನೊಬ್ಬ ಮನಸನೂ ಈ ವರ್ಷ ಬಂದವ್ನೆ” ಎಂದನು. ತಳವಾರ ಕರಿಯನು “ಆ ಇನ್ನೊಬ್ಬ ಮನಸ್ನ ಹೆಸರೇನು?” ಎಂದನು. ಐನೂರು ಬೆರಳುಗಳನ್ನು ಮಡಿಸಿ ತೆರೆದು ಎಣಿಕೆ ಹಾಕಿ ತಿರುಗಿಸಿ “ಈಶ್ವರನ ಮುಂದೆ ಕುಳಿತಿರೋರು ಯಾರು?” ಎಂದನು. ಆಳುಗಳೆಲ್ಲಾ “ಬಸವಣ್ಣ” ಎಂದು ಕೂಗಿದರು. ಐನೂರು “ಈಗ ಬಂದಿರೋನ್ಗೂ ಅದೇ ಹೆಸರು. ಪುಟ್ಟಮಲ್ಲಿಗೆಗೂ ಅವನ್ಗೂ ಜೋಸ್ತಿ ಬೆಳೀತಯ್ತೆ. ಇದು ಒಳ್ಳೇದಲ್ಲ. ಈಶ್ವರನಿಗೆ ಇಷ್ಟವಿಲ್ಲ” ಎಂದು ಹೇಳಿ ಹೊರಟನು. ಕರಿಯನು “ಐನೂರು, ಪುಟ್ಟಮಲ್ಲಿಗೇನೆ ಕರೀತೀನಿ, ನೀವೆ ಅವಳ್ಗೆ ಹೇಳಿಬಿಡಿ” ಎಂದನು. ಐನೂರು “ಬೇಡ. ನಾನ್ಯಾಕೆ ಅವಳಿಗೆ ಸುಮ್ಮನೆ ಭಯ ಹತ್ತಿಸಲಿ. ಒಳ್ಳೆ ಹುಡುಗಿ” ಎಂದುಕೊಂಡು ಹೊರಟುಹೋದನು. ಅಷ್ಟು ಜನರ ಎದುರಿಗೆ ತಾನು ಹೇಳಿದ ವಿಚಾರ ಪುಟ್ಟಮಲ್ಲಿಗೆಗೆ, ಒಂದಕ್ಕೆ ಹತ್ತಾಗಿ ಅವರ ಬಾಯಿಂದ ಗೊತ್ತಾಗುವುದೆಂದೂ, ಅದರಿಂದ ತಳವಾರನ ಉದ್ದೇಶವು ತಾನೇ ಪುಟ್ಟಮಲ್ಲಿಗೆಗೆ ಹೇಳಿದ್ದರೆ ಹೇಗೋ ಅದಕ್ಕಿಂತ ಹೆಚ್ಚಾಗಿ ಸಾಧಿಸುವುದೆಂದೂ ಅವನಿಗೆ ಚೆನ್ನಾಗಿ ತಿಳಿದಿದ್ದಿತು.

ಪೂಜಾರಿ ಅಯ್ಯನ ಈ ಊಹೆಯು ತಪ್ಪಾಗಲಿಲ್ಲ. ಹತ್ತು ನಿಮಿಷಗಳೊಳಗಾಗಿ ಪುಟ್ಟಮಲ್ಲಿಗೆಗೆ ವಿಷಯವು ಗೊತ್ತಾಯಿತು. ಒಬ್ಬೊಬ್ಬರು ಒಂದೊಂದು ರೀತಿಯಿಂದ ಹೇಳತೊಡಗಿದರು. ಒಬ್ಬರು ಹೇಳಿದುದಕ್ಕಿಂತ ಮತ್ತೊಬ್ಬರು ಹೇಳಿದುದು ಹೆಚ್ಚು ಭಯಂಕರವಾಗಿದ್ದಿತು. ಪುಟ್ಟಮಲ್ಲಿಗೆಗೆ ಮೊದಲೇ ಶಕುನ ಸಾಲಾವಳಿಗಳಲ್ಲಿ ನಂಬಿಕೆ ಹೆಚ್ಚಾಗಿತ್ತು. ಅವಳು ಆ ರಾತ್ರಿ ದೇವಸ್ಥಾನಕ್ಕೆ ಹೋಗಿ ಐನೂರನ್ನು ತನ್ನ ವಿಷಯದಲ್ಲಿ ಅವನು ಹೇಳಿದ್ದ ಮಾತುಗಳು ನಿಜವೇ ಎಂಬುದಾಗಿ ವಿಚಾರಿಸಿದಳು. ಐನೂರು "ನಾನು ದೇವರ್ನ ಕೇಳ್ದೆ; ಸ್ವಾಮಿ ಹಂಗೆ ಹೇಳ್ದ. ಬೇಕಾದ್ರೆ ಅವನ್ಮಾತ ನಂಬು ಇಲ್ದಿದ್ರೆ ಬಿಡು" ಎಂದನು.

ಐನೂರು ಹೇಳಿದ ಮಾತನ್ನು ಕೇಳಿ ಪುಟ್ಟಮಲ್ಲಿಗೆಯ ತಾಯಿಗೆ ಭಯ ಹೆಚ್ಚಾಯಿತು. ಅವಳು "ಬಸವಯ್ಯ ಯಾರೋ ನಮ್ಗೆ ಗೊತ್ತಿಲ್ಲ. ಅವನ ಕುಲ ಯಾವುದೋ ಮನೆ ಯಾವುದೋ ಕಂಡೋರು ಯಾರು? ಅಷ್ಟು ದೂರಕ್ಕೆ ಹೆಣ್ಣು ಕೊಟ್ಟು ಕಷ್ಟ ಅನುಬೋಗಿಸೋದು ನಮಗೆ ಬೇಡ. ಬಸವಯ್ಯನೂ ಬೇಡ, ಮದುವೇನೂ ಬೇಡ" ಎಂದುಬಿಟ್ಟಳು. ಅಂತೂ ಬಸವಯ್ಯನಿಗೆ ಎಲ್ಲಾ ಕಡೆಗಳಿಂದಲೂ ಅಡಚಣೆಯೇ ಉಂಟಾಯಿತು.

ಆ ದಿವಸ ಬಸವಯ್ಯ ಹೊಸಬಿಯ ಮನೆಯಲ್ಲಿ ಹೊಸಬಿಯ ಗಂಡ ಮಾದನೊಂದಿಗೆ ಮಾತನಾಡುತ್ತಾ ಕುಳಿತಿದ್ದ. ಊಟದ ಹೊತ್ತಾಯಿತು. ಮಾದ ಬಸವಯ್ಯನನ್ನು "ಕೈಕಾಲ್ಗೆ ನೀರ ತಕೋಳಿ" ಎಂದೆ. ಬಸವಯ್ಯ "ತಕೋಳೊ ಹಂಗಿಲ್ಲ" ಎಂದ. ಮಾದ "ಆಗದು, ಉಣ್ಣೋಕೆ ಏಳಿ" ಎಂದ. ಬಸವಯ್ಯ "ಉಣ್ಣೋ ಹಂಗಿಲ್ಲ" ಎಂದ. ಹಳ್ಳಿಗಳಲ್ಲಿ, ಅದರಲ್ಲೂ ಒಕ್ಕಲಿಗರ ಮನೆಗಳಲ್ಲಿ ಊಟದ ಹೊತ್ತಿಗೆ ಯಾರು ಹೋದರೂ "ಉಣ್ಣೋಕೆ ಏಳಿ" ಎಂಬುದಾಗಿ ಬಲಾತ್ಕರಿಸದ ಮನೆ ಇಲ್ಲ. ಅತಿಥಿಯಿರಲಿ ಅಭ್ಯಾಗತನಿರಲಿ ಬೇಕಾದವನು ಬಂದಿರಲಿ, ತಾನು ಮಾತ್ರ ಒಳಕ್ಕೆ ಹೋಗಿ ಊಟ ಮಾಡಿಕೊಂಡು ಬಂದುಬಿಡುವ ಸ್ವಭಾವ ಒಕ್ಕಲಿಗನಿಗೆ ಇಲ್ಲ. ಒಕ್ಕಲಿಗನು ಒಳಗೆ ಅಡಿಗೆ ಆಗಿರಲಿ ಇಲ್ಲದಿರಲಿ, ಊಟದ ಹೊತ್ತಿಗೆ ಮನೆಗೆ ಬಂದವರನ್ನು ಬಲಾತ್ಕಾರವಾಗಿ ಊಟಕ್ಕೆ ಎಬ್ಬಿಸುತ್ತಾನೆ. ಬಂದವನಿಗೂ ಸಾಕಾಗುವಷ್ಟು ಅಡಿಗೆ ಒಳಗೆ ಆಗದೆ ಇದ್ದರೆ, ಇರುವುದನ್ನೇ ಎಲ್ಲರೂ ಹಂಚಿಕೊಳ್ಳುತ್ತಾರೆ. ಆದರೆ ಒಕ್ಕಲಿಗನು ಸಾಧಾರಣವಾಗಿ ಮತ್ತೊಬ್ಬರ ಅನ್ನಕ್ಕೆ ಆಸೆ ಪಡುವುದಿಲ್ಲ ಊಟದ ಋಣವನ್ನು ತಾನು ಯಾವ ರೀತಿಯಿಂದಲಾದರೂ ಯಾವಾಗಲಾದರೂ ತೀರಿಸಿಯೇನೆಂಬ ನಂಬಿಕೆ ಅವನಿಗೆ ಇದ್ದರೆ ಹೊರತು ಇಲ್ಲದಿದ್ದರೆ ಅವನು ಕಂಡವರ ಮನೆಯಲ್ಲಿ

ಬಾಯಿಗೆ ನೀರನ್ನು ಸಹ ಬಿಡುವುದಿಲ್ಲ. ಮಾದನು ಬಸವಯ್ಯನನ್ನು ಬಲಾತ್ಕಾರದಿಂದ ಊಟಕ್ಕೆ ಒಪ್ಪಿಸಿದನು. ಬಸವಯ್ಯನು ವಿಧಿಯಿಲ್ಲದೆ ಏಳಬೇಕಾಯಿತು.

ಹಿಟ್ಟಿನ ಮುದ್ದೆಯನ್ನು ನುಂಗುತ್ತಾ ಸಾರೊಳಗಿನ ಕಾಳುಗಳನ್ನು ಸೂರಿನ ಕಡೆ ನೋಡಿಕೊಂಡು ಅಗಿಯುತ್ತಿರುವಾಗ, ಮಾದನಿಗೆ ಬಸವಯ್ಯನು ಏನೋ "ವೇಚಣೆ" ಮಾಡುತ್ತಿರುವುದು ಗೊತ್ತಾಯಿತು. ಬಸವಯ್ಯನಿಗೆ ತನ್ನ ವಿಚಾರದಲ್ಲಿ ಐನೂರು ಹೊರಡಿಸಿದ್ದ ಹೇಳಿಕೆ ಗೊತ್ತಾಗಿದ್ದಿತು. ಇದು ಐನೂರಿನ ಕುಚೇಷ್ಟೆ ಎಂಬುದೂ ಅವನಿಗೆ ಚೆನ್ನಾಗಿ ಗೊತ್ತಾಗಿದ್ದಿತು. ಆದರೆ ಪುಟ್ಟಮಲ್ಲಿಗೆಯೂ ಅವಳ ತಾಯಿಯೂ ದೇವರು ಪೂಜಾರಿಗೆ ಹೇಳಿದ ಮಾತನ್ನು ಪೂರ್ಣವಾಗಿ ನಂಬಿದುದರಿಂದ ಬಸವಯ್ಯನು ಏನು ಮಾಡುವುದಕ್ಕೂ ತೋಚದೆ ಮಂಕಾಗಿದ್ದನು. ಮಾದನು "ಏನು ಬಸವಯ್ಯ, ನಮ್ಮೂರು ಬೇಸರ್ಕೆ ಬಂತಾ?" ಎಂದನು. ಬಸವಯ್ಯನು "ಬೇಸರ್ಕೆ ಯಾಕೆ, ಬಲ್ಪಸಂದಾಗದೆ ನಿಮ್ಮೂರು. ಇಲ್ಲಿ ಎಷ್ಟು ವರ್ಷ ಬೇಕಾದ್ರು ಇರತೀನಿ" ಎಂದನು. ಮಾದನು "ಹೌದು ಹೌದು, ಬೇಸರ್ಕೆ ಬರೋಕೆ ನಿನ್ಗೇನು ನನ್ಗೆ ಇರೋ ಅಂತಾ ಹೆಂಡ್ತಿ ಅವಳೇ?" ಎಂದನು. ಹೊಸಬಿಯು "ಹೌದು, ನನ್ನಿಂದ ನಿಮ್ಗೆ ಬಾರಿ ಕಷ್ಟ ಅಲ್ವೆ? ಯಾಕ್ಮದ್ವೆ ಆದ್ರಿ?" ಎಂದಳು. ಮಾದನು "ಇಲ್ಲಿ ನೋಡು ಬಸವಯ್ಯ, ಇವಳು ಸಗಣಿ ತಟ್ಟಬೇಕಾದ್ರೆ, ನಾನಿವಳ ಆಳಿನ್ಹಂಗೆ ಕೆರೆ ಇಂದ ನೀರ್ತಂದು ಸಗಣಿಗೆ ಹಾಕಿ ಅದನ್ನು ಕಲಸಿಕೊಡಬೇಕು. ಇವಳು ಎಮ್ಮೆಹಾಲು ಕರೆಯಬೇಕಾದರೆ, ಇವಳ್ಮುಂದೆ ಅದರ ಕರ ಹಿಡ್ಕೊಂಡು ಇವಳು ಬಿಡು ಅಂದ್ರೆ ಬಿಟ್ಕೊಂಡು ಹಿಡ್ಕೊ ಅಂದ್ರೆ ಹಿಡ್ಕೊಂಡು ನಾ ನಿಂತಿರಬೇಕು. ಹಿತ್ಲು ಬದ್ನೆ ಗಿಡ್ಕೆ ಇವಳು ನೀರು ಹಾಕುವಾಗ ನಾನು ಕೈಲಿ ಗುದ್ಲಿ ಹಿಡ್ಕೊಂಡು ಇವಳ್ಹೇಳ್ದಂಗೆ ಮಣ್ಣು ಆಚೆ ಈಚೆ ಎಳೆದ್ಹಾಕಬೇಕು. ಈ ಜೀತಾಮಾಡಿ ನಾ ಸಣ್ಣಾದೆ ಬಸವಯ್ಯ, ಹೆಂಚಿನಮನೆ ಯಾಲಕ್ಕಿ ನೇಗಿಲ ಮೇಲೆ ಕೈಯಿಟ್ಟು ಉಳೋದೊಂದು ಬಿಟ್ರೆ, ಹುಲ್ಲು ಕಡ್ಡಿ ಈ ಕಡೆಯಿಂದ ಆ ಕಡೆಗೆ ಎತ್ತಿ ಇಡೋಹಂಗಿಲ್ಲ" ಎಂದನು. ಹೊಸಬಿಯು "ಅದ್ಕೇ ಯಾಲಕ್ಕಿ ಮನ್ಲಿ ಹೊಡೆದಾಟ ಮೂರು ಹೊತ್ತು. ಸಾಮಾನು ಒಂದಿದ್ರೆ ಒಂದಿಲ್ಲ. ಸಗಣಿ ಗೊಬ್ರ ಎಲ್ಲ ಬಾಗಲ್ಮುಂದೆನೆ ತಿಪ್ಪೆ, ಹಿತ್ಲಲ್ಲಿ ಚೆಲ್ಲಿದ ಬೀಜ ಮಳೆ ಬಂದಾಗ್ಲೆ ನೀರಾಡೋದು. ಗೊಬ್ಬರಾನೋ, ವಿಭೂತಿ ಹಚ್ಚಿಕೊಂಡು ಕೂಡ ಹೊಲ ಗದ್ದೆ ಮೇಲೆ ತಿರಗೋಹಂಗಿಲ್ಲ. ಮನೆ ಹಿಂದುಗಡೆ ಕಾಡ್ನಲ್ಲಿ ಇದೆ ಸೌದೆ. ಒಡೆದು ತಂದ್ಕೊಡೋರಿಲ್ಲದೆ ಬಂದೋರ್ಗೆ ಒಂದು ಗುಟುಕು ಗಂಜಿ ನೀಡ ಬೇಕಾದ್ರೆ ಮಧ್ಯಾನ್ಹದ ಆರಕಟ್ಟೋ ಹೊತ್ತಾಯ್ತದೆ. ನಮ್ಮ ಮನೇಲಿ ಒಂದಿನ ಹಂಗೆ ಬದುಕುಮಾಡೋಕಾಗ್ತದ್ಯೆ?" ಎಂದಳು. ಮಾದನು

ಕುಚೇಷ್ಟೆಯಿಂದ “ಮುಖ್ಯ ನಿನ್ನ ಮದ್ವೆ ಆದ್ದು ನನ್ನ ತಪ್ಪು” ಎಂದನು. ಹೊಸಬಿಯು “ನಾನೇನು ಮದ್ವೆ ಆಗ್ರಪ್ಪಾ ಅಂತ ಬೇಡ್ಕೊಂಡ್ನೆ? ಹಿಂದೆ ಮುಂದೆ ತಿರುಗಿ, ಕೈಕಾಲು ಕಟ್ಕೊಂಡು, ಮದ್ವೆ ಆಗ್ದಿದ್ರೆ ಪರಾಣ ಬಿಡ್ತೀನಿ ಅಂತ ಹೇಳಿದೋರು ಯಾರು?” ಎಂದಳು.

ಅನಂತರ ಪೂಜಾರಿಯು ಪ್ರಕಟಿಸಿದ ಹೇಳಿಕೆಯ ವಿಚಾರ ಚರ್ಚೆಗೆ ಬಂತು. ಹೊಸಬಿಯು “ಆ ಪೂಜಾರಿ ಐನೂರ ಮಾತು ನನಗೆ ನಂಬಿಕೆಯಿಲ್ಲ. ಇದ್ರಲ್ಲೇನೋ ತಳವಾರನ ಮೋಸ ಸೇರಯ್ತೆ. ಪುಟ್ಟಮಲ್ಲಿಗೆ ಮದ್ವೆ ವಿಚಾರ ದೇವರು ಐನೂರಿಗೆ ಯಾಕೆ ಹೇಳಬೇಕು?” ಎಂದಳು. ಮಾದನು ಜಾಗಟೆಸುಣ್ಣವನ್ನು (ಸುಣ್ಣದಲ್ಲಿ ಕಲ್ಲುಹರಳು, ಮರಳು ಇದ್ದರೆ ಅದನ್ನು ವೀಳೆಯದೆಲೆಗೆ ಹಾಕಿ, ಆ ಕಲ್ಲು ಉದುರಲು ಅದನ್ನು ಬೆರಳಿನಿಂದ ಕೊಡವಬೇಕು. ಆದುದರಿಂದ ಆ ಸುಣ್ಣಕ್ಕೆ ಜಾಗಟೆಸುಣ್ಣವೆಂದು ನಮ್ಮ ಊರಿನವರು ಹೇಳುತ್ತಾರೆ. ) ಎಲೆಗೆ ಸವರುತ್ತಾ “ಪುಟ್ಟಮಲ್ಲಿಗೆಯ ಅವ್ವನಿಗೆ ನಾವು ಹೇಳ್ತೀವಿ. ನೀನು ವೇಚಣೆ ಮಾಡಬೇಡ” ಎಂದು ಬಸವಯ್ಯನಿಗೆ ಧೈರ್ಯ ಹೇಳಿದನು. ತನ್ನ ವಿಷಯದಲ್ಲಿ ಆ ದಂಪತಿಗಳಿಗೆ ಇದ್ದ ಕನಿಕರವನ್ನು ಕಂಡು ಬಸವಯ್ಯನಿಗೆ ಸಂತೋಷವುಂಟಾಯಿತು.

ಈ ಮಧ್ಯೆ ನಮ್ಮ ಊರಿಗೆ ಬುಡಬುಡಕೆ ದಾಸಯ್ಯಗಳ ಗುಂಪು ಒಂದು ಬಂದಿತು. ಬುಡಬುಡಕೆ ದಾಸಯ್ಯಗಳು ನಮ್ಮ ಕಡೆ ಜನರ ಕೈಗಳನ್ನು ನೋಡಿ ಶಕುನ ಹೇಳುತ್ತಾರೆ. ಅವರ ಹೆಂಗಸರಿಗೂ ಅದೇ ಕೆಲಸ. ದಾಸಯ್ಯಗಳು ಬುಡಬುಡಕೆಯನ್ನು ಹಿಡಿದುಕೊಂಡು ಊರೂರು ತಿರುಗುತ್ತಾ “ಹಕ್ಕಿ ಮರದ ಮೇಲೆ ಕುಳಿತು ಹೇಳುವ ಮಾತುಗಳನ್ನು” ಜನರಿಗೆ ತಿಳಿಸುತ್ತಾರೆ. ಆದರೆ ಅವರ ಹೆಂಗಸರು ಕುಳಿತಲ್ಲಿಯೇ ಗುಡಿಸಲುಗಳನ್ನು ಹಾಕಿಕೊಂಡು ಅಲ್ಲೇ ಶಕುನವನ್ನು ಹೇಳುತ್ತಾರೆ.

ಬುಡಬುಡಕೆ ದಾಸಯ್ಯಗಳು ನಮ್ಮ ಊರು ನದೀ ತೀರದ ತೋಪಿನಲ್ಲಿ ಗುಡಿಸಲು ಹಾಕಿಕೊಂಡರು. ಆ ಬಂದಿದ್ದ ಗುಂಪಿನಲ್ಲಿ ಮೂರು ಜನ ಗಂಡಸರು, ಹದಿನಾರು-ಹದಿನೇಳು ವರ್ಷದ ಹುಡುಗಿಯೊಬ್ಬಳು, ಆರು-ಏಳು ವರ್ಷದ ಹುಡುಗಿಯೊಬ್ಬಳು, ಅರವತ್ತು ವಯಸ್ಸಿನ ಮುದುಕಿಯೊಬ್ಬಳು ಇದ್ದರು. ಅವರು ಬಂದ ದಿನವೇ ನಮ್ಮ ಊರಿಗೆ ಮೂರು ಮೈಲಿ ದೂರದಲ್ಲಿರುವ ನದೀ ತೀರದ “ದೇವರ ತೋಪಿ”ನಲ್ಲಿ ಸಂತೆಯಾದುದರಿಂದ ದಾಸಯ್ಯಗಳು ಸಂತೆಮಾಳದಲ್ಲಿ ಒಂದು ಗುಡಿಸಲನ್ನು ಹಾಕಿದರು. ಮುದುಕಿಯು ಅಲ್ಲಿ ಕುಳಿತು ಬಂದವರಿಗೆಲ್ಲಾ “ಸಕನ” ಹೇಳುತ್ತಿದ್ದಳು.

ಮುದುಕಿಯ ಶಕುನ ಕೇಳುವುದರಲ್ಲಿ ಹಳ್ಳಿಯವರಿಗೆಲ್ಲಾ ಬಹಳ ಉತ್ಸಾಹವುಂಟಾಗಿತ್ತು. ಮುದುಕಿಯು ಸಾಧಾರಣವಾಗಿ ಅವರವರ ಸ್ವಭಾವಗಳನ್ನು ಅರಿತು ಎಲ್ಲರಿಗೂ ಒಳ್ಳೆಯ ಶಕುನಗಳನ್ನೇ ಹೇಳುತ್ತಿದ್ದಳು. ಇದರಿಂದ ಜನರಿಗೆ ಅವಳಲ್ಲಿ ಕುತೂಹಲದ ಜತೆಗೆ ವಿಶ್ವಾಸವೂ ಉಂಟಾಯಿತು. ಮುದುಕಿಯು ಹೊಸಬಿಯ ಹಸುವು ಹೋರಿಗರು ಹಾಕುವುದೆಂದೂ ಅದರಿಂದ ಹೊಸಬಿಗೆ ಇನ್ನೂರು ರೂಪಾಯಿ ಲಾಭ ಬರುವೂದೆಂದೂ ಹೇಳಿ, ಅವಳಿಂದ ಒಂದು ಬಳ್ಳ ರಾಗಿ ಸಂಪಾದಿಸಿದಳು. ಕಾಸೆ ಗಿಡ್ಡನ ಕಬ್ಬಿನ ಗದ್ದೆಯಲ್ಲಿ ಹೆಚ್ಚು ಬೆಲ್ಲ ಬರುವುದೆಂದು ಹೇಳಿ ಆ ಜಿಪುಣನಿಂದಲೂ ರಾಗಿ ಸಂಪಾದಿಸಿದಳು. ತಳವಾರ ಕರಿಯನೂ ಅವಳ ಶಕುನವನ್ನು ಕೇಳಿದನು.

ಪೂಜಾರಿ ಹೇಳಿದ ಮಾತಿನಿಂದ ಗಾಬರಿಗೊಂಡ ಪುಟ್ಟಮಲ್ಲಿಗೆ ಮುದುಕಿಯ ಬಳಿ ಶಕುನವನ್ನು ಕೇಳುವಳೆಂದು ತಳವಾರ ಕರಿಯನಿಗೆ ಗೊತ್ತಿತ್ತು. ಆದುದರಿಂದ ಮುದುಕಿಗೆ ಏನಾದರೂ ಆಸೆ ತೋರಿಸಿ, ಅವಳು ತನ್ನ ಇಷ್ಟದಂತೆ ಶಕುನವನ್ನು ಹೇಳುವಂತೆ ಮಾಡಬೇಕೆಂದು ಅವನು ಸಂತೆಗೆ ಬಂದಿದ್ದನು. ಶಕುನದ ಮುದುಕಿ ಸಂತೆಮಾಳದ ಆಲದಮರದ ನೆರಳಿನಲ್ಲಿ ಒಂದು ಕಡೆ ಗುಡಿಸಲನ್ನು ಹಾಕಿಕೊಂಡಿದ್ದಳು. ಗುಡಿಸಲಿನ ಮುಂದೆ ಜನ ಹೆಚ್ಚಾಗಿ ಸೇರಿತ್ತು. ಒಬ್ಬರಿಗಿಂತ ಒಬ್ಬರು ಒಳಕ್ಕೆ ಮುಂದೆ ನುಗ್ಗಲು ಉತ್ಸಾಹವುಳ್ಳವರಾಗಿದ್ದರು. ಅನೇಕರು ಶಕುನವನ್ನು ಕೇಳದೆ ಹೋಗಕೂಡದೆಂದು ಗುಡಿಸಲಿನ ಬಾಗಿಲನ್ನು ಕಾಯುತ್ತಾ ನಿಂತಿದ್ದರು. ತಳವಾರ ಕರಿಯನೂ ಅಲ್ಲಿಗೆ ಅವಸರದಿಂದ ಬಂದನು. ಆದರೆ ನೆರೆದಿದ್ದ ಗುಂಪನ್ನು ನೋಡಿ ಅವರನ್ನು ತಳ್ಳಿಕೊಂಡು ಒಳಗೆ ಹೋಗಲಾರದೆ ತಾನೂ ಉಳಿದವರ ಜತೆಯಲ್ಲಿ ಬಾಗಿಲಿನಲ್ಲಿ ನಿಂತನು.

ಬಸವಯ್ಯನೂ ಕೂಡ ಸಂತೆಗೆ ಬಂದನು. ಅವನಿಗೆ ಪುಟ್ಟಮಲ್ಲಿಗೆಯ ಯೋಚನೆ ಬಲವಾಗಿ ಹಿಡಿದಿತ್ತು. ಪೂಜಾರಿ ಅಯ್ಯನ ಮಾತನ್ನು ಕೇಳಿ ಪುಟ್ಟಮಲ್ಲಿಗೆಗೆ ಭಯವುಂಟಾಗಿರುವುದು ಅವನಿಗೆ ಚೆನ್ನಾಗಿ ತಿಳಿದಿತ್ತು. ಆದರೆ ಆ ಭಯದಿಂದ ಅವಳು ತಪ್ಪಿಸಿಕೊಳ್ಳುವ ದಾರಿ ಅವನಿಗೆ ಯಾವುದೂ ಕಾಣಲಿಲ್ಲ. “ಕೈಗೆ ಬಂದ ತುತ್ತು ಅನ್ಯಾಯವಾಗಿ ಬಾಯಿಗೆ ಬರದಂತೆ ಆಯಿತಲ್ಲಾ!” ಎಂಬುದಾಗಿ ಅವನಿಗೆ ಬಹಳ ಯೋಚನೆ ಹತ್ತಿತು. ಅವನು ಉದ್ದೇಶವಿಲ್ಲದೆ ಅಲೆಯುತ್ತಾ ಸಂತೆಮಾಳಕ್ಕೆ ಬಂದಿದ್ದನು. ಅಲ್ಲಿ ಮೂರು ಕಾಸಿನ ಬೀಡಿಯನ್ನು ತೆಗೆದುಕೊಂಡು ಸೇದಲು ಮನಸ್ಸಿಲ್ಲದೆ ಎಸೆದನು. ಹಲಸಿನ ತೊಳೆಗಳನ್ನೂ ಕಡಲೆಪುರಿಯನ್ನೂ ತೆಗೆದುಕೊಂಡು ತಿನ್ನಲಾರದೆ ಬಿಸಾಡಿದನು. ಅವನಿಗೆ ಹಸಿವು ಹೆಚ್ಚಾಗಿತ್ತು. ಏನೂ ತಿನ್ನುವುದಕ್ಕೆ ಬೇಕಿರಲಿಲ್ಲ.

ಬಸವಯ್ಯನು ಸಂತೆಯನ್ನೆಲ್ಲಾ ಹತ್ತು-ಹನ್ನೆರಡು ಸಲ ಸುತ್ತಾಡಿದನು. ಅನಂತರ ನದಿಯ ತೀರದ ಮೆಟ್ಟಲುಗಳ ಮೇಲೆ ಕುಳಿತುಕೊಂಡು ನೀರಿನಲ್ಲಿದ್ದ ಮೀನುಗಳಿಗೆ ಕಡಲೆಪುರಿಯನ್ನು ಎಸೆದು, ಅವು ಕಣ್ಣುಗಳನ್ನು ಹೊರಳಿಸುತ್ತಾ ಮೇಲಕ್ಕೆ ಬಂದು ಲಾಗಾ ಹಾಕುವುದನ್ನು ನೋಡುತ್ತಾ ಒಂದು ಗಳಿಗೆ ಕುಳಿತಿದ್ದನು. ಅನಂತರ ಬಿಸಿಲು ಜೋರಾದುದರಿಂದ ಸಂತೆಗೆ ಮತ್ತೆ ಬಂದನು. ಶಕುನದ ಮುದುಕಿಯ ಗುಡಿಸಲಿನ ಮುಂದೆ ದೊಡ್ಡ ಜನದ ಗುಂಪು ನೆರೆದಿದ್ದಿತು. ಬಸವಯ್ಯನು ಆ ಗುಂಪನ್ನು ನೋಡಿ "ನಮ್ಮ ಜನ್ಕೆ ಇವಳ ಮಾತ್ನಲ್ಲಿ ಬಾರಿ ನಂಬಿಕೆ ಅಯ್ತೆ. ಇವಳೇನು ನಿಜಾನೇ ಹೇಳ್ತಾಳೊ, ಸುಳ್ಳೇ ಹೇಳ್ತಾಳೊ ನನ್ಗಂತು ತಿಳಿಯದು. ನಾನು ಸಕನ ಕೇಳ್ತೀನಿ. ಏನ್ಹೇಳ್ತಾಳೋ ನೋಡ್ಬೇಕು" ಎಂದುಕೊಂಡು ಗುಡಿಸಲಿನ ಹಿಂಭಾಗದಲ್ಲಿ ಕುಳಿತುಕೊಂಡನು. ಅನಂತರ "ಈ ಮುದ್ಕಿ ಹೇಳೋ ಮಾತ್ನ ಕೇಳೋಣ" ಎಂದುಕೊಂಡು ಗುಡಿಸಲಿನ ಹಿಂದುಗಡೆಯ ಬಟ್ಟೆಯನ್ನು ಮೇಲಕ್ಕೆತ್ತಿ ತಲೆಯನ್ನು ಒಳಕ್ಕೆ ಇಟ್ಟುಕೊಂಡು ನೆಲದ ಮೇಲೆ ಬಿದ್ದುಕೊಂಡನು.

ಒಳಗೆ ಮುದುಕಿಯು ಒಂದು ಹಳೆಯ ಚಾಪೆಯನ್ನು ಹಾಸಿಕೊಂಡು ಕುಳಿತಿದ್ದಳು. ಅವಳ ಮುಂದೆ ಒಂದು ಕಾಲುಮಣೆಯ ಮೇಲೆ ಒಂದು ಓಲೆಗರಿ ಪುಸ್ತಕವಿತ್ತು. ಅದರ ಮೇಲೆ ಒಂದು ದೇವರಿತ್ತು. ದೇವರ ಮುಂದೆ ಒಂದು ದೀಪವೂ ಕಾಲುಮಣೆಯ ಒಂದು ತುದಿಯಲ್ಲಿ ಒಂದು ಗಂಧದ ಕಡ್ಡಿಯೂ ಉರಿಯುತ್ತಿದ್ದುವು. ಜನರು ಒಬ್ಬೊಬ್ಬರಾಗಿ ಒಳಕ್ಕೆ ಬರುತ್ತಿದ್ದರು. ಮುದುಕಿಯು ಅವರಿಗೆಲ್ಲಾ ಕೈ ನೋಡಿ ಶಕುನ ಹೇಳುತ್ತಿದ್ದಳು. ಅದನ್ನೆಲ್ಲಾ ಕೇಳಿ ಬಸವಯ್ಯನಿಗೆ ನಗು ಬಂತು. ಇನ್ನೇನು ಹೋಗೋಣವೆಂದು ಅವನು ಯೋಚಿಸುತ್ತಿದ್ದ ಹೊತ್ತಿಗೆ ಸರಿಯಾಗಿ ತಳವಾರ ಕರಿಯನು ಒಳಕ್ಕೆ ಬಂದನು. ಬಸವಯ್ಯನು ಮತ್ತೆ ಅಲ್ಲೇ ಮಲಗಿಕೊಂಡನು.

ತಳವಾರನು ಒಳಕ್ಕೆ ಬಂದವನೆ ಗುಡಿಸಲಿನ ಮುಂದಲ ಫರದೆಯನ್ನು ಕೆಳಕ್ಕೆ ಬಿಟ್ಟು "ಸಕನ ಕೇಳಿ ಬರ್ತೀನಿ. ಯಾರೂ ಒಳಗೆ ಬರಬೇಡಿ" ಎಂಬುದಾಗಿ ಗರ್ಜಿಸಿ ತನ್ನ ದೊಣ್ಣೆಯನ್ನು ತಿರುಗಿಸಿದನು. ಆನಂತರ ಭಯಂಕರವಾಗಿ ಹಲ್ಲು ಕಿರಿಯುತ್ತಿದ್ದ ತನ್ನ ನಾಯನ್ನು ಬಾಗಿಲಿನಲ್ಲಿ ನಿಲ್ಲಿಸಿ, ಅದರ ಬೆನ್ನನ್ನು ತಟ್ಟಿ "ಯಾರೂ ಒಳೀಕೆ ಬಿಡ್ಬೇಡ" ಎಂಬುದಾಗಿ ಹೇಳಿ, ಮುದುಕಿಯ ಬಳಿಗೆ ಹೋದನು. ಮುದುಕಿಯ ಮುಂದೆ ಇದ್ದ ಕಾಲ್ಮಣೆಯ ಮೇಲೆ ಒಂದು ರೂಪಾಯಿಯನ್ನು ಹಾಕಿ ಅವಳೊಂದಿಗೆ ಪಿಸಪಿಸನೆ ಏನೋ ಹೇಳಿದನು. ಮೊದಮೊದಲು ಮುದುಕಿಯು ಅವನು ಹೇಳಿದ ಮಾತನ್ನು ಒಪ್ಪಲಿಲ್ಲ. ತಳವಾರ ಕರಿಯನು ದಟ್ಟಿಯಿಂದ ಮತ್ತೊಂದು ರೂಪಾಯಿಯನ್ನು ತೆಗೆದು ಕಾಲುಮಣೆಯ ಮೇಲೆ ಹಾಕಿದನು. ಮುದುಕಿಯು ಅದನ್ನೂ ಚೀಲಕ್ಕೆ ಸೇರಿಸಿಕೊಂಡು

“ಹೂಂ” ಎಂದಳು. ಕರಿಯನು ಹೊರಡುವಾಗ ಮತ್ತೆ “ಮರಿಯಬೇಡ. 'ನನ್ನ ಮಾತಿಗೆ ಒಪ್ಪಿದರೆ ದೇವರಿಗೆ ಒಪ್ಪಿತ. ಎಲ್ಲಾ ಒಳ್ಳೇದಾಗುತ್ತೆ. ಇಲ್ದಿದ್ರೆ ಬಾರಿ ಅನಿಷ್ಟ ಉಂಟಾಯ್ತದೆ' ಅಂತ ಹೇಳ್ಬೇಕು” ಎಂದು ಹೇಳಿದನು. ಮುದುಕಿಯು “ಆಗಲಿ” ಎಂದು ತಲೆಯಲ್ಲಾಡಿಸಿದಳು.

ಕರಿಯನು ಹೊರಕ್ಕೆ ಹೋದನಂತರ ಮತ್ತಾರೋ ಇಬ್ಬರು ಶಕುನಕ್ಕೆ ಬಂದರು. ಅನಂತರ ಪುಟ್ಟಮಲ್ಲಿಗೆಯೂ ಬಂದಳು. ಮುದುಕಿಯು ಪುಟ್ಟಮಲ್ಲಿಗೆಯ ಕೈಯನ್ನು ನೋಡಿ, ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಯೋಚಿಸಿಕೊಂಡಿದ್ದು ಅನಂತರ “ನಿನ್ಗೆ ಈಗ ಮನಸ್ಸಿಗೆ ಒಂದು ವೇಚನೆ ಹಿಡಿದಿದೆ. ನಿನ್ನ ಕಣ್ಗೆ ಎರಡು ಜನ ಕಾಣ್ತಾರೆ. ಅವರಿಬ್ಬರ್ಗೂ ನೀನು ಬೇಕು. ಆದರೆ ಒಂದು ಹೆಣ್ಣು ಇಬ್ಬರೂ ಮದ್ವೆ ಆಗೋಹಂಗಿಲ್ಲ. ಇಲ್ಲಿಂದ ನೀನು ಹೊರೀಕೆ ಹೋದ ತಕ್ಷಣ ಒಬ್ಬ ಮನಸ ಬರ್ತಾನೆ. ನಿನ್ಕಂಡ್ರೆ ಅವನ್ಗೆ ಪರಾಣ. ನೀ ಹೇಳ್ದಂಗೆ ಕೇಳ್ಕೊಂಡು ನಿನ್ಸುಕಕ್ಕೆ ಮನಸ್ಕೊಟ್ಕೊಂಡು ಇರ್ತಾನೆ. ಅಂತಾ ಗಂಡ ಯಾರ್ಗೆ ಸಿಕ್ಬೇಕಾದ್ರು ಅದೃಷ್ಟ ಮಾಡಿರಬೇಕು. ನೀನೀಗ ಹೊರೀಕೆ ಹೋದ ಕೂಡ್ಲೆ ಅವ ನಿನ್ನ ಒಂದಿಚಾರ ಕೇಳ್ತಾನೆ. ಆಗ್ಲಿ ಅಂತ ಒಪ್ಕೊ. ಒಪ್ಕೊಂಡ್ರೆ ದೇವರ್ಗೆ ಒಪ್ಪಿತ. ಮುಂದೆ ನಿನ್ಗೆ ಬಾರಿ ಒಳ್ಳೆದಾಗ್ತದೆ. ಒಪ್ಕೊಳ್ದೆ ಇದ್ರೆ ನೋಡ್ಕೊ ಬಾರಿ ಕಷ್ಟ ಬರ್ತದೆ. ಈಗಲೇ ಹೇಳಿವ್ನಿ” ಎಂದಳು.

ಗುಡಿಸಲಿನ ಮೂಲೆಯಲ್ಲಿ ತಲೆಯಿಟ್ಟಿದ್ದ ಬಸವಯ್ಯ “ಎಲಾ ಕರಿಯ” ಎಂದುಕೊಂಡನು. ಅನಂತರ “ಇರಲಿ, ಇವನ ಉಪಾಯಕ್ಕೆ ತಕ್ಕ ಉಪಾಯ ಮಾಡ್ತೇನೆ” ಎಂದುಕೊಂಡು ಗುಡಿಸಲನ್ನು ಸುತ್ತಿಕೊಂಡು ಪುಟ್ಟಮಲ್ಲಿಗೆ ಬರುವ ವೇಳೆಗೆ ಸರಿಯಾಗಿ ಬಾಗಿಲಿಗೆ ಬಂದನು. ಕರಿಯನು ಇಷ್ಟು ಬೇಗ ಪುಟ್ಟ ಮಲ್ಲಿಗೆಯು ಹೊರಕ್ಕೆ ಬರಲಾರಳೆಂದು ತಿಳಿದು, ಬೀಡಿಗಳನ್ನು ತರಲು ಅಂಗಡಿಗೆ ಹೋಗಿದ್ದನು. ಉಪ್ಪು, ಮೆಣಸಿನಕಾಯಿ, ಸೀಮೆ ಎಣ್ಣೆ ಸೀಸೆ— ಇವುಗಳೆಲ್ಲಾ ತುಂಬಿದ್ದ ಪುಟ್ಟಮಲ್ಲಿಗೆಯ ಕುಕ್ಕೆಯನ್ನು ಬಸವಯ್ಯನು ತಲೆಯ ಮೇಲೆ ಹೊತ್ತುಕೊಂಡು “ಪುಟ್ಟಮಲ್ಲಿಗೆ, ಸಂತೇಲಿ ಇನ್ನೇನಾರ ಕೆಲ್ಸ ಅದಾ?” ಎಂಬುದಾಗಿ ಕೇಳಿದನು. ಪುಟ್ಟಮಲ್ಲಿಗೆ “ಏನೂ ಕೆಲ್ಸಾ ಇಲ್ಲ. ವ್ಯಾಪಾರಾನೆಲ್ಲಾ ಮುಗಿಸ್ದೆ” ಎಂದಳು. ಬಸವಯ್ಯನು “ಹಂಗಾದ್ರೆ ಮನೆಗೆ ನೋಡೋಣ, ನಡಿ” ಎಂದನು. ಇಬ್ಬರೂ ಮನೆಯ ಕಡೆ ಹೊರಟರು.

ನಾಲ್ಕು ಹೆಜ್ಜೆ ಇಕ್ಕುವುದರೊಳಗಾಗಿ ಬಸವಯ್ಯನು “ಪುಟ್ಟಮಲ್ಲಿಗೆ, ನನ್ನ ಮದ್ವೆ ಆಗ್ತೀಯ?” ಎಂದನು. ಪುಟ್ಟಮಲ್ಲಿಗೆಗೆ ಮುದುಕಿಯು ಹೇಳಿದ ಮಾತು ಇನ್ನೂ ಕಿವಿಯಲ್ಲಿ ಇತ್ತು. ಅಲ್ಲದೆ ಹೊರಕ್ಕೆ ಬಂದ ಕೂಡಲೆ ಬಸವಯ್ಯ ಕಣ್ಣಿಗೆ ಬಿದ್ದಿದ್ದನು. ಆದುದರಿಂದ ತನ್ನ ಮನಸ್ಸಿನಲ್ಲಿ ಇರುವುದೇ ದೇವರ ಮನಸ್ಸಿನಲ್ಲೂ ಇರುವುದೆಂದು ಅವಳಿಗೆ ಸಂತೋಷವಾಯಿತು. ಅವಳು

“ಅದ್ಕೇನು. ಅಮ್ಮ ಹೂ ಅಂದ್ರೆ ಆಗ್ಲಿ” ಎಂದಳು. ಅನಂತರ ಬಸವಯ್ಯನು “ಆ ಪೂಜಾರಿ ಐನೂರ ಮಾತ ನಂಬ್ಕೊಬೇಡ. ಅವ ತಳವಾರ ಕರಿಯನ ಜತೆ ಸೇರ್ಕೊಂಡು ಅವನ ಮಾತ್ನ ಕೇಳ್ಕೊಂಡು ನಿನ್ನ ಹೆದರಸ್ತಾನೆ” ಎಂದನು.

ಬಸವಯ್ಯನೂ ಪುಟ್ಟಮಲ್ಲಿಗೆಯ ಮುಂದೆ ಹೋಗುತ್ತಿದ್ದುದನ್ನು ಕಂಡು ತಳವಾರ ಕರಿಯನು ಏದುತ್ತಾ ಓಡಿ ಬಂದನು. ಅವನಿಗೆ ಬಸವಯ್ಯನ ಮೇಲೆ ಬಹಳ ಕೋಪವುಂಟಾಗಿತ್ತು. ಆದರೆ ಅವನು ಅವರೊಂದಿಗೆ ಮಾತನಾಡದೆ, ಇನ್ನು ತನ್ನ ಪ್ರಯತ್ನವು ವಿಫಲವಾಯಿತೆಂದುಕೊಂಡು ಮುಂದೆ ಮುಂದೆ ಹೊರಟುಹೋದನು.

ಆ ರಾತ್ರಿ ಬಸವಯ್ಯ ಹೊಸಬಿಯ ಮನೆಗೆ ಹೋಗಿ ನಡೆದ ವಿಚಾರಗಳನ್ನೆಲ್ಲಾ ತಿಳಿಸಿದನು. ಹೊಸಬಿಯ ಮಾದನೂ ಬಸವಯ್ಯನ ಜತೆಯಲ್ಲಿ ಪುಟ್ಟಮಲ್ಲಿಗೆಯ ಮನೆಗೆ ಹೋದರು. ಪುಟ್ಟಮಲ್ಲಿಗೆಯ ತಾಯಿಯು ಮೊದಲು ಮೊದಲು ಐನೂರು ಹೇಳಿದ್ದ ಮಾತನ್ನೇ ಪಟ್ಟು ಹಿಡಿದು ಕೂತಿದ್ದಳು. ಆದರೆ ಮಾದನು ಬುಡಬುಡಿಕೆಯವಳು ಹೇಳಿದ ಮಾತನ್ನೂ ಅದರಂತೆ ಸ್ವಲ್ಪವೂ ತಪ್ಪದೆ ಆಮೇಲೆ ನಡೆದ ವಿಚಾರಗಳನ್ನೂ ಹೇಳಿ ಪುಟ್ಟಮಲ್ಲಿಗೆಯು ಬಸವಯ್ಯನನ್ನೇ ಮದುವೆಯಾಗಬೇಕೆಂಬುದು ದೇವರ ಇಚ್ಛೆಯೆಂದು ತಿಳಿಸಿದನು. ಸರಿಯಾದ ತೆರದ ಹಣವನ್ನು ಕೊಡಿಸಲು ಮಾದನು ಒಪ್ಪಿಕೊಂಡುದರಿಂದ ಪುಟ್ಟ ಮಲ್ಲಿಗೆಯ ತಾಯಿಯು ಇನ್ನಾವ ಆಕ್ಷೇಪಣೆಯನ್ನೂ ಒಡ್ಡಲಿಲ್ಲ.

ಬಸವಯ್ಯನು ಆನಂದದಿಂದ ಒಂದು ಸಲ ಕುಣಿದು ಮದುವೆಯ ಏರ್ಪಾಡು ಮಾಡಿಕೊಂಡು ಬರುತ್ತೇನೆಂದು ಪೆರಿಯಾಪಟ್ಟಣಕ್ಕೆ ಹೋದನು. ಮಾದನು “ನೀನೇನೂ ಹೆಚ್ಚಾಗಿ ಸವರಿಸಬೇಕಾದ್ದಿಲ್ಲ. ಬಿರ್ನೆ ಬಂದ್ಬಿಡು”ಎಂದನು. ಬಸವಯ್ಯನು “ಕೂಲಿ ಆಳು. ಸವರಿಸೋದು ಏನಯ್ಯ” ಎಂದನು. ಪುಟ್ಟಮಲ್ಲಿಗೆಯು “ಕೂಲಿ ಆದ್ರೆ ಏನು ಕೆಟ್ಟು. ನಾವೆಲ್ಲಾ ಕೂಲಿಗ್ಲೆ ಅಲ್ವಾ. ಅಪ್ಪ ಮೊದಮೊದಲು ಕೂಲಿ ಮಾಡ್ತಾ ಇರ್ನಿಲ್ವೆ. ನಮ್ಮ ಕೈಲಿ ತ್ರಾಣ ಅಯ್ತೆ. ಯಾವ ಕಷ್ಟ ಬಂದರೂ ಸೈಸೋಣ” ಎಂದಳು.

ಬಸವಯ್ಯನು ಪೆರಿಯಾಪಟ್ಟಣಕ್ಕೆ ಹೋಗಿ “ಅಪ್ಪಾ, ನಾನೊಂದು ಹುಡುಗಿ ಗೊತ್ತು ಮಾಡಿಕೊಂಡು ಬಂದಿದ್ದೇನೆ” ಎಂದನು. ಮಗನಿಗೆ ವಿದ್ಯಾವಂತಳಾದ ಪಟ್ಟಣದ ಒಕ್ಕಲಿಗರ ಹೆಣ್ಣನ್ನು ಮದುವೆ ಮಾಡಿ ತನ್ನ ಮನೆಯಲ್ಲಿ ನಾಗರಿಕತೆಯನ್ನು ಬೆಳಸಬೇಕೆಂದಿದ್ದ ಅವನ ತಂದೆಗೆ ಮಗನು ಹಳ್ಳಿಗಾಡಿನ ಗೊಬ್ಬರದ ಹುಡುಗಿಯನ್ನು ಆರಿಸಿಕೊಂಡು ಬಂದುದನ್ನು ಕಂಡು ಬಹಳ

ಕೋಪವುಂಟಾಯಿತು. ಅವನು "ನಿನ್ನ ವೇಗ್ಯತೆಗೆ ಗೊಬ್ಬರದ ಹೆಣ್ಣೆ ಸರಿ. ಪಟ್ಟಣದಿಂದ ಚೆಂದುಳ್ಳ ಹುಡುಗೀನ ತಂದು ಮದ್ವೆ ಮಾಡಬೇಕು ಅಂತ ಮಾಡಿದ್ದೆ. ನೀನು ಹಳಸಿದ ಹಿಟ್ಟ ಹುಡ್ಕೊ ನಾಯಿ ಹಂಗೆ ಎಲ್ಲೋ ಹೋಗಿ ಕುಲಗೋತ್ರ ಗೊತ್ತಿಲ್ಲ ತಿರುಕರ ಹೆಣ್ಣ ತಂದೆ" ಎಂದು ಗದರಿಸಿ ಕೂಗಾಡಿದನು. ಬಸವಯ್ಯನು ಗೌರವದಿಂದ "ನಾನು ತಂದಿರುವ ಹುಡುಗಿಯನ್ನು ನೋಡದೆ ಅವಳಿಗೆ ಕುಲಗೋತ್ರಗಳಿಲ್ಲವೆಂದೂ ತಿರುಕರ ಹೆಣ್ಣೆಂದೂ ಹೇಳಬೇಡಿ. ಅವಳು ಬಡಹುಡುಗಿ ಹೌದು. ಆದರೆ ಹುಡುಗಿ ಚೆಂದಾಗಿದ್ದಾಳೆ. ಒಳ್ಳೆ ಗುಣ" ಎಂದು ವಾದಿಸಿದನು.

ಬಸವಯ್ಯನ ತಂದೆಗೆ ಪಟ್ಟಣದ ಒಕ್ಕಲಿಗರ ಸಂಬಂಧ ಮಾಡಬೇಕೆಂದೂ ರಾವಬಹದೂರು, ಧರ್ಮಪರಾಯಣ ಮುಂತಾದ ಬಿರುದುಗಳನ್ನು ಸಂಪಾದಿಸಿ ಪ್ರಜಾಪ್ರತಿನಿಧಿ ಸಭೆಗೆ ನೆಂಬರ್‌ದಾರನಾಗಬೇಕೆಂದೂ ಬಹಳ ದಿವಸಗಳಿಂದ ಆಸೆಯಿತ್ತು. ತನ್ನ ಐಶ್ವರ್ಯಕ್ಕೆ ಮರುಳಾಗಿದ್ದ ದೊಡ್ಡ ಅಧಿಕಾರಿಗಳೊಬ್ಬರ ಮಗಳನ್ನು ತಂದು ತನ್ನ ಮಗನಿಗೆ ಮದುವೆ ಮಾಡಬೇಕೆಂದು ಅವನು ಗೊತ್ತು ಮಾಡಿದ್ದನು. ಆ ಮದುವೆಯನ್ನು ಹೇಗೆ ಹೇಗೆ ಮಾಡಬೇಕು, ಅದಕ್ಕೆ ಖರ್ಚೆಷ್ಟು, ಅದರ ವೈಭವವೈಖರಿಗಳೇನು, ಯಾವ ರೀತಿ ಹಳ್ಳಿಯವರನ್ನೆಲ್ಲಾ "ಡಂಗ್" ಮಾಡಿ ಪಟ್ಟಣದವರಿಗೆ ತನ್ನಲ್ಲಿ ಗೌರವ ಹೆಚ್ಚುವಂತೆ ಮಾಡಬೇಕು ಮುಂತಾದವುಗಳನ್ನೆಲ್ಲಾ ಅವನು ಹತ್ತಾರು ವರ್ಷಗಳಿಂದಲೂ ಯೋಚಿಸಿ ಗೊತ್ತು ಮಾಡಿದ್ದನು. ಇಂಗ್ಲಿಷ್ ಕಲಿತು ಕಾಲಿಗೆ ಜೋಡನ್ನು ಹಾಕಿಕೊಂಡು ತಿರುಗುವ ಗಂಗಡಿಕಾರರ ಹುಡುಗಿಯು ನಮ್ಮ ಹಳ್ಳಿಗೆ ಬರುತ್ತಾಳೆಂಬುದು ನಮ್ಮ ಪ್ರಾಂತ್ಯದಲ್ಲೆಲ್ಲಾ ಸುದ್ದಿಯಾಗಿತ್ತು. ಪೆರಿಯಾಪಟ್ಟಣವಂತೂ ಆ ದೇವತೆಯನ್ನು ನೋಡಲು ಹುಚ್ಚೆದ್ದು ಕುಣಿಯುತ್ತಿತ್ತು. ಹಳ್ಳಿಗಳಲ್ಲಿ "ಬರಾವು" ಕಂಡ ಗಂಡಸರೇ ಅಪೂರ್ವ. ಇಂಗ್ಲಿಷ್ ಕಲಿತ ಒಕ್ಕಲಿಗರ ಹುಡುಗಿ ಅಲ್ಲಿಗೆ ಬರುವುದೆಂದರೆ ನಮ್ಮ ಜನರಿಗೆ ಅದಕ್ಕಿಂತ ಬೇರೆ ಸುದ್ದಿಯೇ ಬೇಕಿರಲಿಲ್ಲ. ಪ್ರತಿಯೊಬ್ಬರೂ ಬಸವಯ್ಯನ ಅಪ್ಪನಿಗೆ "ಜಾಗ್ರತೆ ಮದ್ವೆ ಮಾಡಿಬಿಡಿ, ಆ ವೈಭವ ನೋಡಿಬಿಡೋಣ" ಎಂಬುದಾಗಿ ಹೇಳುತ್ತಿದ್ದರು. ಮಗನ ಈ ಅವಿವೇಕದಿಂದ ಹಳ್ಳಿಯವರ ಎದುರಿಗೆ ತನ್ನ ವೈಭವವನ್ನು ಪ್ರಕಾಶಪಡಿಸಲು ಅವಕಾಶವಾಗಲಿಲ್ಲವಲ್ಲಾ, ಉಳಿದದ್ದೆಲ್ಲಾದರೂ ಹೋಗಲಿ ಎಂಬುದೇ ಬಸವಯ್ಯನ ತಂದೆಯ ಕೊರತೆಯಾಗಿತ್ತು. ಅವನು ಕಣ್ಣನ್ನು ಕೆಂಪಗೆ ಮಾಡಿಕೊಂಡು "ಅವೇಗ್ಯ, ನನ್ನ ಮಾನ ಹಾಳ್ಮಾಡ್ದೆ. ನಾನೆಲ್ಲಾಗ್ರೂ ಪಟ್ಟಣದ ಚೆಂದುಳ್ಳ ಹುಡ್ಗಿ ತರ್ತೇನೆ, ಅವಳ ಶಾಲೆ ಸೆಣೆಯೋಕೂ ಕಾಲು ತೊಳೆಯೋಕೂ ನಿಮಗೆ ವೇಗ್ಯತೆ ಇಲ್ಲ ಅಂತ ಜಂಬ ಹೊಡೀತಿದ್ದೆ. ಈಗ ಅವರೆಲ್ಲಾ ನನ್ನ ಹಾಸ್ಯ

ಮಾಡ್ತಾರೆ. ಹತ್ತು ವರ್ಷದಿಂದ ಜಂಭ ಹೊಡೆದು ಹಳ್ಳಿಹುಡುಗೀರನೆಲ್ಲಾ ದೂರಿದ ನಾನು ಇನ್ನು ಇವರೆದರ್ಗೆ ತಲೆ ಎತ್ಕೊಂಡು ತಿರಗೋದು ಹೇಗೆ?.... ಹೋಗು ನನ್ನ ಮನೆಬಿಟ್ಟು ತಿರ್ಪೆ ಹುಡ್ಗೀನ ಮದ್ವೆ ಆದದ್ಕೆ ತಿರ್ಪೆ ಮಾಡ್ಯೆ ಹೊಟ್ಟೆ ಹೊರ್ಕೊ. ನಾನು ದುಡಿದುಗಳಿಸಿರೋ ಹಣ ಕಂಡು ಹುಡುಗಿ ಉಪಾಯವಾಗಿ ನಿನ್ನ ಬಲೆಗೆ ಕೆಡವಿಕೊಂಡಿದಾಳೆ. ನಿನಗೊಂದು ಕಾಸೂ ಇಲ್ಲ ಅಂತ ತಿಳಿದ್ರೆ ಒದ್ದು ಓಡಸ್ತಾಳೆ. ಅವರ ಮಂಕಿಗೆ ನಾನು ಬೀಳೋನಲ್ಲ. ನನ್ನದೊಂದು ಕಾಸೂ ನಿನ್ಗೆ ಇಲ್ಲ. ಹೊರಡು ಮನೆಬಿಟ್ಟು, ತೆರದ ಹಣ ಇಲ್ದೆ ಹೆಂಗೆ ಮದ್ವೆ ಆಗ್ತೀಯ ನೋಡ್ತೀನಿ" ಎಂಬುದಾಗಿ ಕೂಗಾಡಿದನು. ಬಸವಯ್ಯನು ಸಮಾಧಾನದಿಂದ "ಮನೆಬಿಟ್ಟು ಹೋಯ್ತಿನಿ. ಆದರೆ ನಾನು ನಿಮ್ಮ ಮಗ ಅನ್ನೋದು ಹುಡುಗಿಗೆ ಗೊತ್ತಿಲ್ಲ. ಹಣ ಅಯ್ತೆ ಅಂತ ಹೇಳಿ ನಾನು ಅವಳ ಬಲೆಗೆ ಕೆಡಗಿಕೊಳ್ಳಲಿಲ್ಲ. ಅವಳು ನಾನೊಬ್ಬ ಕೂಲಿ ಆಳು ಅಂತ ತಿಳಿದಿದ್ದಾಳೆ. ನಿಮ್ಮ ಐಶ್ವರ್ಯ, ನಿಮ್ಮ ಪಟ್ಟಣದ ಹುಡ್ಗಿ, ಪಟ್ಟಣದ ನೆಂಟರು ಎಲ್ಲಾನೂ ನೀವೇ ಇಟ್ಕೊಳಿ. ನನಗೆ ಹಳ್ಳಿ ತಿರ್ಪೆ ಹುಡುಗೀನೆ ಸಾಕು. ಎಲ್ಲಾದರೂ ಕೂಲಿ ಮಾಡಿ ಹೊಟ್ಟೆ ತುಂಬ್ಕೊತೇನೆ" ಎಂಬುದಾಗಿ ಹೇಳಿ ಹೊರಟುಹೋದನು.

ಬಸವಯ್ಯ ತಂದೆಗೆ ಒಬ್ಬನೇ ಒಬ್ಬ ಮಗ. ಅವನು ಮತ್ತೆಂದಿಗೂ ಹಿಂದಿರುಗವುದಿಲ್ಲವೆಂದು ಮನೆಬಿಟ್ಟು ಹೋಗುತ್ತಿರುವುದನ್ನು ಕಂಡು ಅವನ ತಂದೆಗೆ ತುಂಬಾ ದುಃಖವುಂಟಾಯಿತು. ಅವನ ಮನೆಯೂ ಆಗಲೇ ಬರಿದಾಗಿ ಕಂಡಿತು. ಮಗನು ಹೋದ ಮೇಲೆ ತನ್ನ ಐಶ್ವರ್ಯವೆಲ್ಲಾ ವ್ಯರ್ಥ ವೆಂದು ಅವನಿಗೆ ಎನ್ನಿಸಿತು. ಅವನು ಹೋಗುತ್ತಿದ್ದ ಬಸವಯ್ಯನನ್ನು ಹಿಂದಕ್ಕೆ ಕರೆದನು. ಬಸವಯ್ಯನ ಕಣ್ಣಿನಲ್ಲಿ ನೀರು ತುಂಬಿತ್ತು. ಹಿಂದಕ್ಕೆ ಬಂದ ಮಗನನ್ನು ಕುರಿತು ತಂದೆಯು "ನಿನ್ನ ಇಷ್ಟ. ಈ ಮದುವೆಗೆ ಬರಲು ನನಗೆ ಮೊಖ ಇಲ್ಲ. ಮದ್ವೆ ಆಗೋಗಂಟ ನೀನಾರೆಂಬೋದ್ನ ಆ ಹುಡ್ಗೀಗೆ ಹೇಳ್ಬೇಡ....ಆಹಾ ಎಂತಾ ಹುಡ್ಗಿ ಗೊತ್ತುಮಾಡಿದ್ದೆ! ಹೋಗಲಿ" ಎಂದನು. ಬಸವಯ್ಯನು ತಂದೆಯ ಮಾತಿನಂತೆ ಒಪ್ಪಿಕೊಂಡು ಪೆರಿಯಾಪಟ್ಟಣದಿಂದ ನಮ್ಮ ಹಳ್ಳಿಗೆ ಹಿಂತಿರುಗಿದನು.

ಬಸವಯ್ಯ ನಮ್ಮೂರಿಗೆ ಹಿಂದಿರುಗಿದ ನಂತರ ಮದುವೆಯ ಸಿದ್ಧತೆಗಳೆಲ್ಲಾ ನಡೆದವು. ಬಸವಯ್ಯನ ಬಂಧು, ಬಳಗ, ತಂದೆತಾಯಿ ಯಾರೂ ಬರಲಿಲ್ಲವೆಂಬುದಾಗಿ ಊರಿನಲ್ಲಿ ಸ್ವಲ್ಪ ಚರ್ಚೆಯಾಯಿತು. ಮಾದನು "ಬರದಿದ್ದರೆ ಏನು? ಅವರಿಗೂ ಮುಪ್ಪು, ರಸ್ತೆ ಇಲ್ದ ಈ ದಾರಿ ಮೂವತ್ತು ಮೈಲಿ ನಡೆಯೋದು ಈ ಕಾಲದಲ್ಲಿ ಸುಖ ಅಲ್ಲ. ಮದ್ವೆ ಮಾಡ್ಕೊಂಡು ಹೋಗ್ಲಿ.

ಸೊಸೇನ ಕಣ್ತುಂಬ ನೋಡಿ ಸಂತೋಷ ಪಡ್ತಾರೆ" ಎಂದನು. ಜನರಿಗೆಲ್ಲಾ ಮದುವೆಯ ಉತ್ಸಾಹದ ಕಡೆ ಜ್ಞಾನವಿದ್ದುದರಿಂದ ಆ ವಿಚಾರದಲ್ಲಿ ಯಾರೂ ಹೆಚ್ಚಿಗೆ ಪ್ರಶ್ನೆ ಮಾಡಲಿಲ್ಲ.

ಪದ್ಧತಿಯಂತೆ ಆ ಸೋಮವಾರ ಮಾದನು ಊರಿನವರನ್ನೆಲ್ಲಾ ದೇವಸ್ಥಾನದಲ್ಲಿ ಸೇರಿಸಿದನು. ಮರುದಿವಸ ಊರಿನವರೆಲ್ಲಾ ಮನೆಗೆ ಒಂದಾಳಿನಂತೆ ಹೋಗಿ, ಊರ ಹಿಂದಲ ಕಾಡಿನಲ್ಲಿ ಸೌದೆಯನ್ನು ಕಡಿದು ಮದುವೆಯ ಮನೆಗೆ ಹಾಕಬೇಕೆಂದು ಗೊತ್ತಾಯಿತು. ಹಳ್ಳಿಯಲ್ಲಿ ಯಾವ ಮದುವೆಗಾದರೂ ಅಷ್ಟೆ. ಸೌದೆಯನ್ನು ಒದಗಿಸುವುದು ಹೀಗೆಯೆ. ಅನಂತರ ಪ್ರತಿ ಮನೆಗೂ ಹತ್ತು ಬಳ್ಳ ರಾಗಿ, ಹತ್ತು ಬಳ್ಳ ಭತ್ತವನ್ನು ರಾಗಿಯ ಹಿಟ್ಟು ಅಕ್ಕಿಯನ್ನು ಮಾಡಲು ಕೊಟ್ಟುದಾಯಿತು. ಸುತ್ತಾ ಹನ್ನೆರಡು ಹಳ್ಳಿಗಳಿಗೂ ಊಟದ ಚೀಟಿಗಳು ಹೋದುವು. ಹೆಣ್ಣಿಗೆ ಕೊಡಬೇಕಾದ ತೆರದ ಹಣ, ಅಕ್ಕಿ, ರಾಗಿ ಇವುಗಳನ್ನೆಲ್ಲಾ ಬಸವಯ್ಯನು ಸರಿಯಾಗಿ ಒಪ್ಪಿಸಿ ಬಿಟ್ಟನು. ಅವುಗಳಿಗೆಲ್ಲಾ ಹೊಸಬಿಯ ಗಂಡ ಮಾದನೇ ಅವನ ಪರವಾಗಿ ಯಜಮಾನನಾಗಿದ್ದನು.

ನಮ್ಮ ಕಡೆ ರೈತರಲ್ಲಿ ಹಾರುವದಾರೆ, ಬಳಗದಾರೆ ಎಂಬುದಾಗಿ ಎರಡು ತರಹ ಉಂಟು. ಹಾರುವುದಾರೆ "ಎರೆಸುವುದೇ" ಹೆಚ್ಚು ಗೌರವವುಳ್ಳ ವಿವಾಹಕ್ರಮ. ಹಾರುವದಾರೆಗೆ ನಮ್ಮೂರ ಜೋಯಿಸ ಹೋಗಲೇ ಬೇಕು. ಅವನಿಗೆ ಎಂಟು ಮೊಳದ ಒಂದು ಕಿರಿಗೆ ಸೀರೆ, ಒಂದು ತೆಂಗಿನ ಕಾಯಿ, ನಾಲ್ಕು ಬಾಳೆಯಹಣ್ಣು, ಒಂದು ರೂಪಾಯಿ, ಎಲೆ-ಅಡಕೆ ಇಷ್ಟು ದೊರೆಯುತ್ತದೆ. ಬಳಗದಾರೆಯಲ್ಲಿ ಜೋಯಿಸನಿದ್ದರೂ ಅವನ ಕೆಲಸ ಹೆಚ್ಚಿಲ್ಲ. ಒಕ್ಕಲಿಗ ಬಂಧುಬಳಗದವರೆಲ್ಲಾ ಗಂಡ-ಹೆಂಡರ ಕೈಯನ್ನು ಒಟ್ಟಿಗೆ ಸೇರಿಸಿ ಧಾರೆ ನೀರು ಬಿಡುತ್ತಾರೆ.

ನಮ್ಮೂರ ಜೋಯಿಸ ಒಕ್ಕಲಿಗರಿಗೆಲ್ಲಾ ಸಾಧಾರಣವಾಗಿ ಮದುವೆ ಮಾಡಿಸುತ್ತಾನೆ. ಆದರೆ ಒಂದೊಂದು ದಿವಸ ಸುತ್ತಮುತ್ತ ನಾಲ್ಕಾರು ಹಳ್ಳಿಗಳಲ್ಲಿ ಲಗ್ನವಿದ್ದರೆ ಎಲ್ಲವನ್ನೂ ಮಾಡಿಸಲು ಒಬ್ಬನಿಗೇ ಆಗುವುದಿಲ್ಲ. ಆ ಸಮಯಗಳಲ್ಲಿ ಜೋಯಿಸ ನಾಣಿಯನ್ನು ಒಂದೊಂದು ಕಡೆ ಕಳುಹಿಸುತ್ತಾನೆ. ನಾಣಿಗೆ ಮದುವೆ ಮಾಡಿಸುವುದು ಬರುವುದಿಲ್ಲ. ಆದರೆ ಅವನಿಗೆ ಒಕ್ಕಲಿಗರಲ್ಲಿ ನಿಜವಾದ ಪ್ರೀತಿ ಇದೆ. ಅವರೊಂದಿಗೆ ವಿನೋದವಾಗಿ ಮಾತು ಕತೆ ಆಡುತ್ತಾನೆ. ವಧೂವರರನ್ನು ಕುಚೇಷ್ಟೆ ಮಾಡುತ್ತಾನೆ. ಹೋದ ಕಡೆ ನಗುನಗುತ್ತಾ ಯಕ್ಷಗಾನದ ಪದಗಳನ್ನೂ ಗಾಡಿ ಪದಗಳನ್ನೂ ಬೀಗರ ಹಾಡುಗಳನ್ನೂ ಹಾಡುತ್ತಾ ಜನರಿಗೆ ಜೀವವನ್ನು ತುಂಬುತ್ತಾನೆ. ಆದುದರಿಂದ ಪುರೋಹಿತರಿಗಿಂತಲೂ ಒಕ್ಕಲಿಗರಿಗೆ ಅವನಲ್ಲಿ ವಿಶ್ವಾಸ ಹೆಚ್ಚಾಗಿದೆ. ಒಂದು ದಿವಸ

ನಮ್ಮೂರ ಶೀನಪ್ಪ, ನಾಣಿಯನ್ನು ಕುರಿತು "ಏನೋ, ಎಲ್ಲಾ ಕಡೇನೂ ನೀನೇ ಪೌರೋಹಿತ್ಯ ಹಿಡಿದುಬಿಟ್ಟೆ. ಯಾವ ಗುರುವಿನ ಹತ್ರ ಮಂತ್ರ ಕಲ್ತೆಪ್ಪ? ನೀನು ಮಾಡಿಸಿದ ಮೇಲೆ ಆ ಗಂಡ ಹೆಂಡರು ಉದ್ಧಾರವಾದಂತೆಯೆ!" ಎಂದನು. ನಾಣಿಯು ಶೀನಪ್ಪನಿಗೆ ಪ್ರತ್ಯುತ್ತರವನ್ನು ಕೊಡುವುದಕ್ಕೆ ಮುಂಚೆ ನಮ್ಮೂರ ನರಸಿಂಹ ಜೋಯಿಸರು "ಬಿಡೋ ಮಹಾ, ಒಕ್ಕಲಿಗನಿಗೆ ಮದುವೆ ಮಾಡಿಸೋಕೆ ಯಾವ ಮಂತ್ರ ಬರಬೇಕೋ. ಆ ಹಿಂದುಳಿದ ಅನಾಗರಿಕರಿಗೆ ವೇದದ ಮಂತ್ರ ಹೇಳಬೇಕೋ? ಸಾಕು ಸಾಕು. ಅಮರಕೋಶದ ಎರಡು ಶ್ಲೋಕ ಹೇಳಿದರೆ ತೀರಿತು" ಎಂದರು. ನಾಣಿಯು ನರಸಿಂಹ ಜೋಯಿಸರೊಂದಿಗೆ "ಸ್ವಾಮಿ, ರೈತನಿಗೆ ಹಾರುವನು ಹೇಳುವ ಮಂತ್ರವೇನೋ ಗೊತ್ತಿಲ್ಲ. ಆದರೆ ಹಾರುವರೆಂದುಕೊಳ್ಳುವ ನಮ್ಮಲ್ಲಿ ಎಷ್ಟು ಜನರಿಗೆ ಮಂತ್ರ ಗೊತ್ತಿದೆ ಸ್ವಾಮಿ? ನಮ್ಮಲ್ಲಿ ಅನೇಕರಿಗೆ ಮಂತ್ರವೆಂದರೇನೋ ಅದೇ ಗೊತ್ತಿಲ್ಲ. ಹಿಂದುಳಿದವರೆಂದು ನೀವು ಹೇಳಿದಿರಲ್ಲಾ, ನಮ್ಮಲ್ಲಿ ಹಾರುವರಲ್ಲಿ ಶೇಕಡ ೯೫ ಮಂದಿ ಹಿಂದುಳಿದವರಿದ್ದಾರೆ. ವಿದ್ಯದಲ್ಲಿಯೂ ನಾಗರಿಕತೆಯಲ್ಲಿಯೂ ಐಶ್ವರ್ಯದಲ್ಲಿಯೂ ಆಚಾರ-ವಿಚಾರದಲ್ಲಿಯೂ ಈ ನಾಮದ ಅಥವಾ ಅಕ್ಷತೆಯ ಒಕ್ಕಲಿಗರು ಹಿಂದುಳಿದ ದಟ್ಟಿ ಒಕ್ಕಲಿಗರಿಗಿಂತ ಯಾವ ವಿಧದಲ್ಲಿಯೂ ಮುಂದಾಗಿಲ್ಲ. ಹಿಂದುಳಿದವರೆನ್ನುವ ಒಕ್ಕಲಿಗರ ಪೈಕಿ ಪ್ರತಿಯೊಂದು ಪಿಳ್ಳೆಯೂ ಮನೆಯಲ್ಲಿ ದುಡಿದು ತನ್ನ ಜೀವನವನ್ನು ತಾನು ಸಂಪಾದಿಸುತ್ತದೆ. ಮುಂದುಳಿದ ಹಾರುವರ ಪೈಕಿ ಮನೆಗೆ ಒಬ್ಬ ದುಡಿಯುವುದೂ ಕಷ್ಟ. ಹಿಂದುಳಿದ ಒಕ್ಕಲಿಗರಲ್ಲಿ ಮಿತವ್ಯಯ ನೆಲಸಿದೆ. ಮುಂದುವರಿದ ಹಾರುವನಲ್ಲಿ ಮುಂದುಗಾರಿಕೆ ಹೆಚ್ಚಾಗಿದೆ. ಹಿಂದುಳಿದ ಒಕ್ಕಲಿಗನಿಗೆ ಸ್ವಾತಂತ್ರ್ಯದ ಅಭಿಮಾನ ಹೆಚ್ಚಾಗಿ, ಒಂದು ಎಕರೆ ಜಮೀನಿದ್ದರೂ ಅವನು ಅದರಿಂದಲೇ ಜೀವನವನ್ನು ಸಂಪಾದಿಸಿಕೊಂಡು ತಲೆ ಎತ್ತಿಕೊಂಡಿರಲು ಪ್ರಯತ್ನ ಪಡುತ್ತಾನೆ. ಮುಂದುಳಿದ ಹಾರುವನಲ್ಲಿ ಸಂಪಾದನೆಗೆ ಮೀರಿದ ಖರ್ಚು ಹೆಚ್ಚಿ, ದುಡಿಯಲು ಒಕ್ಕಲಿಗನಂತೆ ತ್ರಾಣವಿಲ್ಲದೆ, ಅವನಂತೆ ಸರಳ ಜೀವನವನ್ನು ನಡೆಸಲು ಅಭ್ಯಾಸವಿಲ್ಲದೆ ಕಂಡವರ ಗುಲಾಮನಾಗುವ ಹಂಬಲ ಹೆಚ್ಚಾಗಿದೆ. ನಮ್ಮ ಊರು, ನಮ್ಮ ಮನೆ, ನಮ್ಮ ಜಮೀನು, ನಮ್ಮಪ್ಪ ಉತ್ತ ಹೊಲ, ನಮ್ಮ ಪೂಜಿಸಿದ ಗುಡಿ, ನಮ್ಮ ದೊಡ್ಡ ಹೋರಿ ಮೇದ ಕಾವಲು—ಈ ರಾಷ್ಟ್ರೀಯ ಭಾವನೆ ಅವನಿಗೆ ತಿಳಿಯದಂತೆಯೇ ಒಕ್ಕಲಿಗನಲ್ಲಿ ನೆಲಸಿದೆ. ತನ್ನ ಹಳ್ಳಿ, ತನ್ನ ಹಳ್ಳಿಯ ಗೌರವ ಎಂದರೆ ಹಿಂದುಳಿದ ಒಕ್ಕಲಿಗನಿಗೆ ಪ್ರಾಣ. ಬುದ್ಧಿಶಕ್ತಿಯಲ್ಲಿಯೂ ಪರಂಪರೆಯಾದ ಮೂಢಾಚಾರವನ್ನು ಕುರುಡರಂತೆ ಅನುಸರಿಸುವುದರಲ್ಲಿಯೂ ಮುಂದುಳಿದ ಹಾರುವನು

ಹಿಂದುಳಿದ ಒಕ್ಕಲಿಗನಂತೆಯೇ ಮಂಕಾಗಿ ಆಚರಿಸುತ್ತಾನೆ. ಹೀಗಿರುವಲ್ಲಿ ಒಕ್ಕಲಿಗ ಯಾಕೆ ಸ್ವಾಮಿ ಹಿಂದು, ಅವ ಯಾಕೆ ಸ್ವಾಮಿ ಅನಾಗರಿಕ? ನಿಮ್ಮ ಹಾರುವ ಯಾಕೆ ಮುಂದು, ಯಾಕೆ ನಾಗರಿಕ?" ಎಂದನು. ನರಸಿಂಹ ಜೋಯಿಸರು "ನಿನ್ನದು ರಡ್ಡಾವದ" ಎಂದರು. ನಾಣಿಯು "ಸ್ವಾಮಿ, ನಮ್ಮೂರು ಹಾರುವರ ಮುಂದುವರಿದತನ ತಮಗೆ ಗೊತ್ತಿಲ್ಲವೆ? ಹೆಗ್ಗಣದಯ್ಯನ ತಮ್ಮನಿಗೆ ಪ್ರಸ್ತವಾದಾಗ, ಅವನ ತಮ್ಮನೂ ತಮ್ಮನ ಹೆಂಡತಿಯೂ ಬ್ರಾಹ್ಮಣರ ಆಶೀರ್ವಾದಕ್ಕಾಗಿ ಹಸೆಮಣೆಯ ಮೇಲೆ ಕೂತಿರಲಿಲ್ಲವೆ? ಆಗ ಹೆಗ್ಗಣದಯ್ಯನ ತಮ್ಮ ಹೆಂಡತಿಯೊಂದಿಗೆ ಕಿವಿಯಲ್ಲಿ ಏನೋ ಹೇಳಲು ಬಗ್ಗಿದ್ದಾಗ, ಹೆಗ್ಗಣದಯ್ಯ 'ಇದಾವ ಕರ್ಣಮಂತ್ರಗಳು' ಎನ್ನಲಿಲ್ಲವೇ? ಆಗ ತಾವು 'ಛಿ ಛಿ ಚಂಡಾಲ' ಎಂಬುದಾಗಿ ಅವನನ್ನು ಬಯ್ಯಲಿಲ್ಲವೆ? ನಿಮ್ಮ ಮುಂದುಳಿದ ಬ್ರಾಂಹಣರಿಗೆ ಮಂತ್ರದ ಅರ್ಥ ಗೊತ್ತಿದ್ದರೆ ಹಾಗೆ ಬೈಯುತ್ತಿದ್ದರೆ?" (ಕರ್ಣಮಂತ್ರವೆಂಬುದು ಮನುಷ್ಯನು ಸಾಯುತ್ತಿರುವಾಗ ಅಥವಾ ಸತ್ತಾದ ಮೇಲೆ ಅವನ ಕಿವಿಯಲ್ಲಿ ಹೇಳುವ ಮಂತ್ರ. ಜೀವದೊಂದಿಗೆ ಇರುವವನ ಕಿವಿಗೆ ಅದು ಬೀಳತಕ್ಕದಲ್ಲ. ಅದು ಅಶುಭದ ಮಂತ್ರ).

ನಾಣಿಯು ಇನ್ನೂ ಮುಂದೆ ಏನೇನು ಹೇಳುತ್ತಿದ್ದನೋ ? ನರಸಿಂಹ ಜೋಯಿಸರು ಕೋಪದಿಂದ ಎದ್ದು ಹೊರಟು ಹೋದರು.

ಬಸವಯ್ಯನ ಮದುವೆಯ ದಿವಸ ನಮ್ಮೂರು ಜೋಯಿಸರು ಊರಲ್ಲಿರಲಿಲ್ಲವಾಗಿ ನಾಣಿಯೇ ಬಸವಯ್ಯನಿಗೆ ಪುರೋಹಿತನಾಗಬೇಕಾಯಿತು. ನಾಣಿಯು ಶೀನಪ್ಪನೊಂದಿಗೆ "ಎಲೋ, ನಾನು ಸರಿಯಾಗಿ ಮಂತ್ರ ಹೇಳೋಲ್ಲ, ನಿಜ. ನನಗೆ ಬರೋದೂ ಇಲ್ಲ. ಅಮರಕೋಶದಿಂದ ನಾಲ್ಕು ವಾಕ್ಯ, ಭಗವದ್ಗೀತೆಯಿಂದ ನಾಲ್ಕು ಶ್ಲೋಕ, ರಾಜಶೇಖರವಿಲಾಸದ ಮೊದಲೆನೆಯ ಪದ್ಯ ಇಷ್ಟು ಹೇಳಿದರೆ ಸಾಕು. ಗಂಡಹೆಂಡರು ಮದುವೆಯಾಗಿ ಖುಷಿಯಾಗಿರೋವಾಗ ನಿನ್ನ ಗೊಡ್ಡು ಮಂತ್ರ ಯಾರು ಕೇಳ್ತಾರೆ? ನಮ್ಮ ಹಾರುವರಲ್ಲಿ ಎಷ್ಟು ಜನ ಮಂತ್ರ ಸರಿಯಾಗಿ ಹೇಳಿತೇ ಇಲ್ವೇ ನೋಡ್ತಾರೆ? ಒಕ್ಕಲಿಗರು ನಿನ್ನ ಮಂತ್ರಕ್ಕೆ ಬೆಲೆ ಇಟ್ಟಿಲ್ಲ. ಪುರೋಹಿತನ್ನ ಕರೆಯೋದು ಪೂರ್ವದಿಂದ ಬಂದ ಸಂಪ್ರದಾಯ, ಅದರಂತೆ ಕರೆಯುತ್ತಾರೆ, ಅಷ್ಟೆ" ಅಂದನು.

ಬಸವಯ್ಯನ ಮದುವೆಗೆ ನಾಣಿಯ ಜತೆಯಲ್ಲಿ ಶೀನಪ್ಪನೂ ಹೋದನು. ಮಾದಿಯ ಮನೆಯ ಬಾಗಿಲಿನಲ್ಲಿ ಒಂದು ಚಪ್ಪರ ಹಾಕಿತ್ತು. ಅದರ ಕೆಳಗಡೆ ದಾರಿ ನಡೆಯಬೇಕಾಗಿತ್ತು. ನಾಣಿಯನ್ನು ಕಂಡಕೂಡಲೇ ಒಕ್ಕಲಿಗರೆಲ್ಲಾ ಸಡಗರದಿಂದ ಅವನಿಗೆ ಸ್ವಾಗತ ಬಯಸಿದರು.

ವಧೂವರರು ಚಪ್ಪರದಲ್ಲಿ ಸೇರಿದ ಕೂಡಲೇ ನಾಣಿಯು "ರಾಜಶೇಖರವಿಲಾಸ"ದ ಮೊದಲನೆಯ ಪದ್ಯವನ್ನು ಎರಡುಸಲ ಗಟ್ಟಿಯಾಗಿಯೂ ಸ್ಪಷ್ಟವಾಗಿಯೂ ಪಠಿಸಿದನು. ಅನಂತರ "ಕಸ್ತೂರಿತಿಲಕೆ ಲಲಾಟಪಲಕೆ" ಎಂಬುದಾಗಿ ಹೇಳಿ, "ಬಸವಯ್ಯ, ಎಲ್ಲಿ ಪುಟ್ಟಮಲ್ಲಿಗೆಗೆ ತಿಲಕ ಹಚ್ಚು" ಎಂದನು. ಬಸವಯ್ಯನು ನಾಚಿಕೆಯಿಂದ ತಿಲಕವನ್ನು ಹಚ್ಚಿದನು. ಅನಂತರ "ವಕ್ಷಸ್ತಲೇ ಕುಂಕುಮಂ- ಅರಸಿನ ಕುಂಕುಮ ಹಚ್ಚು" ಎಂದನು. ಬಸವಯ್ಯನು ಅದರಂತೆ ಮಾಡಿದನು. ಆಮೇಲೆ ನಾಣಿಯು "ಶ್ರೀ ರಾಮಾನಟಿಕೌಸ್ತುಭದ್ಯುತಿ ಕಿರತ್ಪುಷ್ಪಾಂಜಲಿಕ್ಷೇಪವಕ್ಷೋರಂಗಸ್ಥಿತೆ" ಎಂಬುದಾಗಿ ಹೇಳಿ, "ಎಲ್ಲಿ ತಲೆಗೆ ಪುಷ್ಪವನ್ನು ಮುಡಿಸು" ಎಂದನು. ಬಸವಯ್ಯನು ನಗು ನಗುತ್ತಾ ಹೂವನ್ನು ಮುಡಿಸಿದನು. ಅನಂತರ ನಾಣಿಯು "ಅಘಟನಾ ಘಟಿತ ಸಂಯುಕ್ತಂ ಬ್ರಹ್ಮ ಕಟ್ಟಿದ ಕಂಕಣಂ" ಎಂಬುದಾಗಿ ಗಟ್ಟಿಯಾಗಿ ಹೇಳಿ, "ಕಟ್ಟು ಕಂಕಣ" ಎಂದನು. ಬಸವಯ್ಯನು ಕಂಕಣವನ್ನು ಕಟ್ಟಿದನು. ಆಮೇಲೆ ನಾಣಿಯು ಗಂಡ ಹೆಂಡಿರಿಬ್ಬರನ್ನೂ ಸೇರಿಸಿ, ಕದರಿನ ಜನಿವಾರದ ನೂಲನ್ನು ಅವರ ಸುತ್ತ ಇಪ್ಪತ್ತು ಮೂವತ್ತು ಸುತ್ತು ಪಿಟಪಿಟನೆ ಮಂತ್ರವನ್ನು ಹೇಳುತ್ತಾ ಸುತ್ತಿ, "ಹರಿಣಾಪಿ ಹರೇಣಾಪಿ ಬ್ರಹ್ಮಣಾಪಿ ಸುರೈರಪಿ ಲಲಾಟಲಿಖಿತಾ ರೇಖಾ" ಎಂಬ ಶ್ಲೋಕವನ್ನು ಹೇಳಿ, "ಮಂಗಳಂ ಕೋಸಲೇಂದ್ರಾಯ ಮಹನೀಯ ಗುಣಾತ್ಮನೇ | ಚಕ್ರವರ್ತಿ ತನೂಜಾಯ ಸಾರ್ವಭೌಮಾಯ ಮಂಗಳಂ || ಲೋಕಕ್ಕೆಲ್ಲಾ ಮಂಗಳವಾಗಲಿ, ಚಕ್ರವರ್ತಿಗೆ ಸಮಾನವಾದ ಮಗ ದಂಪತಿಗಳಿಗೆ ಹುಟ್ಟಲಿ" ಎಂಬುದಾಗಿ ಆಶೀರ್ವದಿಸಿದನು. ನಾಣಿಗೆ ಪದ್ಧತಿಯಂತೆ ಗಂಡಹೆಂಡರು ದಣ್ಣಿಕ್ಕಿದರು. ಆಮೇಲೆ ನಾಣಿಯ ಶೀನಪ್ಪನೂ ತಮ್ಮ ತಮ್ಮ ಮನೆಗಳಿಗೆ ಹೋದರು.[4]

ಅನಂತರ ರಾತ್ರಿಯ ಊಟದ ಏರ್ಪಾಡು ನಡೆಯತೊಡಗಿತು. ನಾವು ಊಟಕ್ಕೆ ಕರೆಯಬೇಕಾದರೆ "ಈ ಮಧ್ಯಾಹ್ನ ಭಗವದಾರಾಧನೆಗೆ ದಯ ಮಾಡಿಸಬೇಕು" ಎಂದು ಮುಂತಾಗಿ ಕರೆಯುತ್ತೇವೆ. ನಮ್ಮೂರು ದೇವಸ್ಥಾನಕ್ಕೆ ಬ್ರಾಹ್ಮಣರನ್ನು ಊಟಕ್ಕೆ ಕರೆಯಬೇಕಾದರೆ, ಊರಿನ ಸುತ್ತಾ ಗಂಟೆ ಮೂರುಸಲ ಬಾರಿಸಬೇಕು. ಊಟಕ್ಕೆ ಹೋಗುವುದಕ್ಕೆ ಅದೇ ಗುರುತು. ಒಕ್ಕಲಿಗರು ಹಾಗೆ ಕರೆಯುವುದಿಲ್ಲ. ನಮ್ಮೂರ ಒಕ್ಕಲಿಗರು "ಇಳ್ಳೀಕೆ ಒಲೆಗೆ ಬೆಂಕಿ ಇಕ್ಬೇಡಿ" ಎಂಬುದಾಗಿ ಕರೆಯುತ್ತಾರೆ. ಹಳ್ಳಿಗಳಿಗೆ ಹೋಗಿದ್ದ ಚೀಟಿಗಳಲ್ಲಿ "ಇಂತಾ ದಿವಸ ದಾರೆ. ಇಳ್ಳೀಕೆ ಒಲೆಗೆ ಬೆಂಕಿ ಇಕ್ಬೇಡಿ" ಎಂದೇ ಬರೆದಿದ್ದಿತು. ಮದುವೆಗೆ ಮೊದಲ ದಿವಸ ದೇವರ ಊಟವೆಂದು ಮಾಡುತ್ತಾರೆ.

---

[4] ಇದನ್ನು ಓದಿದವರು ಈ ರೀತಿ ಮದುವೆ ಮಾಡಿಸುವುದಕ್ಕೆ ಹೋಗಬೇಡಿ. ಏಟು ಬಿದ್ದೀತು.

ಅದರಲ್ಲಿ ಒಂದು ಆಡನ್ನು ಹುಯ್ಯುವ ಪದ್ಧತಿ. ಆ ಊಟಕ್ಕೆ ಸಾಧಾರಣವಾಗಿ ಗಂಡಸರನ್ನು ಮಾತ್ರ ಕರೆಯುತ್ತಾರೆ. ಆಗ ಊಟಕ್ಕೆ ಕರೆಯಬೇಕಾದ್ರೆ "ಇಳ್ಳೀಕೆ ಗಂಡಸರಿಗೆ ಉಣ್ಣೋಕೆ ಇಕ್ಬೇಡಿ" ಎಂಬುದಾಗಿ ಕರೆಯುತ್ತಾರೆ. ಹೆಂಗಸರನ್ನು ಮಾತ್ರ ಕರೆಯಬೇಕಾದರೆ "ಇಳ್ಳೀಕೆ ಮನ್ಲಿ ಗಂಗ್ಲಾ ಎಂಜಲ್ಮಾಡಬೇಡಿ" ಎಂಬುದಾಗಿ ಹೇಳುತ್ತಾರೆ.

ನಮ್ಮ ಹಳ್ಳಿಯಲ್ಲಿ ಸಾಧಾರಣವಾಗಿ ಮದುವೆ ಕಾಲದಲ್ಲಿ ಯಾವುದಾದರೂ ಪಂಚಾಯ್ತಿ ಬಿದ್ದೇ ಬೀಳುತ್ತದೆ. ಒಂದು ಮದುವೆ ಆದ ಮೇಲೆ ಮತ್ತೊಂದು ಮದುವೆ ನಡೆಯುವವರೆಗೆ ಊರಿನಲ್ಲಿ ಯಾರು ಯಾರಿಗೆ ಯಾವ ಯಾವ ಕಾರಣದಿಂದ ವ್ಯಾಜ್ಯ ಬಂದಿದ್ದರೂ ಆ ದಿವಸ ಅದು ತೀರ್ಮಾನವಾಗಿಬಿಡುತ್ತದೆ. ಹಾಗೆ ತೀರ್ಮಾನವಾದ ಹೊರತು ಯಾರೂ ತುತ್ತನ್ನು ಮೇಲೆಕ್ಕೆ ಎತ್ತುವುದಿಲ್ಲ. ಸಾಧಾರಣವಾಗಿ ಇಂಥ ಪಂಚಾಯ್ತಿಗಳಿಗೆ ನ್ಯಾಯ ಎಂದು ಹೆಸರು. ಎಲೆಯ ಮುಂದೆ ಕುಳಿತ ನಂತರ ಊಟಕ್ಕೆ ಮುಂಚೆ ದೂರನ್ನು ಹೇಳಲು ಎಲ್ಲರಿಗೂ ಸಮವಾದ ಅಧಿಕಾರವುಂಟು. ಅಲ್ಲಿ ಯಾವ ಪಿಳ್ಳೆಯ ಮಾತನ್ನೂ ಎತ್ತಿಹಾಕುವಂತಿಲ್ಲ. ನ್ಯಾಯವು ಬಹಳ ನಿಷ್ಪಕ್ಷಪಾತ ದೃಷ್ಟಿಯಿಂದ, ಸ್ವಪಕ್ಷ ಪರಪಕ್ಷದ ಭೇದವಿಲ್ಲದೆ, ಹತ್ತು ಹಳ್ಳಿಯವರ ಎದುರಿನಲ್ಲಿ ತೀರ್ಮಾನಿಸಲ್ಪಡುತ್ತದೆ. ಈ ನ್ಯಾಯ ಯಾವ ಕೋರ್ಟು ನ್ಯಾಯಕ್ಕೂ ಕಡಿಮೆಯಾದುದಲ್ಲ. ಹಳ್ಳಿಯ ಕೊಳೆಯೆಲ್ಲಾ ಆ ನ್ಯಾಯದೊಂದಿಗೆ ನಿರ್ಮಲವಾಗುತ್ತದೆ. ಆದರೆ ಊಟ ಒಂದೊಂದು ವೇಳೆ ಸ್ವಲ್ಪ ಹಳಸಿಹೋಗುವುದೂ ಉಂಟು.

ಬಸವಯ್ಯನ ಮದುವೆ ಊಟದಲ್ಲಿ ಅಂಥ ನ್ಯಾಯ ಯಾವುದೂ ಬೀಳುವ ಪ್ರಸಂಗ ಕಾಣಲಿಲ್ಲ. ರಾತ್ರಿ ಹನ್ನೆರಡು ಗಂಟೆಗೆ ಊಟ ಮುಗಿಯಬಹುದೆಂದೂ ಅನಂತರ ಕೋಲಾಟದಲ್ಲಿ ವಿನೋದವಾಗಿ ಒಂದೆರಡು ಗಂಟೆಗಳನ್ನು ಕಳೆಯಬಹುದೆಂದೂ ಜನರು ಊಹಿಸಿದ್ದರು. ನಡುಬೀದಿಯ ಬೆಳದಿಂಗಳಿನಲ್ಲಿ ಎಲ್ಲರಿಗೂ ಮೂರು ಎಲೆಗಳನ್ನೂ ಹಂಚಿಕಡ್ಡಿಗಳನ್ನೂ ಕೊಟ್ಟು, ಅವರೆಲ್ಲರೂ ಎಲೆಗಳನ್ನು ಹಚ್ಚಿಕೊಂಡು ಕುಳಿತನಂತರ ಬಡಿಸುವದಕ್ಕೆ ಪ್ರಾರಂಭವಾಯಿತು. ಆಗ ಮಾದನು ಎದ್ದು ನಿಂತು "ಹನ್ನೆರಡು ಹಳ್ಳಿಯ ಮಾನ್ಯರಿರಾ, ನಂದೊಂದು ನ್ಯಾಯ ಅಯ್ತೆ" ಎಂದನು. ನ್ಯಾಯ ಎಂದ ಮೇಲೆ ನಾಲ್ಕು-ಐದು ಗಂಟೆ ಹಿಡಿಯುವುದೆಂದು ಬಡಿಸುವುದಕ್ಕೆ ಬಂದಿದ್ದವರು ಹಿಟ್ಟನ್ನೂ ಅನ್ನವನ್ನೂ ಒಳಗಿಟ್ಟು ತೆಪ್ಪಗೆ ಕುಳಿತರು. ಮಾದನು ಯಾವಾಗಲೂ ಯಾರ ಮೇಲೂ ಸಭೆಗಳಲ್ಲಿ ದೂರು ತಂದವನಲ್ಲ. ದೂರು ತರುವುದು ಅವನ ಸ್ವಭಾವವಾಗಿರಲಿಲ್ಲ. ಈಗ ಅವನು ಎದ್ದು ನಿಂತುದರಿಂದ ಎಲ್ಲರಿಗೂ ಆಶ್ಚರ್ಯವಾಯಿತು.

ತಳವಾರ ಕರಿಯನಿಗೆ ಸ್ವಲ್ಪ ಭಯವುಂಟಾಯಿತು. ಮಾದನು ಈ ರೀತಿ ಹೇಳಿದನು: "ತಳವಾರ ಕರಿಯ ಈ ಮದ್ವೆ ಸಂದರ್ಪದಲ್ಲಿ ಮಾಡಿರೋ ಆಚಾರ ನಮ್ಮೂರ್ಗೆ ಹೆಸರು ತರೋ ಹಂಗಿಲ್ಲ. ಇಂತಾ ಇಚಾರ ಹೊರಗಿನೋರ್ಗೆ ತಿಳಿದ್ರೆ ಅವರು ನಮ್ಮೂರಲ್ಲಿ ನಮ್ಮ ಹಾಸ್ಯ ಮಾಡ್ಕೊಂಡು ನಗ್ತಾರೆ. ಈ ನ್ಯಾಯ ತೀರ್ಮಾನ ಆದ ಹೊತ್ತು ತುತ್ತು ಎತ್ತೋ ಹಂಗಿಲ್ಲ" ಎಂದನು. ಅನಂತರ ತಳವಾರನು ಐನೂರಿಗೆ ಹೇಳಿಕೊಟ್ಟುದು, ಐನೂರು ಪುಟ್ಟಮಲ್ಲಿಗೆಗೆ ಇಲ್ಲದ ಭಯವನ್ನು ಹುಟ್ಟಿಸಿದುದು, ಬುಡಬುಡಕೆ ಹೆಂಗಸಿಗೆ ಕರಿಯನು ಲಂಚಕೊಟ್ಟು ಅವಳಿಂದ ಸುಳ್ಳು ಸಕನ ಹೇಳಿಸಿದುದು— ಇವುಗಳನ್ನೆಲ್ಲಾ ಹೇಳಿ, ಕರಿಯನಿಗೆ ಈ ತಪ್ಪಿಗೆ ತಕ್ಕ ಅಪರಾಧ ವಿಧಿಸದೆ ಇದ್ದರೆ ಹಿಟ್ಟಿನ ಮುದ್ದೆ ಮುರಿಯೋ ಹಂಗೆ ಇಲ್ಲ" ಎಂಬುದಾಗಿ ಹೇಳಿ ಕುಳಿತುಕೊಂಡನು. ತಳವಾರನಿಗೆ ಮಾದನ ಮಾತುಗಳನ್ನು ಕೇಳಿ ಕೋಪವುಂಟಾಯಿತು. ಅವನು "ಇದೆಲ್ಲಾ ಸುಳ್ಳು, ಇದ್ಕೆ ಸಾಕ್ಷಿ ಯಾರೂ ಇಲ್ಲ. ನನ್ನ ಮೇಲಿನ ಜಿದ್ದಿನಿಂದ ನೀನು ಹಿಂಗೆ ಹೇಳ್ತೀಯ" ಎಂದನು. ಅನಂತರ ಸಭಾಸದರು ಪೂಜಾರಿಯನ್ನು ಕರೆಸಿ "ನಿನ್ನ ದೇವರ ಮೇಲೆ ಆಣೆ ಹಾಕಿ ಹೇಳು" ಎಂದರು. ಪೂಜಾರಿಯು ಇದ್ದ ವಿಚಾರಗಳನ್ನು ಒಪ್ಪಿಕೊಂಡನು. ಕೊನೆಗೆ ತಳವಾರ ಕರಿಯನು ತಾನು ಮಾಡಿದುದು ತಪ್ಪೆಂದೂ ಮನ್ನಿಸಬೇಕೆಂದೂ ಹೇಳಿ ಸಭೆಗೆ ದಣ್ಣಿಕ್ಕಿದನು. ಅವನಿಗೆ ಎರಡು ರೂಪಾಯಿ ದಂಡವನ್ನು ಹಾಕಿದರು. ಊಟ ರಾತ್ರಿ ಎರಡು ಗಂಟೆಗೆ ಮುಗಿಯಿತು.

ಬಸವಯ್ಯನ ಮದುವೆಯಲ್ಲಿ ನಮ್ಮ ಊರಿನಲ್ಲಿ ಹಿಂದೆ ಒಂದು ಸಲ ನಡೆದಿದ್ದಂತೆ ಎಲೆ ಅಡಿಕೆ ವ್ಯಾಜ್ಯ ನಡೆಯದಂತೆ ಮಾದನು ಏರ್ಪಾಡು ಮಾಡಿದ್ದನು. ನಮ್ಮ ಊರಿನ ಸುತ್ತ ಮಾಮೂಲು ಆಗಿರುವ ಹನ್ನೆರಡು ಗ್ರಾಮದ ಪಟೇಲರಿಗೂ ಹನ್ನೆರಡು ಕಟ್ಟು ವೀಳೆಯದೆಲೆ ಮತ್ತು ಹನ್ನೆರಡು ಸೇರು ಅಡಕೆಯನ್ನು ಕಳುಹಿಸಿದರು. ಒಕ್ಕಲಿಗರಲ್ಲಿ ಎಲೆ ಅಡಕೆ ಗೌರವ ಬಹಳ ಹೆಚ್ಚಾದುದು. ಎಲೆ ಅಡಕೆ ಕೊಡುವುದರಲ್ಲಿ ಅವರು ಬಹಳ ಧಾರಾಳಿಗಳಾಗಿರುತ್ತಾರೆ. ಇಪ್ಪತ್ತು ವೀಳೆಯದೆಲೆ, ಒಂದು ಬೊಗಸೆ ಅಡಕೆಗೆ ಕಡಿಮೆಯಾಗಿ ಅವರು ಯಾರಿಗೂ ಕೊಡುವುದಿಲ್ಲ. ಮದುವೆಗಾಗಿ ನೂರು ಪಿಂಡಿ, ಇನ್ನೂರು ಪಿಂಡಿ ಎಲೆಗಳನ್ನು ಕೊಳ್ಳುವುದು ಅವರ ಪದ್ಧತಿ.

ಮದುವೆಯಲ್ಲಿ ಎಲೆ ಅಡಕೆ ಕೊಡಬೇಕಾದರೆ, ಒಕ್ಕಲಿಗರು ನಮ್ಮಂತೆ ಒಂದು ವೀಳೆಯದೆಲೆಯೊಳಗೆ ಒಂದು ಸಾಸಿವೆಕಾಳಿನಷ್ಟು ಅಡಕೆ ಇಟ್ಟು ಅದಕ್ಕೆ ಒಂದು ಕಡ್ಡಿಯನ್ನೂ ಗುಂಡು ಸೂಜಿಯನ್ನೂ ಚುಚ್ಚಿ ಕೊಡುವದಿಲ್ಲ. ನಮ್ಮಲ್ಲಿ ಅದಕ್ಕೆ ಕರ್ಚಿ ಎಲೆ ಎಂದು ಹೆಸರು. ನಾವು ಅದನ್ನು ಕುಳಿತ ಸ್ಥಳದಲ್ಲಿಯೇ ಹಾಕಿ ಹೋಗುತ್ತೇವೆ. ಒಕ್ಕಲಿಗನ ಮದುವೆಯಲ್ಲಿ ಒಂದು ಭಾರಿ

ಕುಕ್ಕೆಯಲ್ಲಿ ನೂರಾರು ಕಟ್ಟು ಎಲೆಯನ್ನೂ ಮತ್ತೊಂದು ಕುಕ್ಕೆಯಲ್ಲಿ ನಾಲ್ಕು ಮಣ ಅಡಕೆಯನ್ನೂ ಇಟ್ಟುಕೊಂಡು, ಒಬ್ಬೊಬ್ಬನಿಗೆ ಒಂದು ಕಟ್ಟು ಎಲೆ, ಒಂದು ಬೊಗಸೆ ಅಡಕೆಯಂತೆ ಇಬ್ಬರೂ ಕೊಟ್ಟುಕೊಂಡು, ಹೋಗುತ್ತಾರೆ. ಒಕ್ಕಲಿಗರೆಲ್ಲಾ ದುಪಟಿಯೊಡ್ಡಿ ಆ ಎಲೆ ಅಡಕೆಯನ್ನು ತೆಗೆದುಕೊಳ್ಳುತ್ತಾರೆ. ಆ ಕಾಲದಲ್ಲಿ ಯಾರನ್ನಾದರೂ ಮರೆತರೆ ದೊಡ್ಡ ಮನಸ್ತಾಪವೇ ಉಂಟಾಗುತ್ತದೆ.

ಮದುವೆಯಾದ ಕೂಡಲೆ ಹೆಂಡತಿಯನ್ನು ಕರೆದುಕೊಂಡು ಪೆರಿಯಾಪಟ್ಟಣಕ್ಕೆ ಹೋಗಬೇಕೆಂಬುದು ಬಸವಯ್ಯನ ಇಷ್ಟವಾಗಿತ್ತು. ಆದರೆ ಮದುವೆಯ ಕಾಲವಾದುದರಿಂದ ನಮ್ಮ ಊರಿನ ಓಲಗದವರು ಬೇರೆ ಹಳ್ಳಿಗೆ ಹೋಗಿದ್ದರು. ಓಲಗ ಬರುವವರೆಗೆ ಬಸವಯ್ಯ ನಮ್ಮೂರು ಬಿಟ್ಟು ಹೊರಡುವಂತಿರಲಿಲ್ಲ. ಮದುವೆಯಾದ ಮೇಲೆ, ಓಲಗವಿಲ್ಲದೆ ಗಂಡ ಹೆಂಡರನ್ನು ಅವರ ಊರಿಗೆ ಸಾಗಕಳುಹಿಸುವುದು ವಾಡಿಕೆಯಲ್ಲ. ಹಳ್ಳಿಗಳಲ್ಲಿ ಓಲಗ ಸಿಕ್ಕದೆ ಗಂಡಿನ ಕಡೆಯವರು ಎರಡು-ಮೂರು ತಿಂಗಳು ಹೆಣ್ಣಿನ ಮನೆಯಲ್ಲಿ ಇದ್ದುದುಂಟು. ಅಂತೂ ಇಪ್ಪತ್ತೈದು ದಿವಸಗಳನಂತರ ಅವರು ಊರಿಗೆ ಬಂದರು. ಊರಿನವರೆಲ್ಲಾ ಓಲಗದೊಂದಿಗೆ ಹೋಗಿ ಬಸವಯ್ಯನನ್ನೂ ಪುಟ್ಟಮಲ್ಲಿಗೆಯನ್ನೂ ಪೆರಿಯಾಪಟ್ಟಣಕ್ಕೆ ದಾರಿಕಳುಹಿಸಿ ಬಂದರು.

ಬಸವಯ್ಯ ಪುಟ್ಟಮಲ್ಲಿಗೆಯನ್ನು ಪೆರಿಯಾಪಟ್ಟಣಕ್ಕೆ ಕರೆದುಕೊಂಡು ಹೋದನು. ನಮ್ಮೂರ ಪುಟ್ಟಮಲ್ಲಿಗೆಯ ಗಂಡ ಪೆರಿಯಾಪಟ್ಟಣದ ಸಾಹುಕಾರ ಬಸವಯ್ಯನೆಂದು ತಿಳಿದಾಗ ನಮ್ಮ ಊರಿನವರು ಆನಂದದಿಂದ ಕುಣಿದರು. ಪುಟ್ಟಮಲ್ಲಿಗೆಗೆ ಮೊದಲು ಬಹಳ ಆಶ್ಚರ್ಯವಾಯಿತು. ಅನಂತರ ಸಂತೋಷವುಂಟಾಯಿತು. ಈಗಂತೂ ಅವಳು ತಾನು ಹುಟ್ಟಿದಂದಿನಿಂದಲೂ ಸಾಹುಕಾರನ ಹೆಂಡತಿಯಾಗುವುದಕ್ಕಾಗಿಯೇ ಬೆಳೆದಳೋ ಎಂಬಷ್ಟು ಸ್ವಾಭಾವಿಕವಾದ ರೀತಿಯಲ್ಲಿ ಆ ದೊಡ್ಡ ಮನೆಯ ಕೆಲಸಕಾರ್ಯಗಳನ್ನು ಸಾಗಿಸಿಕೊಂಡು ಹೋಗುತ್ತಿದ್ದಾಳೆ. ಅವಳ ಗಾಂಭೀರ್ಯ, ಉದಾರತೆ, ಇತರರಿಗೆ ಸಹಾಯ ಮಾಡಬೇಕೆಂಬ ಅವಳ ಆಸೆ, ನಮ್ಮ ಊರು, ನಮ್ಮ ಜನರನ್ನು ಕಂಡರೆ ಅವಳಿಗಿರುವ ಹೆಚ್ಚಾದ ಅಭಿಮಾನ—ಇವು ಆ ಸಾಹುಕಾರನ ಹೆಂಡತಿಗೆ ಭೂಷಣವಾಗಿವೆ.

# ದೃಷ್ಟಿಲಾಭ

ಶೇಷು ವಿಕಾರಿ. ಕಾಗೆಯ ಹಾಗೆ ಇದ್ದಾನೆ. ಇಸಮು ಕುಳ್ಳು. ಕಪ್ಪೆಯಂತೆ ಯಾವಾಗಲೂ ಒಟಗುತ್ತುತ್ತಾನೆ. ಬಾಲ್ಯದಲ್ಲಿ ಸಿಡುಬು ತಿಂದು ಉಳಿಸಿರುವ ಕರೆಯ ಮಚ್ಚೆಯ ಮುಖ. ಬೆಂಕಿ ಮೇಯಲು ಯತ್ನಿಸಿ ದ್ರವವನ್ನೆಲ್ಲಾ ಹೀರಿ ಕೊನೆಗೆ ನಿಸ್ಸಾರವಾದುದೆಂದು ಬಿಟ್ಟಿರುವ ಕೈಕಾಲುಗಳು. ಮಂಡಿಯವರೆಗೆ ಜೋತುಬಿದ್ದಿರುವ ಹೊಟ್ಟೆ, ಹಕ್ಕಿಗಡಕ ರೋಗದ ಮಕ್ಕಳಂತೆ ಎಷ್ಟು ತಿಂದರೂ ತೃಪ್ತಿಯೇ ಆಗದ ಮುಖದಲ್ಲಿ ಒಂದು ವಿಧವಾದ ಹಸಿವು. ಒಟ್ಟಿನಲ್ಲಿ ಅವನ ಜತೆಯಲ್ಲಿರುವುದೆಂದರೆ ಬನಿಯನ್ ಒಳಗೆ ಬೆನ್ನಿನಲ್ಲಿ ಕಪ್ಪರಶುಂಟಿ ಇಟ್ಟುಕೊಂಡ ಹಾಗೆ.

ಈ ಕಪೋರ ಬಾಲ್ಯದಿಂದ ನನ್ನ ಸ್ನೇಹಿತ. ಆ ಬಾಲ್ಯದಲ್ಲಿಯೂ ಹುಡುಗರಾರೂ ಅವನ ಜತೆ ಸೇರುತ್ತಿರಲಿಲ್ಲ. ಅವನನ್ನು ಕಂಡ ಕಡಲೆ ಹುಡುಗರಿಗೆ ಸ್ವಾಭಾವಿಕವಾಗಿ ಒಂದು ಬಗೆಯ ತಿರಸ್ಕಾರವೂ ಅಸಹ್ಯವೂ ಕೆಲವು ವೇಳೆ ಭಯವೂ ಉಂಟಾಗುತ್ತಿದ್ದಿತು. ನಾನು ಅವನ ಸ್ನೇಹವನ್ನು ಮಾಡಿದ್ದುದು ಮುಖ್ಯವಾಗಿ ನಾಲಗೆಯ ಚಪಲದಿಂದ. ನಮ್ಮ ಊರಿನಲ್ಲಿ ಸೀಮೆ ಹುಣಿಸೆಯ ಮರ ಹೆಚ್ಚು. ಅದರ ಹಣ್ಣನ್ನು ತಿನ್ನುವುದಕ್ಕಾಗಿ ನಾವು ಹಗಲು ರಾತ್ರಿ ಆ ಮರಗಳ ಕೆಳಗೆ ನಿಂತಿರುತ್ತಿದ್ದೆವು. ಆ ಹಾಳು ಮರದ ಮೈಕೂದಲುಗಳೆಲ್ಲಾ ಬರಿಯ ಮುಳ್ಳುಗಳೆ. ಮರವನ್ನು ಹತ್ತುವುದಕ್ಕೆ ನಮಗಾರಿಗೂ ಧೈರ್ಯವಿರಲಿಲ್ಲ. ಶೇಷು ಮಾತ್ರ ನಿರ್ಲಕ್ಷ್ಯವಾಗಿ ಮರವನ್ನು ಹತ್ತುತ್ತಿದ್ದನು. ಮುಳ್ಳು ಅವನ ಮೈಗೆ ಮುರಿದುಕೊಳ್ಳುತ್ತಿದ್ದಿತೇ ಹೊರತು ಅದರಿಂದ ಅವನಿಗೆ ಏನೂ ಆದಂತೆ ತೋರುತ್ತಿರಲಿಲ್ಲ. ಗಿಳಿಗಳು ಕಚ್ಚಿ ಕೆಳಕ್ಕೆ ಎಸೆಯುತ್ತಿದ್ದ ಸೀಮೆಹುಣಿಸೆಯ ಒಂದೊಂದು ಬೋಟಿಗೂ ತಿರುಕರಂತೆ ಕಾಯುತ್ತಿದ್ದ ನಮ್ಮೆದುರಿಗೆ ಶೇಷು ಧನಿಕನಂತೆ ಎರಡೆರಡು ಜೇಬು ಕೆಂಪು ಗೊಂಗರೆಗಳನ್ನು ತುಂಬಿಕೊಂಡು ಕೆಳಕ್ಕೆ ಇಳಿದು, ಮೈಗೆ ಮುರಿದಿದ್ದ ಮುಳ್ಳುಗಳನ್ನು ಕಿತ್ತುಹಾಕುತ್ತಿದ್ದನು. ಅವನು ಆಗಿನಿಂದಲೂ ಪೋಕರಿ, ಪೋಲಿ, ತುಂಟ. ಅವನ ಜತೆ ಸೇರಿದರೆ, ಹುಡುಗರಿಗೆ ತಾಯಿತಂದೆಗಳಿಂದ ಬೈಗಳವಾಗುತ್ತಿದ್ದಿತು. ನಾನು ಅವನ ಜತೆ ಸೇರುತ್ತಿದ್ದುದನ್ನೂ ಅವನ ಸೀಮೆ ಹುಣಿಸೆಯಲ್ಲಿ ಪಾಲು ತೆಗೆದು ತಿನ್ನುತ್ತಿದ್ದುದನ್ನೂ ಕಂಡು ನಮ್ಮ ಅಣ್ಣ ಮೈ ಮೂಳೆ ಜಜ್ಜಿ ಪುಡಿಯಾಗುವಂತೆ ನನ್ನನ್ನು ಚೆನ್ನಾಗಿ ಹೊಡೆಯುತ್ತಿದ್ದನು. ಶೇಷು ಅವನ ಕೈಗೆ ಸಿಕ್ಕದಷ್ಟು ದೂರದಲ್ಲಿ ನಿಂತು ನಗುತ್ತಿದ್ದನು.

ಇದೆಲ್ಲಾ ನಾವು ನಮ್ಮೂರ ಕನ್ನಡ ಲೋವರ್ ಸೆಕಂಡರಿ ತರಗತಿಯಲ್ಲಿದ್ದಾಗ ನಡೆದ ಸಂಗತಿ. ದುಡ್ಡಿನ ಅಭಾವದಿಂದ ನಾನು ಆಗಿನ ಆ ನಾಲ್ಕು ರುಪಾಯಿನ ಪರೀಕ್ಷೆಗೆ ಕಟ್ಟಲಿಲ್ಲ. ಶೇಷುವಿಗೂ ಕೊನೆಯ ಗಳಿಗೆಯವರೆಗೆ ದುಡ್ಡು ಸಿಕ್ಕಿರಲಿಲ್ಲ. ಆಗ ಅವನ ಸೋದರಮಾವನೋ ಯಾರೋ ಅಂತೂ ದುಡ್ಡು ಕೊಟ್ಟು ಅವನನ್ನು ಪರೀಕ್ಷೆಗೆ ಕಟ್ಟಿಸಿದರು. ನಮ್ಮ ಹೆಡ್ಮಾಸ್ಟರು "ಇವ ಜಾಣ. ಅನ್ಯಾಯವಾಗಿ ರಿಜಲ್ಟಿನಲ್ಲಿ ಒಬ್ಬ ಕಡಿಮೆಯಾಗಿಬಿಡುತ್ತದೆಲ್ಲಾ ಎಂದಿದ್ದೆ. ಸದ್ಯ ಕಟ್ಟಿದನೆಲ್ಲಾ" ಎಂದರು.

ಶೇಷು ನಮ್ಮ ಊರಿನವನಲ್ಲ. ಅವನ ತಾಯಿ ತಂದೆ ಎಲ್ಲಿಯೋ ಬೆಂಗಳೂರು ಡಿಸ್ಟ್ರಿಕ್ಟಿನ ಹಳ್ಳಿಯಲ್ಲಿ ಸಣ್ಣ ಜಮೀನ್‌ದಾರರಾಗಿ ಜೀವನಕ್ಕೆ ಸಾಲದೆ ಕಷ್ಟಪಡುತ್ತಿದ್ದರು. ನಮ್ಮ ಊರಿನ ಅವರ ಬಂಧುಗಳೊಬ್ಬರ ಮನೆಯಲ್ಲಿ ಶೇಷು ವಿದ್ಯಕ್ಕಾಗಿ ಬಂದು ಸೇರಿದ್ದನು. ಕನ್ನಡ ಲೋವರ್ ಸೆಕಂಡರಿ ತರಗತಿಗೆ ಮೇಲ್ಪಟ್ಟ ಹೈಸ್ಕೂಲು ನಮ್ಮ ಊರಿನಲ್ಲಿ ಇಲ್ಲದುದರಿಂದ ಆ ಪರೀಕ್ಷೆಗೆ ಕಟ್ಟಿ ರಿಜಲ್ಟು ಬರುವುದಕ್ಕೆ ಮುಂಚೆ ಶೇಷುವು ತನ್ನ ಹಳ್ಳಿಗೆ ಹೊರಟುಹೋದನು. ಅನಂತರ ಮೂರು ವರುಷಗಳು ನಾನು ಶೇಷುವನ್ನು ನೋಡಲಿಲ್ಲ.

ಅವನು ಮತ್ತೆ ಹಿಂದಿರುಗಿದಾಗ ಬೇಸಿಗೆ ಕಾಲವಾಗಿತ್ತು. ಅವನು ಆಗ ತಾನೆ ಸ್ಕೂಲ್ ಫೈನಲ್ ಪರೀಕ್ಷೆಗೆ ಕುಳಿತು ಬಂದಿದ್ದನು. ಅವನ ರೂಪು ಹಿಂದೆ ಇದ್ದುದಕ್ಕಿಂತಲೂ ಸ್ವಲ್ಪ ಹೆಚ್ಚು ವಿಕಾರವಾಗಿಯೇ ಇದ್ದಿತು. ಅದರೆ ಅವನ ಉಡುಪು ಸ್ವಲ್ಪು ಪಟ್ಟಣದ ವಾಸನೆಯನ್ನುಳ್ಳದುದಾಗಿದ್ದಿತು. ಕ್ರಾಪನ್ನೂ ಬಿಡಿಸಿದ್ದನು. ಮೈಸೂರಿನಲ್ಲಿ ಹೈಸ್ಕೂಲಿನಲ್ಲಿ ಇರುವುದಾಗಿ ಹೇಳಿದನು. ಅವನ ಬಡತನವನ್ನು ಅರಿತಿದ್ದ ನಾನು "ನಿನಗೆ ದುಡ್ಡು ಕಾಸು ಒದಗಿಸುವವರು ಯಾರು?" ಎಂದು ಕೇಳಿದೆ. ಶೇಷುವು, ಬಾಲ್ಯದಲ್ಲಿ ನಗುತ್ತಿದ್ದ ಠಕ್ಕು-ನಗುವನ್ನೇ ನಕ್ಕು "ಒಬ್ಬರನ್ನು ಹಿಡಿದಿದ್ದೇನೆ" ಎಂದನು.

ಬೇಸಿಗೆಯ ರಜ ಮುಗಿಯುವವರೆಗೆ ಶೇಷುವು ನಮ್ಮ ಊರಿನಲ್ಲೇ ಇದ್ದನು. ಅವನಿಗೆ ಸ್ಕೂಲು ಫೈನಲ್ ಪರೀಕ್ಷೆ ಆದ ಫಲಿತಾಂಶ ನಮ್ಮೂರಿನಲ್ಲಿ ಅವನು ಇರುವಾಗಲೇ ತಿಳಿಯಿತು. ಅನಂತರ ಅವನು ಹೊರಟು ಹೋಗಿ ಮೈಸೂರಿನಲ್ಲಿ ಇಂಟರ್‌ಮಿಡಿಯೇಟ್ ಕಾಲೇಜು ಸೇರಿದನು. ಮೈಸೂರಿನಲ್ಲಿ ಕಾಲೇಜಿಗೆ ಸಮೀಪದಲ್ಲಿ ಒಂದು ಕೊಠಡಿಯನ್ನು ಬಾಡಿಗೆಗೆ ಹಿಡಿದು ಹೋಟಲಿನಲ್ಲಿ ಊಟಕ್ಕೆ ಗೊತ್ತುಮಾಡಿಕೊಂಡಿದ್ದನೆಂದು ತಿಳಿಯಿತು. ನಾನು "ಭಲ! ಅದೃಷ್ಟಶಾಲಿ. ಆದರೆ ಇವನಿಗೆ ಹಣ ಯಾರು ಒದಗಿಸುತ್ತಾ, ಇರಬಹುದು?" ಎಂದು ಯೋಚಿಸುತ್ತಿದ್ದೆ.

ಅದೇ ವರುಷ ಮಾಘಮಾಸ ಶೇಷು ಇಂಟರ್‌ಮೀಡಿಯೇಟ್ ಜೂನಿಯರ್ ತರಗತಿಯಲ್ಲಿ ಓದುತ್ತಿದ್ದಾಗ ಅವನ ಮದುವೆ ಗೊತ್ತಾಗಿ ಲಗ್ನ ಪತ್ರಿಕೆ ಬಂದಿತು. ಹೆಣ್ಣು ಮೈಸೂರು ಹತ್ತಿರದ ಒಂದು ಹಳ್ಳಿಯವಳು. ತಂದೆಯಿಲ್ಲ. ಅವರಿಗೆ ಬೇರೆ ಮಕ್ಕಳೂ ಇಲ್ಲ. ಅವರು ಶೇಷುವಿಗೆ ದೂರದ ಬಂಧುಗಳೂ ಆಗಬೇಕು. ಮದುವೆ ಅವರ ಹಳ್ಳಿಯಲ್ಲಿಯೇ ನಡೆಯಬೇಕೆಂದು ಗೊತ್ತಾಗಿದ್ದಿತು. ನಾನು ಖಂಡಿತ ಮದುವೆಗೆ ಬರಬೇಕೆಂದು ಶೇಷುವು ಬಲಾತ್ಕಾರ ಮಾಡಿ ಬರೆದಿದ್ದ. ನಾನು ಮದುವೆಗೆ ಎರಡು ದಿನ ಮುಂಚೆ ಮೈಸೂರನ್ನು ಹೋಗಿ ಸೇರಿದೆ. ಮಾರನೆ ದಿನ ಎಲ್ಲರೂ ಹೆಣ್ಣಿನ ಹಳ್ಳಿಗೆ ಹೋದೆವು.

ಹುಡುಗಿಗೆ ವಯಸ್ಸು ಸುಮಾರು ಹನ್ನೆರಡಕ್ಕಿಂತ ಹೆಚ್ಚಾಗಿರಲಿಲ್ಲ. ಇಷ್ಟು ಚಿಕ್ಕ ಹುಡುಗಿಗೆ ಮದುವೆ ಮಾಡಲು ಇವರಿಗೆ ಯಾಕೆ ಇಷ್ಟು ಆತುರ ಎಂದು ನಾನು ಯೋಚಿಸುತ್ತಿದ್ದೆ. ಹೆಣ್ಣಿನ ತಾಯಿಯು ನನಗೂ ದೂರದ ಸಂಬಂಧವೆಂಬುದು ಅಲ್ಲಿ ಹೋದಮೇಲೆ ನನಗೆ ಗೊತ್ತಾಯಿತು. ಹುಡುಗಿಯ ತಾಯಿ ಹೇಳಿದಳು: "ಮೂರು ವರುಷದಿಂದ ಶೇಷುವಿಗೆ ವಿದ್ಯಕ್ಕೆ ನಾವೇ ದುಡ್ಡು ಕೊಡುತ್ತಿದ್ದೇವೆ. ನಾವು ತಾನೇ ಏನು ಸಾಹುಕಾರರೆ? ಎರಡು ಮೂರು ಜಮೀನು ಈಗಾಗಲೆ ಮಾರಿಯಾಯಿತು. ಹೇಗಾದರೂ ಆಗಲಿ, ಅವನಿಗೆ ಒಂದು ಬಿ. ಎ. ಅಂತ ಆಗಿ ಸರ್ಕಾರಿ ಕೆಲಸ ಯಾವುದಾದರೂ ಸಿಕ್ಕಿದರೆ ಆಮೇಲೆ ನನ್ನದೇನು, ಒಬ್ಬಳ ಪಾಡು. ಹೇಗಾದರೂ ಆಗುತ್ತೆ. ಒಂದು ಹೊತ್ತು ಊಟಮಾಡಿದರು ಆಯ್ತು. ಉಪವಾಸ ಇದ್ರು ಆಯ್ತು. ಈಗ ನಮ್ಮ ಹುಡುಗಗೆ ಮದುವೆಗೆ ಆತುರ ಇರಲಿಲ್ಲ. ಇನ್ನೂ ವಯಸ್ಸಾಗಿಲ್ಲ. ಆದ್ರೆ ಈ ಕಾಲದ ಹುಡುಗರು. ಮೈಸೂರು ಬೆಂಗಳೂರಲ್ಲಿ ಇರೋರು. ಯಾರು ಯಾವ ವೇಳೇಲಿ ಬಂದು ಹೆಣ್ಣು ಕೊಡ್ತೀನಿ ಅಂತ ಹಿಂಸಿಸ್ತಾರೋ? ಅಷ್ಟಕ್ಕು ಶೇಷುವಿಗೂ ಇನ್ನೂ ಅಂತ ವಯಸ್ಸೇನು? ಆದರೂ ನಮ್ಮ ಬುದ್ಧಿ ನಮ್ಮ ಕೈಲಿ ಇರಲಿ ಅಂತ ಈ ವರುಷವೇ ಮದುವೆ ಗೊತ್ತುಮಾಡಿಬಿಟ್ಟೆ" ಎಂದರು. ನಾನು ಹುಡುಗಿಯನ್ನು ನೋಡಿದೆ. ಹೆಸರು ಜಾನಕಿ. ಅಷ್ಟು ಲಕ್ಷಣವಾದ ಹುಡುಗಿಯಾಗಿ ತೋರಲಿಲ್ಲ. "ಈಗೇನು ಗೊತ್ತಾಗುತ್ತೆ? ಮುಂದೆ ದೊಡ್ಡವಳಾದ ಮೇಲೆ ಮೈ ಕೈ ತುಂಬಿಕೊಂಡು ಗೆಲುವಾಗುತ್ತಾಳೆ" ಎಂದುಕೊಂಡೆ. ಶೇಷುವನ್ನು "ಹುಡುಗಿ ನಿನಗೆ ಒಪ್ಪಿತೆ?" ಎಂದೆ. ಶೇಷುವು "ಈಗ ಒಪ್ಪುವ ಪ್ರಶ್ನೆಯೇ ಇಲ್ಲ. ಮದುವೆಯ ಶಾಸ್ತ್ರ ನೆರವೇರಲಿ" ಎಂದನು. ಅವನ ಧ್ವನಿ ಯಾಕೋ ನನಗೆ ವಿಚಿತ್ರವಾಗಿ ತೋರಿತು. ನಾನು "ಇಷ್ಟವಿಲ್ಲದಿದ್ದರೆ ಈಗಲೂ ವಜಾ ಮಾಡೋಣ" ಎಂದೆ. ಶೇಷುವು "ಇಷ್ಟವೋ ಅನಿಷ್ಟವೋ, ಗೊತ್ತಾಗಿರುವಂತೆ ನಡೆದು ಹೋಗಲಿ" ಎಂದನು. ಶೇಷುವಿನ ತಂದೆತಾಯಿಗಳೂ ಮದುವೆಗೆ

ಬಂದಿದ್ದರು. ಅವರು ಒಂದು ಕಾಸನ್ನೂ ಖರ್ಚುಮಾಡದೆ ಹೆಣ್ಣಿನ ಕಡೆಯವರಿಂದ ದೊರೆತ ಉಡುಗೆರೆಗಳನ್ನು ಮಾತ್ರ ತೆಗೆದುಕೊಂಡು ಹೋದರು. ಮದುವೆಯ ವೆಚ್ಚವನ್ನೆಲ್ಲಾ ಹೆಣ್ಣಿನ ತಾಯಿಯೇ ವಹಿಸಿಕೊಂಡರು. ಎರಡು ದಿವಸ ಆ ಹಳ್ಳಿಯಲ್ಲಿರುವುದರಲ್ಲಿ ಹೆಣ್ಣಿನ ಕಡೆಯವರು ಹೊರಗೆ ತೋರುವಷ್ಟು ಹಣಕಾಸಿನ ಅನುಕೂಲವುಳ್ಳವರಲ್ಲರೆಂಬುದು ನನಗೆ ತಿಳಿಯಿತು. ಇದರಿಂದ ಅವರಲ್ಲಿ ನನ್ನ ಕನಿಕರವು ಇನ್ನೂ ಹೆಚ್ಚಾಯಿತು.

ಮದುವೆಯಾಗಿ ಸೀನಿಯರ್ ಇಂಟರ್ ತರಗತಿಗೆ ಬರುವ ವೇಳೆಗೆ ಶೇಷುವಿನ ಸ್ವಭಾವ ತುಂಬ "ಶೋಕಿ" ಆಯಿತು. ಅವನು ಹೋಟೆಲನ್ನು ಬಿಟ್ಟು ಕಾಲೇಜು ಹಾಸ್ಟಲ್ ಸೇರಿದನು. ಫಸ್ಟ್ ಕ್ಲಾಸ್ ಬೈಸಿಕಲ್ಲು, ಕೈ-ಗಡಿಯಾರ ಇವುಗಳನ್ನೆಲ್ಲಾ ಕೊಂಡುಕೊಂಡನು. ಒಂದು ದಿನಕ್ಕೆ ಒಂದು ಬಗೆಯ ಸೂಟುಗಳನ್ನು ಧರಿಸುತ್ತಿದ್ದನು. ಪ್ರತಿದಿನವೂ ತಪ್ಪದೆ ಸಿನಿಮಾಗಳನ್ನು ನೋಡುತ್ತಿದ್ದನು. ನಮ್ಮ ಊರಿನ ಮತ್ತೊಬ್ಬ ಹುಡುಗ -ಇಂಟರ್‌ಮಿಡಿಯೇಟ್‌ನಲ್ಲಿ ಓದುತ್ತಿದ್ದವನು-ಅವನಿಂದ ಈ ಸಂಗತಿಗಳನ್ನು ನಾನು ಕೇಳಿದಾಗ, ಈ ಠೀವಿಗೆಲ್ಲಾ ದುಡ್ಡು ಎಲ್ಲಿಂದ ಬರುವುದೆಂಬುದನ್ನು ತಿಳಿದಿದ್ದುದರಿಂದ, ಹೆಣ್ಣಿನ ತಾಯಯ ಕಷ್ಟವನ್ನು ನೆನೆಸಿಕೊಂಡು ದುಃಖಪಟ್ಟೆ, ನಾನು ದುಃಖಪಟ್ಟುದು ಶೇಷು ಹಣವನ್ನು ವೆಚ್ಚಮಾಡುತ್ತಿದ್ದನೆಂದಲ್ಲ. ಯಾಕೆಂದರೆ ಕಾಲೇಜುಗಳಲ್ಲಿರುವ ಹುಡುಗರು ಸಂದರ್ಭಾನುಸಾರ ಇತರರಿಗೆ ದುಂದುವೆಚ್ಚವೆಂದು ತೋರುವ ಕೆಲವು ಖರ್ಚುಗಳನ್ನೂ ಮಾಡಬೇಕಾಗುತ್ತದೆ. ಆದರೆ ಶೇಷು ಮದುವೆ ಕಾಲದಲ್ಲಿ ಹೇಳಿದ್ದ ಮಾತುಗಳೂ ಆ ಮಾತಿನ ಧ್ವನಿಯೂ, ಹೊಟ್ಟೆಬಟ್ಟೆ ಕಟ್ಟಿ ಇವನಿಗೆ ಹಣವನ್ನು ಒದಗಿಸುತ್ತಿರುವ ಜಾನಕಿಗೂ ಅವಳ ತಾಯಿಗೂ ನಿಜವಾಗಿ ಸುಖವನ್ನು ಉಂಟುಮಾಡುವುದೇ—ಎಂಬುದೇ ನನ್ನ ಚಿಂತೆಯಾಗಿತ್ತು.

ಒಂದು ವಿಚಾರದಲ್ಲಿ ಮಾತ್ರ ಶೇಷುವನ್ನು ಕಂಡು ನನಗೆ ತೃಪ್ತಿಯುಂಟಾಗಿತ್ತು. ಅವನ ಬುದ್ಧಿ ಬಹಳ ಚುರುಕಾಗಿದ್ದಿತು. ಅವನು ತರಗತಿಯಲ್ಲಿ ಎಲ್ಲಾ ಉಪಾಧ್ಯಾಯರ ಮೆಚ್ಚಿಕೆಗೂ ಪಾತ್ರನಾಗಿದ್ದನು. ತನ್ನ ಯೋಗ್ಯತೆ ಶೇಷುವಿಗೂ ತಿಳದಿತ್ತು. ಅದರಿಂದ ಅವನ ತಲೆಯು ವಿಪರೀತವಾಗಿ ತಿರುಗಿತ್ತು. ಇಂಟರ್‌ಮಿಡಿಯೇಟ್ ಪರೀಕ್ಷೆಯಲ್ಲಿ ಅವನು ಯಶಸ್ವಿಯಾಗಿ ತೇರ್ಗಡೆ ಹೊಂದಿ ಬಿ. ಎ. ತರಗತಿಯನ್ನು ಸೇರಿದನು. ಆಗ ಸಿಗರೆಟ್ಟು ಅಭ್ಯಾಸವಾಯಿತು. ಮೊದಲೇ ಕಪಿಯ ಮರಿಯ ಹಾಗೆ ಕರ್‍ರಗೆ ವಿಕಾರಿಯಾಗಿದ್ದ ಆ ಕಪೋರ, ಸಿಗರೇಟಿನ ಕಪ್ಪಿನತುಟಿಗಳಲ್ಲಿ ಶೇಷುವಿನಂತೆ ಕಾಣುತ್ತಲೇ ಇಲ್ಲ. ಪರಿಚಿತಿಯಲ್ಲದವರಿಗೆ ಅವನು ನೀಗ್ರೋವಿನಂತೆ ಕಾಣುತ್ತಿದ್ದನು.

ಶೇಷು ಕಾಲೇಜಿನಲ್ಲಿ ಬಹಳ ಜಾಣನಾಗಿ ತನ್ನ ಮುಖ್ಯ ಭಾಗವಾದ ಇತಿಹಾಸದಲ್ಲಿ ಒಳ್ಳೆಯ ಪ್ರೌಢಿಮೆಯನ್ನು ತೋರಿಸಿ ತನ್ನ ಪ್ರೊಫೆಸರ್ ಅವರ ಪೂರ್ಣ ಪ್ರೀತಿಗೆ ಪಾತ್ರನಾದನು. ಅವರ ಜತೆಯಲ್ಲಿ ಐತಿಹಾಸ, ಪ್ರಾಚೀನವಸ್ತು ಶೋಧನೆ ಇವುಗಳಿಗೆ ಸಂಬಂಧಪಟ್ಟ ಹಿಂದೂದೇಶದ ಆನೇಕ ಮುಖ್ಯ ಮುಖ್ಯ ಸ್ಥಳಗಳನ್ನು ಸಾವಿರಾರು ರುಪಾಯಿ ವೆಚ್ಚ ಮಾಡಿಕೊಂಡು ನೋಡಿಕೊಂಡು ಬಂದನು. ಬಿ. ಎ. ಪರೀಕ್ಷೆಯಲ್ಲಿ ಒಳ್ಳೆಯ ಯಶಸ್ವಿಯಾಗಿ ತೇರ್ಗಡೆಯಾದನು. ಅವನಿಗೆ ಪರೀಕ್ಷೆಯಾದುದನ್ನು ಕೇಳಿದಾಗ ನಾನು "ಸದ್ಯ ಇವನ ಅತ್ತೆ ಬದುಕಿಕೊಂಡಳು. ಇವನಿಗೆ ಹಣ ಒದಗಿಸಿ ಅವಳು ಬರಿದಾಗಿದ್ದಾಳೆ. ಜಾನಕಿ ಒಳ್ಳೆ ಅದೃಷ್ಟವಂತೆ, ಅವಳ ಕೈ ಹಿಡಿದ ಯೋಗ ಶೇಷುವಿಗೆ ಒಳ್ಳೆಯದಾಯಿತು. ಒಂದು ಪರೀಕ್ಷೆಯೂ ಫೇಲ್ ಆಗಲಿಲ್ಲ......ಮೂರು ನಾಲ್ಕು ಸಾವಿರ ರುಪಾಯಿ ಕೊಟ್ಟಿರಬಹುದು" ಎಂದುಕೊಂಡೆ.

ಅದೇ ಕಾಲದಲ್ಲಿ ನನ್ನ ಸ್ವಂತ ಕೆಲಸಕ್ಕಾಗಿ ಮೈಸೂರಿಗೆ ಹೋಗಬೇಕಾಯಿತು. ಆಗ ಶೇಷುವನ್ನು ಕಂಡೆ. ಶೇಷುವು "ನಡಿ ನಮ್ಮತ್ತೆ ಹಳ್ಳಿಗೆ ಹೋಗಿ ಬರೋಣ. ನಾನು ಒಂದು ವರುಷದಿಂದ ಅಲ್ಲಿಗೆ ತಲೆ ಹಾಕಿಲ್ಲ. ನಿತ್ಯಾ ಒಂದೊಂದು ಕಾಗದ ಬಡ್ಕೊತಾರೆ" ಎಂದನು. ಒಂದು ವರುಷದಿಂದ ಶೇಷು ಅತ್ತೆಮನೆಗೆ ತಲೆ ಹಾಕದುದನ್ನು ಕೇಳಿ ನನಗೆ ಆಶ್ಚರ್ಯವಾಯಿತು. "ಇವನ ವಿದ್ಯೆ ಏನು? ಇವನ ಡಿಗ್ರಿ ಏನು? ಇವನು ಬೆಳಸಿಕೊಳ್ಳುತ್ತಿರುವ ಸ್ವಭಾವವೇನು? ಕಾಲೇಜಿನಲ್ಲಿ ಇವನು ಕಲಿತುದು ಇದೆಯೇ? ತಿಂಗಳು ತಿಂಗಳು ಇವನಿಗೆ ೪೦-೫೦ ರುಪಾಯಿ ಕೊಡುತ್ತಿರುವವರ ವಿಷಯದಲ್ಲಿ ಇವನ ನಡತೆ ಏನು? ಇವನು ಮನುಷ್ಯನ ಕುಲವೇ? ದನವೆ?" ಎಂದುಕೊಂಡೆ. ಅವನ ಜತೆಯಲ್ಲಿ ಅವರ ಅತ್ತೆಯ ಹಳ್ಳಿಗೆ ಹೋದೆ. ನಮ್ಮನ್ನು ನೋಡಿದ ಕೂಡಲೆ ಅವರು ಅತ್ತೇಬಿಟ್ಟರು. "ನೋಡಪ್ಪ ಇಷ್ಟು ಹತ್ತಿರದಲ್ಲಿ ಇದ್ದಾರೆ. ಒಂದು ವರುಷದಿಂದ ಈಕಡೆ ತಲೆ ಹಾಕಲಿಲ್ಲ. ಕಾಗದ ಬರೆದರೆ ಕೂಡ ಯೋಗಕ್ಷೇಮಕ್ಕೆ ಬರೆಯುವುದಿಲ್ಲ. ಅವರಿವರನ್ನು ವಿಚಾರಿಸಿ ನಾನು ಸದ್ಯ ಆರೋಗ್ಯವಾಗಿದ್ದಾರಲ್ಲಾ ಅಷ್ಟೆ ಸಾಕು ಎಂದು ದೇವರಿಗೆ ದೀಪ ಹಚ್ಚುತ್ತಿದ್ದೆ. ನಮಗೆ ತಾನೆ ಇನ್ನಾರಿದ್ದಾರೆ. ಅಳಿಯನೂ ಇವನೇ ಮಗನೂ ಇವನೆ" ಎಂದರು. ಶೇಷುವು "That is alright. That is alright; these women" ಆಯ್ತು ಆಯ್ತು. ಈ ಹೆಂಗಸರೊ! ಎಂದನು. ಅಷ್ಟು ಹೊತ್ತಿಗೆ ಜಾನಕಿಯು ಬಂದಳು. ಅವಳು ದೊಡ್ಡವಳಾಗಿ ಆರು ತಿಂಗಳ ಮೇಲಾಗಿತ್ತು. ಮದುವೆಯಲ್ಲಿ ನೋಡಿದಾಗಿನಕ್ಕಿಂತಲೂ ಈಗ ಹೆಚ್ಚು ಲಕ್ಷಣವಾಗಿದ್ದಳು. ಆದರೆ ಅವಳು ಸುಂದರಿ

ಎಂದು ಹೇಳಲಾರೆ. ಶೇಷುವಿಗೆ ಅವಳನ್ನು ನೋಡಿ ಸಂತೋಷವಾದಂತೆ ತೋರಲಿಲ್ಲ. ಅವನ ಪ್ರಯತ್ನವಿಲ್ಲದೆ ತಿರಸ್ಕಾರವು ಅವನ ಮುಖದ ಮೇಲೆ ಮೂಡಿ ಕಾಣುತ್ತಿತ್ತು.

ಶೇಷುವು ಬರುವಾಗ ಯಾವ ಉದ್ದೇಶದಿಂದ ಅತ್ತೆಯ ಮನೆಗೆ ಬಂದಿದ್ದನೋ ನನಗೆ ತಿಳಿಯದು. ಆದರೆ ಅಲ್ಲಿಗೆ ಹೋದಮೇಲೆ ಶೋಭನ ಪ್ರಸ್ತ ಮಾಡಿಕೊಳ್ಳಬೇಕೆಂಬ ಅವನ ಅತ್ತೆಯ ಸೂಚನೆಗೆ ಅವನು ಕೂಡಲೆ ಒಪ್ಪಿಕೊಂಡನು. ನಿಷ್ಕರ್ಷೆಯಾದ ಲಗ್ನದ ದಿವಸ ಶೋಭನಪ್ರಸ್ತವೂ ನೆರವೇರಿತು. ಶೇಷುವು ಅತ್ತೆಯವರಿಂದ ತಾನು ಆವರೆಗೆ ಮಾಡಿರುವ ಸಾಲವನ್ನು ತೀರಿಸುವುದಕ್ಕಾಗಿ ಮತ್ತೆ ಮುನ್ನೂರು ರುಪಾಯಿಗಳನ್ನು ತೆಗೆದುಕೊಂಡನು. ಅನಂತರ ಅವನ ಅತ್ತೆಯವರು ನನ್ನೊಂದಿಗೆ “ಇಲ್ಲಿಗೆ ನಮ್ಮ ಶಕ್ತಿ ಮುಗಿಯಿತು. ಶೇಷುವಿನ ವಿದ್ಯೆಯೂ ಪೂರೈಸಿತು. ಎಣ್ಣೆಗೆ ಬತ್ತಿಗೆ ನೇರ ಎಂಬಂತೆ ಆಯಿತು. ಎಲ್ಲಾ ಜಮೀನುಗಳನ್ನೂ ಮಾರಿಬಿಟ್ಟೆ, ಹೇಗಾದರೂ ಆಗಲಿ. ಸದ್ಯ ದೇವರು ಇಷ್ಟರಮಟ್ಟಿಗೆ ಮಾಡಿದನಲ್ಲ.” ಎಂದರು. ನಾನೂ ಶೇಷುವೂ ಮೈಸೂರಿಗೆ ಹಿಂದಿರುಗಿದೆವು.

ಅಸಂತರ ಸುಮಾರು ಒಂದು ವರುಷ ನಾನು ಶೇಷುವನ್ನು ನೋಡಲಿಲ್ಲ. ಪರೀಕ್ಷೆಯಾದ ೪-೫ ತಿಂಗಳುಗಳಲ್ಲಿ ಅವನಿಗೆ ಮೈಸೂರಿನಲ್ಲಿಯೇ ೮೦ ರೂಪಾಯಿ ಉಪಾಧ್ಯಾಯನ ಕೆಲಸವಾಯಿತು. ಆಮೇಲೆ ಏನೇನೋ ಸುದ್ದಿಗಳು ಕಿವಿಗೆ ಬೀಳತೊಡಗಿದುವು. ಶೇಷುವಿಗೆ ಮತ್ತೆ ಮದುವೆಯಂತೆ; ಈಗಿನ ಹೆಂಡತಿ ಜಾನಕಿ ಚೆನ್ನಾಗಿಲ್ಲ; ಬಾಲ್ಯದಲ್ಲಿ ತಿಳಿಯದೆ ಮದುವೆಯಾಗಿಬಿಟ್ಟನಂತೆ; ಇವನ ವಿದ್ಯೆ, ಇವನ ಅಂತಸ್ತು, ಇವನ ದರ್ಜೆ ಇವುಗಳಿಗೆ ಹಳ್ಳಿಯ ಹುಡುಗಿಯಾದ ಜಾನಕಿ ಸರಿಹೋಗುವುದಿಲ್ಲ. ಈಗ ಇವನಿಗೆ ಹೆಣ್ಣು ಕೊಡುವವರಿಗೆ ೬ ಜನ ಹೆಣ್ಣುಹುಡುಗಿಯರಂತೆ. ಹುಡುಗಿಯರೆಲ್ಲಾ ಬಹಳ ಲಕ್ಷಣವಾದವರು. ಆದರೆ ತಂದೆ ಬಡವನಾದುದರಿಂದ ಯಾವ ಹುಡುಗಿಗೂ ೧೮-೨೦ ವರುಷಕ್ಕೆ ಮುಂಚೆ ಮದುವೆಯಾದುದಿಲ್ಲವಂತೆ. ಮೂರು ಹುಡುಗಿಯರನ್ನು ಮೊದಲನೆ ಹೆಂಡತಿ ಇದ್ದ ಗಂಡನಿಗೇ ಕೊಟ್ಟಿದ್ದಾರಂತೆ.

ಒಂದು ದಿನ ಶೇಷುವಿನ ಅತ್ತೆ (ಅತ್ತೆ ನಂಬರ್ ೧) ಜಾನಕಿಯೆಂದಿಗೆ ನಮ್ಮ ಊರಿಗೆ ನಮ್ಮ ಮನೆಗೆ ಬಂದರು. ಅವರ ಗೋಳು ದೇವರಿಗೇ ಬೆಳಕು. “ನಮಗೆ ದಿಕ್ಕು ಯಾರು? ಭಗವಂತ ನಮಗೆ ಇಂತಹ ಕಷ್ಟ ಕೊಡಬಹುದೆ? ೭-೮ ವರುಷದಿಂದ ಆಸ್ತಿಯನ್ನೆಲ್ಲ ಹಾಳುಮಾಡಿಕೊಂಡು ಇವನನ್ನು ಸಾಕಿದೆ. ನಿಮ್ಮ ಮಾತು ಕೇಳುತ್ತಾನೆ. ನೀನಾದರೂ ಹೋಗಿ ಹೇಳಿ ತಪ್ಪಿಸು. ಏನು

ಮಾಡಲಿ, ನನಗೆ ಏನೂ ತೋಚುವುದಿಲ್ಲ. ಹೆಣ್ಣು ಕೊಡೋಳ ಕಾಲು ಕಟ್ಟಿಕೊಳಲೆ? ಮದುವೆಯಾಗಬೇಡ ಅಂತ ಹುಡುಗಿ ಕಾಲು ಹಿಡಕೊಳ್ಳಲೆ? ನಿಮ್ಮ ದಮ್ಮಯ್ಯ ಏನಾದ್ರು ಮಾಡಿ ತಪ್ಪಿಸಿ" ಜಾನಕಿ ಒಂದೇ ಸಮನಾಗಿ ಊಟ ತಿಂಡಿ ಬಿಟ್ಟು ಅಳುತ್ತಿದ್ದಳು. ನನಗೆ ಶೇಷುವಿನ ಸ್ವಭಾವ ಗೊತ್ತಿತ್ತು. ಅವನು ಬಾಲ್ಯದಿಂದಲೂ ಠಕ್ಕನೇ ಆಗಿದ್ದ. ಜಾನಕಿಯನ್ನು ಅವನು ಮದುವೆಯಾದುದು, ತನ್ನ ವಿದ್ಯಾಭ್ಯಾಸಕ್ಕೆ ಹಣ ದೊರಕಲಿ ಎಂದೇ ಎಂದು ನಾನು ಮೊದಲಿನಿಂದಲೂ ಯೋಚಿಸುತ್ತಿದ್ದುದು ಕೊನೆಗೂ ನಿಜವೇ ಆಯಿತು. ಇಂತಹ ವೇಳೆಯಲ್ಲಿ ನಾವು ಹೋಗಿ ಹೇಳುವ ಯಾವ ಮಾತುಗಳಿಂದಲೂ ಪ್ರಯೋಜನವಿಲ್ಲವೆಂದು ನಾನು ಜಾನಕಿಯ ತಾಯಿಗೆ ಎಷ್ಟು ಹೇಳಿದರೂ ಅವರು "ನೀನು ಹೋಗಿ ಹೇಳಿದರೆ ಖಂಡಿತ ಏನಾದರೂ ಆಗುತ್ತೆ" ಎಂದರು. ಅವರ ಬಲಾತ್ಕಾರಕ್ಕಾಗಿ ನಾನು ಮೈಸೂರಿಗೆ ಹೋಗಿ ಶೇಷುವನ್ನು ಕಂಡೆ. ನನ್ನನ್ನು ಕಂಡ ಕೂಡಲೆ ಶೇಷುವಿನ ಮುಖ ಸ್ವಲ್ಪ ಕಳೆಗೆಟ್ಟಿತು. "ನೀನು ಆಗ ಜಾನಕಿಯನ್ನು ಯಾಕೆ ಮದುವೆಯಾದೆ?" ಎಂದು ನಾನು ಕೇಳಿದುದಕ್ಕೆ ಶೇಷುವು "ನನಗೆ ಆಗ ಕಣ್ಣು ಕುರುಡಾಗಿತ್ತು" ಎಂದನು. ಅನಂತರ ನಾನು ಶೇಷುವಿನ ಅತ್ತೆಯನ್ನೂ (ಅತ್ತೆ ನಂಬರ್ ೨) ಮಾವನನ್ನೂ ಕಂಡೆ. ಮಾವನು "ನನಗೆ ಗೊತ್ತಿಲ್ಲ. ಈ ಪುಣ್ಯಾತ್ಗಿತ್ತಿ ಬೇಡ ಬೇಡ ಅಂದರೂ ಹೆಣ್ಣೇ ಹೆರ್ತಾಳೆ. ನಾನು ಬಡವ, ಸರಿಯಾದ ವರ ಸಿಕ್ಕೋದಿಲ್ಲ. ಮುಖ್ಯವಾಗಿ ಮದುವೆಯಾಗೋರಿಗೆ ಬುದ್ಧಿ ಇರಬೇಕು. ಹೆಣ್ಣು ಕೊಡಿ ಅಂದರೆ ಹೆಣ್ಣು ಇಟ್ಟುಕೊಂಡು ಇಲ್ಲಾ ಅನ್ನೋದು ಹೇಗೆ?" ಎಂದನು. ಕೊನೆಗೆ ಯಾವ ರೀತಿಯಿಂದಲೂ ಮದುವೆ ತಪ್ಪಲಿಲ್ಲ. ಇಂತಹ ಮದುವೆಗಳಿಗೂ ತಿತಿಗಳಿಗೂ ಹೆಚ್ಚು ವ್ಯತ್ಯಾಸವಿಲ್ಲ. ಏನೋ ಒಂದು ಹೀನವಾದ ಕಾರ್ಯವನ್ನು ಮಾಡುವವರಂತೆ ಎಲ್ಲರೂ ಪೆಚ್ಚಾಗಿ ಒಂದೆರಡು ಗಂಟೆಗಳಲ್ಲಿ ಧಾರೆ ಶಾಸ್ತ್ರ ಮುಗಿಸಿ ದುರ್ದಾನನನ್ನು ತೆಗೆದುಕೊಂಡವರಂತೆ ತಮ್ಮ ತಮ್ಮ ಸ್ಥಳಗಳಿಗೆ ಹೇಳದೆ ಕೇಳದೆ ಹೊರಟುಹೋದರು. ಜಾನಕಿಯನ್ನೂ ಅವಳ ತಾಯಿಯನ್ನೂ ಸಾಧ್ಯವಾದ ಮಟ್ಟಿಗೆ ನಾನು ಸಮಾಧಾನಪಡಿಸಿ "ನೋಡೋಣ, ಹೇಗೆ ಹೇಗೆ ಆಗುತ್ತೊ. ಈಗಲೇ ನಿರಾಶರಾಗಬೇಡಿ. ಮುಂದೆ ಒಳ್ಳೆಯದಾದರೂ ಆಗಬಹುದು" ಎಂದು ಹೇಳಿ ಅವರ ಊರಿಗೆ ಕಳುಹಿಸಿಕೊಟ್ಟೆ.

ಶೇಷುವಿನ ಎರಡನೆ ಹೆಂಡತಿ ೧೮-೧೯ ವರುಷದ ಯುವತಿ. ಒಳ್ಳೆ ಸುಂದರಿ. ಹೆಸರು ಆನಂದ. ಮದುವೆಯಾದ ಎರಡು ತಿಂಗಳಿಗೇ ಶೋಭನ ಪ್ರಸ್ತವಾಯಿತು. ಶೇಷುವು ಮೈಸೂರಿನಲ್ಲಿ ಒಂದು ಮನೆ ಮಾಡಿ ಹೆಂಡತಿಯನ್ನೂ ಅತ್ತೆಯನ್ನೂ ಕರೆದುಕೊಂಡು ಬಂದನು. ಆಗ ನಾನು ಜಾನಕಿಯ ತಾಯಿಗೆ ಜಾನಕಿಯನ್ನು ಕರೆದುಕೊಂಡು ಮೈಸೂರಿಗೆ ಶೇಷುವಿನ ಮನೆಗೆ ಬರುವಂತೆ

ಬರೆದು, ನಾನು ಈಕಡೆಯಿಂದ ಏನೂ ತಿಳಿಯದವನಂತೆ ಮೈಸೂರಿಗೆ ಹೋದೆ. ಶೇಷುವಿನ ಹೆಂಡತಿ ಆನಂದಳನ್ನು ನೋಡಿದೆ. "ಇವಳ ಮುಂದೆ ಜಾನಕಿಯ ಆಟ ಸಾಗುವುದಿಲ್ಲ. ಇವಳು ರತಿ. ಆನಂದ ಇದ್ದ ಮನೆಯಲ್ಲಿ ಜಾನಕಿಯು ದಾಸಿಯೇ ಹೊರತು ಬೇರೆಯಲ್ಲ" ಎಂದುಕೊಂಡೆ. ನಾನು ಏರ್ಪಾಡು ಮಾಡಿಕೊಂಡಿದ್ದ "ಹಿಂದಲಿಂದ ಬಂದು ಯುದ್ಧ ಮಾಡುವುದು" (Rear-guard warfare) ಆನಂದಳ ಮುಂದೆ ನಡೆಯುವಂತೆ ತೋರಲಿಲ್ಲ. ನಾನು ಮೈಸೂರಿಗೆ ಹೋಗಿ ತಲಪಿದ ೨-೩ ದಿನಗಳೊಳಗಾಗಿ ಜಾನಕಿಯೂ ಅವಳ ತಾಯಿಯೂ ಶೇಷುವಿನ ಮನೆಗೆ ಬಂದು ಇಳಿದರು. ಸುಮಾರು ಒಂದು ತಿಂಗಳು ಕಳೆದರೂ ಶೇಷುವು ಒಂದು ದಿನವೂ ಜಾನಕಿಯೊಂದಿಗೆ ಮಾತನಾಡಲಿಲ್ಲ. ಅವಳು ಮನೆಯಲ್ಲಿರುವುದು ತನಗೆ ತಿಳಿಯದಂತೆಯೇ ಅವನು ನಟಿಸುತ್ತಿದ್ದನು. ಜಾನಕಿಯು ಮನೆಯಲ್ಲಿ ಸೇವಕಿಯಂತೆ ಪಾತ್ರೆಗಳನ್ನು ಬೆಳಗುವುದು ಬಟ್ಟೆಗಳನ್ನು ತೊಳೆಯುವುದು ಮುಂತಾದ ಕೆಲಸಗಳನ್ನು ಮಾಡುತ್ತಿದ್ದಳು. ಅತ್ತೆ ನಂ. ೧ ಮತ್ತು ಅತ್ತೆ ನಂ. ೨ ಇವುಗಳು ಎರಡಕ್ಕೂ ಆಗಾಗ್ಗೆ ಹುಚ್ಚುನಾಯಿಗಳಿಗೆ ಹತ್ತುವಂತೆ ಕದನವು ಹತ್ತುತ್ತಿದ್ದಿತು. ಜಾನಕಿಗೂ ಆನಂದಳಿಗೂ ಯಾವತ್ತೂ ಹೊಡೆದಾಟವಾಗಲಿಲ್ಲ. ಜಾನಕಿಯ ತಾಯಿ ಕಂಡಕಂಡವರಲ್ಲಿ ತನ್ನ ದುಃಖವನ್ನು ಹೇಳಿಕೊಳ್ಳುತ್ತಿದ್ದಳು. ಕೊನೆಗೆ ಒಂದು ದಿನ ವಿದ್ಯಾಭ್ಯಾಸದ ಮುಖ್ಯಾಧಿಕಾರಿಯಲ್ಲಿ ಸಹ ಹೋಗಿ ಹೇಳಿಕೊಂಡಳು. ಅವನು "ಏನು ಮಾಡುವುದು? ಇವರಿಗೆ ಶಿಕ್ಷೆ ಮಾಡುವುದು ನಮ್ಮ ಕೈಯಲ್ಲಿಲ್ಲ. ಇವರೆಲ್ಲಾ ಕ್ರಿಮಿನಲ್" ಎಂದನು. ಜಾನಕಿಗೂ ೮-೧೦ ದಿನ ಜ್ವರ ಬಂದು ಅವಳು ನಿತ್ರಾಣವಾಗಿದ್ದಳು. ಇನ್ನು ಶೇಷುವಿನ ಮನೆಯಲ್ಲಿ ಕುಳಿತು ಕಾದಾಡಿ ಪ್ರಯೋಜನವಿಲ್ಲವೆಂದು ಯೋಚಿಸಿ ಜಾನಕಿಯ ತಾಯಿಯು "ಜಾನಕಿಗೆ ಸ್ವಲ್ಪ ಆರೋಗ್ಯವಾದ ಮೇಲೆ ಇನ್ನು ಒಂದು ತಿಂಗಳು ಬಿಟ್ಟು ಮತ್ತೆ ಕರೆದುಕೊಂಡು ಬರುತ್ತೇನೆ. ಇಲ್ಲಿ ಔಷಧಿ ಪಥ್ಯ ಮುಜಗರ ನಿಮಗೆ ಯಾಕೆ" ಎಂದು ಹೇಳಿ ಜಾನಕಿಯೊಡನೆ ಹಳ್ಳಿಗೆ ಹೋದಳು. ನಾನು ನಮ್ಮ ಊರಿಗೆ ಬಂದೆ.

ಆಮೇಲೆ ಎರಡು ವರುಷಗಳ ಕಾಲ ನಾನು ಶೇಷುವನ್ನು ನೋಡಲಿಲ್ಲ. ಈ ಮಧ್ಯೆ ಅವನ ತಂದೆತಾಯಿಗಳಿಬ್ಬರೂ ತೀರಿಕೊಂಡರು. ಜಾನಕಿಯೂ ಅವಳ ತಾಯಿಯೂ ಒಂದೆರಡು ಸಲ ಬಂದಿದ್ದು ಮತ್ತೆ ಕಾದಾಡಿಕೊಂಡು ವಾಪಸು ಹೋದರು. ಆನಂದ ಪಟ್ಟಣದ ನಾಗರೀಕತೆಯಲ್ಲಿ ಗೆಲುವಾಗಿ ಬೆಳೆಯುತ್ತಿದ್ದಳು. ನಿತ್ಯಾ ಬ್ಯಾಂಡ್‌ಮಿಂಟನ್, ಕೈಗಡಿಯಾರ, ಕಾಲಿಗೆ ಚಪ್ಪಲಿ, ಸ್ತ್ರೀಸಮಾಜ, ಸಿನಿಮಾ, ಪಾರ್ಕ್ ವಾಕಿಂಗ್ ಇವೇ ಅವಳ ದಿನಚರಿಯಾಗಿತ್ತು. ಆ ಕಾಲದಲ್ಲಿ ನನಗೆ ತಿಳಿದ ಮಟ್ಟಿಗೆ ಶೇಷು ಒಳ್ಳೆಯ ಸುಖಿಯಾಗಿದ್ದನು. ಒಂದು ದಿನ ಶೇಷುವಿಗೆ ಕಲ್ಲು ಶಿಡಬು ಎಂದು

ನನಗೆ ಟೆಲಿಗ್ರಾಂ ಬಂದಿತು. ಮೊದಲೇ ಬಾಲ್ಯದಲ್ಲಿಯೇ ಸಣ್ಣ ಶಿಡಬು ಬಂದಿದ್ದವನಿಗೆ ಮತ್ತೆ ಕಲ್ಲು ಶಿಡಬು ಬಂದುದನ್ನು ಕೇಳಿ ನನಗೆ ಗಾಬರಿಯಾಯಿತು. ನಾನು ಕೂಡಲೇ ಮೈಸೂರಿಗೆ ಹೋದೆ. ಆನಂದಳೂ ಅವಳ ತಾಯಿಯೂ ಹೆದರಿ ಹಣ್ಣಾಗಿದ್ದರು. ರೋಗಿಯೊಂದಿಗೆ ಅವರು ಮಾತು ಕೂಡ ಆಡುತ್ತಿರಲಿಲ್ಲ. ಆನಂದಳಂತೂ 'ನನಗೆ ಅದರ ಹೆಸರು ಕೇಳಿದರೇ ಭಯವಾಗುತ್ತೆ' ಎನ್ನುತ್ತಿದ್ದಳು. ನಾನು ಹೋದ ದಿನವೇ ಆನಂದಳೂ ಅವಳ ತಾಯಿಯೂ ತಮ್ಮ ಊರಿಗೆ ಓಡಿಬಿಟ್ಟರು.

ಶೇಷುವಿಗೆ ಮೈಯೆಲ್ಲಾ ಸಿಡುಬಾಗಿತ್ತು. ಒಂದು ಬೊಕ್ಕೆ ಒಂದೊಂದು ಗೆಜ್ಜಗದ ಗಾತ್ರ ಇತ್ತು. ಡಾಕ್ಟರು "ಇವನು ಬದುಕುವುದಿಲ್ಲ. ಬದುಕಿದರೂ ಇವನ ಕಣ್ಣು ಹೋಗುತ್ತೆ" ಎಂದರು. ಮನೆಯಲ್ಲಿ ನಾನೊಬ್ಬನೇ ಆದೆ. ಆಸ್ಪತ್ರೆಗೆ ಸಾಗಿಸೋಣವೆಂದರೆ ಶೇಷು ಒಪ್ಪಲಿಲ್ಲ. ಬಂದರೆ ಬರಲಿ, ಬಿಟ್ಟರೆ ಬಿಡಲಿ, ಎಂಬುದಾಗಿ ನಾನು ಯೋಚಿಸಿ ಜಾನಕಿಗೂ ಅವಳ ತಾಯಿಗೂ ಕಾಗದ ಬರೆದೆ. ಅವರಿಬ್ಬರೂ ಮರುದಿವಸವೇ ಮೈಸೂರಿಗೆ ಬಂದರು. ಕಣ್ಮುಮುಚ್ಚಿಕೊಂಡು ಕೊರಡಿನಂತೆ ಬಿದ್ದಿದ್ದ ಶೇಷುವಿಗೆ ಯಾರು ಬಂದುದೂ ಯಾರು ಹೋದುದೂ ತಿಳಿಯಲಿಲ್ಲ. ಅಲ್ಲಿಂದ ಶೇಷುವಿನ ಉಪಚಾರ ಬಹಳ ಕ್ರಮವಾಗಿ ನಡೆಯಿತು. ಜಾನಕಿಯು ಹೋದ ಆಸ್ತಿ, ಕೈಗೆ ಬಂದರೆ ಉಂಟಾಗುವಷ್ಟು ಸಂತೋಷದಿಂದ ಶೇಷುವನ್ನು ಉಪಚರಿಸತೊಡಗಿದಳು. ಸುಮಾರು ಎರಡು ತಿಂಗಳ ಕಾಲ ಶೇಷುವಿಗೆ ಉಪಚಾರವಾದ ಮೇಲೆ ಅವನ ಖಾಯಿಲೆ ಹರಿಯಿತು. ಆದರೆ ಎರಡು ಕಣ್ಣೂ ಹೋದುವು. ಡಾಕ್ಟರು ಪರೀಕ್ಷಿಸಿ "ಇವನಿಗೆ ಕಣ್ಣು ಖಂಡಿತ ಬರುವುದಿಲ್ಲ" ಎಂದರು. ವಿಷಯಗಳನ್ನೆಲ್ಲಾ ನಾನು ಸ್ಪಷ್ಟವಾಗಿ ಬರೆದು ಆನಂದಳಿಗೆ ಕಳುಹಿಸಿದೆ. ಅವಳು "ಇನ್ನು ನನಗೇನು ಕೆಲಸ ಅಲ್ಲಿ? ನಾನು ಬರುವುದಿಲ್ಲ" ಎಂದು ಬರೆದಳು.

ಶೇಷುವಿನ ಕೆಲಸ ಹೋಯಿತು. ಕುರುಡನು ಉಪಾಧ್ಯಾಯನಾಗಿರುವುದು ಸಾಧ್ಯವೆ? ಕೊನೆಯ ತಿಂಗಳಿನಲ್ಲಿ ಅರ್ಧ ಸಂಬಳ ಬಂದಿತು. ಕುರುಡರಿಗೆ ಕಿವಿಯ ಚುರುಕು ಹೆಚ್ಚು, ಶೇಷವು ಮನೆಯಲ್ಲಿ ನಮ್ಮ ಮಾತುಗಳಿಂದ ವಿಷಯಗಳನ್ನೆಲ್ಲಾ ಸಂಗ್ರಹಿಸಿದನು. ಒಂದು ದಿನ ಊಟಕ್ಕೆ ಕುಳಿತಿದ್ದಾಗ ನನ್ನನ್ನು "ಇಲ್ಲಿ ಓಡಾಡುತ್ತಿರುವವರು ಯಾರು?" ಎಂದನು. ನಾನು ಜವಾಬ್ ಕೊಡುವುದಕ್ಕೆ ಮುಂಚೆ 'ಜಾನಕಿ, ನಮ್ಮತ್ತೆ ಇಬ್ಬರೂ ಬಂದಿದ್ದಾರೆ ಅಲ್ಲವೆ?' ಎಂದನು. ನಾನು "ಹೂ" ಎಂದೆ. ಶೇಷು ೫ ನಿಮಿಷ ಮಾತನಾಡಲಿಲ್ಲ. ಅನಂತರ "ಇವತ್ತು ಹೋದ ಕಣ್ಣು ನನಗೆ ಬಂದಿತು. ದೃಷ್ಟಿಲಾಭವಾಯಿತು" ಎಂದನು.

* * * *

ಈಗ ಶೇಷು ಜಾನಕಿಯ ಹಳ್ಳಿಯಲ್ಲಿಯೇ ಇದ್ದಾನೆ. ಅವನ ಕಣ್ಣು ಹೋಗದಿದ್ದರೆ ಜಾನಕಿಗೆ ಕಣ್ಣು ಬರುತ್ತಲೇ ಇರಲಿಲ್ಲ.

# ಲಕ್ಕಿಯ ಗಂಡಂದಿರು

ಈಗ ಕೆಲವು ವರ್ಷಗಳ ಕೆಳಗೆ ನಮ್ಮೂರ ಬ್ರಾಹ್ಮಣರಿಗೆ ಇದ್ದಕ್ಕಿದ್ದಂತೆ ಒಂದು ದಿನ ತಾವೆಲ್ಲ ವ್ಯಾಪಾರಮಾಡಿ ಧನಿಕರಾಗಬೇಕೆಂದು ಆಸೆ ಹುಟ್ಟಿತು. ಕೂಡಲೆ ಅವರೆಲ್ಲ ಈ ವಿಷಯವನ್ನು ಚರ್ಚಿಸಿ ತೀರ್ಮಾನಿಸಲು ಊರ ಮುಂದಲ ದೇವಸ್ಥಾನದಲ್ಲಿ ಒಂದು ಸಭೆ ಸೇರಿಸಿದರು. ಸಭೆಯಲ್ಲಿ ವ್ಯಾಪಾರದ ವಿಷಯವನ್ನು ಕುರಿತು ವ್ಯಾಷಾರದಲ್ಲಿ ಅನುಭವವಿಲ್ಲದ ವಾಗ್ಮಿಗಳಿಂದ ದೊಡ್ಡ ದೊಡ್ಡ 'ಉಫನ್ನಿವೇಶ'ಗಳು ನಡೆದವು. ಕೊನೆಯಲ್ಲಿ ಊರಿನ ಬ್ರಾಹ್ಮಣರೆಲ್ಲಾ ನಮ್ಮೂರ ಪರಸ್ಪರ ಸಹಾಯಕ ಸಂಘದಲ್ಲಿ ಇಪತ್ತು-ಇಪ್ಪತ್ತು ರೂಪಾಯಿಗಳನ್ನು ಸಾಲವಾಗಿ ಪಡೆಯಬೇಕೆಂದೂ ಅದನ್ನು, ಮೂಲಧನವಾಗಿಟ್ಟುಕೊಂಡು ವ್ಯಾಪಾರಮಾಡಬೇಕೆಂದೂ ತೀರ್ಮಾನವಾಯಿತು. ವ್ಯಾಪಾರದಲ್ಲಿ ಬ್ರಾಹ್ಮಣರಲ್ಲೇ ಅನಾವಶ್ಯಕವಾದ ಪೈಪೋಟಿಯುಂಟಾಗದಂತೆ ಒಬ್ಬ ವ್ಯಾಪಾರಿಯು ಸಕ್ಕರೆಯನ್ನು ಮಾತ್ರವೇ ಮಾರಬೇಕೆಂದೂ ಮತ್ತೊಬ್ಬ ವಾಪಾರಿಯು ರವೆಯನ್ನು ಮಾತ್ರ ಮಾರಬೇಕೆಂದೂ ಮತ್ತೊಬ್ಬನು ಸೀಮೆಯೆಣ್ಣೆಯನ್ನು ಮಾತ್ರ ಮಾರಬೇಕೆಂದೂ ಒಬ್ಬೊಬ್ಬರು ಒಂದೊದೇ ವಸ್ತುವಿನಲ್ಲಿ ವ್ಯಾಪಾರ ಮಾಡಬೇಕೆಂದೂ ತೀರ್ಮಾನವಾಯಿತು.

ಬ್ರಾಹ್ಮಣರೆಲ್ಲಾ ಮರುದಿವಸವೇ ಪರಸ್ಪರ ಸಹಾಯಕ ಸಂಘದಿಂದ ಇಪ್ಪತ್ತು-ಇಪ್ಪತ್ತು ರೂಪಾಯಿಗಳನ್ನು ಸಾಲವಾಗಿ ಪಡೆದು, ತಾವು ಯಾವ ವಸ್ತುವಿನಲ್ಲಿ ವ್ಯಾಪಾರಮಾಡಬೇಕೆಂದು ಯೋಚಿಸಿದ್ದರೋ ಆ ಮಾಲುಗಳನ್ನು ತಂದರು. ಆದರೆ ಅವರೊಬ್ಬರೂ ವ್ಯಾಪಾರಮಾಡಲು ಪ್ರಾರಂಭಿಸಲೇ ಇಲ್ಲ. ಬ್ರಾಹ್ಮಣ ವ್ಯಾಪಾರಿಗಳ ಮನೆಯಲ್ಲಿ ಇಟ್ಟ ಸಾಮಾನುಗಳು ಇಟ್ಟ ಸ್ಥಳದಲ್ಲಿಯೇ ಮಾಯವಾಗತೊಡಗಿದವು. ರವೆ ವ್ಯಾಪಾರಿಯ ಮನೆಯಲ್ಲಿ ನಿತ್ಯ ಉಪ್ಪಿಟ್ಟು ಪ್ರಾರಂಭವಾಯಿತು. ಸೀಮೇಯೆಣ್ಣೆ ವ್ಯಾಪಾರಿಯ ಮನೆಯ ಹೆಂಗಸರು ಪ್ರತಿದಿನವೂ ಒಲೆಗೆ ಒಂದು ಸೀಸೆ ಎಣ್ಣೆಯನ್ನು ಸುರಿಯಲು ಪ್ರಾರಂಭಿಸಿದರು. ಕಾಫಿ ಬೀಜದ ವ್ಯಾಪಾರಿಯ ಮನೆಯಲ್ಲಿ ನಿತ್ಯ ಕಾಫಿ ಸಮಾರಾಧನೆಯೇ ಪ್ರಾರಂಭವಾಯಿತು. ಸಕ್ಕರೆ ವ್ಯಾಪಾರಿಯ ಮನೆಯಲ್ಲಿ ಹುಡುಗರೆಲ್ಲಾ ಬೊಗಸೆ ಬೊಗಸೆಯಲ್ಲಿ ಸಕ್ಕರೆಯನ್ನು ಮುಕ್ಕಿ ಚೆಲ್ಲಾಡಿದುದರಿಂದ, ಮನೆಯ ಸುತ್ತ ಒಂದು ಫರ್ಲಾಂಗ್ ದೂರ ಇರುವೆಗಳೆಲ್ಲಾ ಸಾಲಿಟ್ಟು ಮನೆಯನ್ನು ಮುತ್ತಿದ್ದುವು. ಎರಡು-ಮೂರು ತಿಂಗಳಿನೊಳಗಾಗಿ ಬ್ರಾಹ್ಮಣರು ವ್ಯಾಪಾರವು ತಮಗೆ ಹೇಳಿದುದಲ್ಲವೆಂದೂ "ಹಾರುವಯ್ಯನ

ಓದಾಟ ಹಾಲು ಸಕ್ಕರೆಯೂಟ" ಎಂಬಂತೆ ವಿದ್ಯೆಯೇ ತಮ್ಮ ಕಸಬೆಂದೂ ಬ್ರಾಹ್ಮಣರು ಎಂತಹ ಅಧೋಗತಿಗೆ ಇಳಿದರೂ ತಮ್ಮ ಕಸಬನ್ನು ಬಿಟ್ಟು ವರಧರ್ಮವನ್ನು ಅವಲಂಬಿಸುವುದು ಭಯಾವಹವೆಂದೂ ಹೇಳಿ, ವ್ಯಾಪಾರಮಾಡಕೂಡದೆಂದೂ ಆ ಕಸಬನ್ನು 'ಇತರಾದಿಗಳಿಗೆ' ಬಿಡಬೇಕೆಂದೂ ತೀರ್ಮಾನಿಸಿದರು. ಪರಸ್ಪರ ಸಹಾಯಕ ಸಂಘದಲ್ಲಿ ತೆಗೆದ ಸಾಲಗಳು ಮಾತ್ರ ಬಡ್ಡಿಯೊಂದಿಗೆ ಏರುತ್ತಾ ಇದ್ದುವು.

ಬ್ರಾಹ್ಮಣರ ಈ ಪರಾಜಯವನ್ನು ಕಂಡು ನಮ್ಮೂರ ವ್ಯಾಪಾರಿ ತಿಮ್ಮನಿಗೆ ಧೈರ್ಯವು ಹೆಚ್ಚಾಯಿತು. ತಿಮ್ಮನು ಮೊದಮೊದಲು ಹೊಗೆ ಸೊಪ್ಪು, ವೀಳೆದೆಲೆ ಇವುಗಳಲ್ಲಿ ಸಣ್ಣ ಸಣ್ಣ ವ್ಯಾಪಾರವನ್ನು ಮಾಡಿ ವಾರಕ್ಕೆ ಒಂದು ರೂಪಾಯಿ ಲಾಭವನ್ನು ಸಂಪಾದಿಸುತ್ತಿದ್ದನು. ಆದರೆ ಬರಬರುತ್ತಾ ಅವನ ವ್ಯಾಪಾರವು ಬಲವಾಯಿತು. ಭತ್ತ, ರಾಗಿ, ಬೆಲ್ಲ, ಎತ್ತು, ಯಾವ ಸಾಮಾನಿನಲ್ಲಿ ಲಾಭ ಬಂದರೆ ಅದರಲ್ಲೆಲ್ಲಾ ತಿಮ್ಮನು ವ್ಯಾಪಾರಮಾಡುತ್ತಿದ್ದನು. ಹತ್ತು ವರ್ಷಗಳೊಳಗಾಗಿ ತಿಮ್ಮನಿಗೆ ನಮ್ಮೂರಿನಲ್ಲಿ ಎರಡು ಮನೆಗಳೂ ಹತ್ತು-ಹನ್ನೆರಡು ಎಕರೆ ಹೊಲಗದ್ದೆಗಳೂ ಸೇರಿಕೊಂಡುವು. ಅವನ ಮನೆಯಲ್ಲಿ ಆಡು ಕುರಿಗಳೂ ಹಂದಿ ಹುಂಜಗಳೂ ಎತ್ತು ಎಮ್ಮೆಗಳೂ ಹಿಂಡು ಹಿಂಡಾಗಿ ಹೆಚ್ಚತೊಡಗಿದುವು. ನಮ್ಮೂರಿನಲ್ಲಿ ಯಾವ ದೊಡ್ಡ ವ್ಯಾಪಾರವಾದರೂ ಅದರಲ್ಲಿ ತಿಮ್ಮನು ಸೇರಿಯೇ ಇರುತ್ತಿದ್ದನು. ಅವನನ್ನು ಕಂಡರೆ ಊರಿನಲ್ಲಿ ಎಲ್ಲರಿಗೂ ಗೌರವವೂ ವಿಶ್ವಾಸವೂ ಇದ್ದುವು.

ತಿಮ್ಮ ತನಗೆ ನಲವತ್ತೈದು ವಯಸ್ಸಾಗುವವರೆಗೆ ಮದುವೆಯ ವಿಚಾರವನ್ನೇ ಯೋಚಿಸಿರಲಿಲ್ಲ. ನಲವತ್ತೈದನೆಯ ವಯಸ್ಸಿನಲ್ಲಿ ಮದುವೆಯಾದರೂ ಆಗಬಹುದುದೆಂದು ಯೋಚಿಸಲು ಪ್ರಾರಂಭಿಸಿದನು. ಐವತ್ತನೆಯ ವಯಸ್ಸಿನಲ್ಲಿ ಖಂಡಿತವಾಗಿಯೂ ಮದುವೆಯಾಗಿಯೇ ತೀರಬೇಕೆಂದು ನಿಶ್ಚಯಿಸಿದನು. ಆದರೆ ಯಾವುದಾದರೂ ಉಪಾಯಮನಾಡಿ ವಿಶೇಷ ಖರ್ಚಿಲ್ಲದಂತೆ, ತಂದೆತಾಯಿಗಳಿಲ್ಲದ ಯಾವುದಾದರೂ ತಬ್ಬಲಿ ಹೆಣ್ಣನ್ನು ತಂದುಕೊಂಡು, ಹೆಣ್ಣಿಗೆ ತೆರಬೇಕಾದ ತೆರ ಮುಂತಾದ ವೆಚ್ಚವನ್ನೆಲ್ಲಾ ಕಡಿಮೆ ಮಾಡಿಕೊಳ್ಳಬೇಕೆಂದೂ ಊರಿನವರಿಗೆ ಕೊಡಬೇಕಾದ ಊಟ ಮುಂತಾದುದರಲ್ಲಿಯೂ ವಿಶೇಷ ಹಿಡಿತವನ್ನು ತೋರಿಸಬೇಕೆಂದೂ ನಿಶ್ಚಯಿಸಿಕೊಂಡನು.

ನಮ್ಮೂರ ತಳವಾರ ಕರಿಯನ ಮನೆಯಲ್ಲಿ ಇಬ್ಬರು ಹುಡುಗಿಯರಿದ್ದರು. ಒಬ್ಬಳು ಕರಿಯನ ತಂಗಿ. ಅವಳಿಗೆ ಸುಮಾರು ಹದಿನೆಂಟು ವಯಸ್ಸಾಗಿದ್ದಿತು. ರೂಪವತಿಯಲ್ಲದಿದ್ದರೂ

ಗಟ್ಟಿಮುಟ್ಟಾಗಿದ್ದಳು. ಮತ್ತೊಬ್ಬಳು ಕರಿಯನ ದೂರದ ಸಂಬಂಧಿ. ತಬ್ಬಲಿ ಹುಡುಗಿ. ಹೆಸರು ಲಕ್ಕಿ. ಅವಳಿಗೂ ಸುಮಾರು ಹದಿನೆಂಟು ವಯಸ್ಸಾಗಿದ್ದಿತು. ಅವಳು ಕರಿಯನ ಸ್ವಂತ ತಂಗಿ ನಂಜಿಗಿಂತ ಸ್ವಲ್ಪ ಹೆಚ್ಚು ಚೆನ್ನಾಗಿದ್ದಳು. ನಮ್ಮ ಕಡೆ ಒಕ್ಕಲಿಗರಲ್ಲಿ ಮದುವೆಗೆ ಹೆಣ್ಣು ಸಿಕ್ಕುವುದು ಕಷ್ಟವಾದುದರಿಂದ ದೂರದ ಸಂಬಂಧದ ಹೆಣ್ಣುಗಳನ್ನು ಮನೆಯಲ್ಲಿಟ್ಟುಕೊಂಡು ಸಾಕಿಕೊಂಡು ಅನಂತರ ಅವರನ್ನು ಮದುವೆಯಾಗುವುದು ಅನೇಕರಲ್ಲಿ ವಾಡಿಕೆಯಾಗಿದೆ. ಹೀಗೆ ಮಾಡುವುದರಿಂದ ಅನೇಕ ವೇಳೆ ಹೆಣ್ಣಿನ ತಂದೆತಾಯಿಗಳಿಗೆ ಕೊಡಬೇಕಾದ ನೂರಾರು ರೂಪಾಯಿ ತೆರದ ಹಣವು ಉಳಿತಾಯವಾಗುವುದು. ತಮ್ಮ ಮದುವೆಯಿಂದಲೇ ಸಾವಿರಾರು ರೂಪಾಯಿ ಸಾಲಗಾರರಾಗುವ ರೈತರು ಯಾವ ರೀತಿಯಿಂದಲಾದರೂ ಸರಿಯೆ—ತಮ್ಮ ಮರ್ಯಾದೆಗೆ ಕುಂದು ಬರದಂತೆ—ಈ ತೆರದ ಹಣವನ್ನು ಉಳಿಸಲು ಪ್ರಯತ್ನ ಪಡುವರು. ತಳವಾರ ಕರಿಯನಾದರೂ ಅದೇ ಉದ್ದೇಶದಿಂದ ಲಕ್ಕಿಯನ್ನು ಮನೆಯಲ್ಲಿ ಸಾಕಿಕೊಂಡಿದ್ದನು. ತನ್ನ ತಂಗಿಯಾದ ನಂಜಿಯನ್ನು ಯಾವನಾದರೊಬ್ಬ ಅನುಕೂಲವಂತನಾದ ರೈತನಿಗೆ ಮದುವೆಮಾಡಿಕೊಟ್ಟು, ಬಂದ ತೆರದ ಹಣದಿಂದ ತನ್ನ ವ್ಯಾಪಾರ ಸಾಗಿಸಿಕೊಂಡು ತಾನು ಹೆಚ್ಚು ವೆಚ್ಚವಿಲ್ಲದೆ ಮನೆಯಲ್ಲಿ ಬೆಳೆಸಿಕೊಂಡಿರುವ ಹುಡುಗಿಯನ್ನು ಮದುವೆಯಾಗಬೇಕೆಂಬುದು ಅವನ ಏರ್ಪಾಡಾಗಿದ್ದಿತು. ಅದೂ ಅಲ್ಲದೆ ತಾನು ಸಾಕಿಕೊಂಡಿರುವ ಲಕ್ಕಿಯನ್ನು ಇತರರಾರೂ ಮದುವೆಯಾಗುವದಿಲ್ಲವೆಂದೂ ಯಾರಾದರೂ ಅವಳಿಗೆ ಬದಲಾಗಿ ತನ್ನ ತಂಗಿಯಾದ ನಂಜಿಯನ್ನೇ ಮದುವೆಯಾಗುವರೆಂದೂ ಅದರಿಂದ ತನಗೆ ಹಣವೂ ಹೆಣ್ಣೂ ದಕ್ಕುವುದೆಂದೂ ಅವನು ಗುಣಿಸಿಕೊಂಡಿದ್ದನು.

ಆ ವೇಳೆಗೆ ತಿಮ್ಮನಿಗೆ ಮದುವೆಯಾಗುವ ಹುಚ್ಚು ಹಿಡಿದಿದೆ ಎಂಬುದು ನಮ್ಮೂರಿನಲ್ಲಿ ಎಲ್ಲೆಲ್ಲೂ ಪ್ರಚಾರವಾಗತೊಡಗಿತು. ತಿಮ್ಮನು "ತ್ರಾಣಿ"[5] ಯಾಗುವವರೆಗೆ ಮದುವೆಯಾಗುವುದಿಲ್ಲವೆಂದು ತಿಳಿದಿದ್ದ ಕೆಲವರಿಗೆ ಆ ಸುದ್ದಿಯನ್ನು ಕೇಳಿ ಆಶ್ಚರ್ಯವಾಯಿತು. ಮತ್ತೆ ಕೆಲವರು "ಇಷ್ಟು ದಿವಸ ಈ ಪ್ರಾಣಿ ಗಾಣಿಗನ ಮನೆ ಎತ್ತಿನಂತೆ ಮೂಗಿಗೆ ಕವಡೆ ಕಟ್ಟಿಕೊಂಡು ದುಡಿದು ಕಾಸಿಗೆ ಕಾಸು ಗಂಟು ಹಾಕಿದೆ. ಅದನ್ನ ಖರ್ಚಮಾಡೋಕೆ ಒಬ್ಬಳು ಬರಬೇಕು. ಅದಾವ ಮಾಟಗಾತಿ ಈ ಮುದಿಯನಿಗೆ ಮೂಗುದಾರ ಪೋಣಿಸ್ತಾಳೊ ನೋಡಬೇಕು"

---

[5] ನಮ್ಮೂರಿನಲ್ಲಿ ಒಬ್ಬ ಮನುಷ್ಯನ ಆಸ್ತಿಯು ಹತ್ತುಸಾವಿರಕ್ಕೆ ಏರಿದರೆ ಅವನನ್ನು ತ್ರಾಣಿ ಎನ್ನುತ್ತಾರೆ.

ಎಂದುಕೊಂಡರು. ತಿಮ್ಮನು ಮುದುಕನಾಗಿದ್ದರೂ ನಮ್ಮೂರಿನ ರೈತರೆಲ್ಲರೂ ಅವನಿಗೆ ಹೆಣ್ಣನ್ನು ಕೊಡಲು ಉತ್ಸಾಹಿಗಳಾಗಿಯೇ ಇದ್ದರು. ಅವನಿಗೆ ತನ್ನ ತಂಗಿಯನ್ನು ಮದುವೆ ಮಾಡಿಕೊಡಲು ತಳವಾರ ಕರಿಯನಿಗೂ ಬಹಳ ಆಸೆಯಿದ್ದಿತು. "ತಿಮ್ಮ ತ್ರಾಣಿ. ದುಡ್ಡು ಕಾಸು ಬಲವಾಗಿ ಇಟ್ಟಿದ್ದಾನೆ. ಜಮೀನು ವಿಪರೀತವಾಗಿದೆ. ಅಲ್ಲದೆ ಮುದುಕ. ತೆರದ ಹಣ ಬೇಕಾದಂತೆ ಎಳೀಬಹುದು. ಇವತ್ತೊ-ನಾಳೆಯೋ ಸಾಯೋನಾದ್ದರಿಂದ ತಂಗಿ ಕೈಗೆ ಅವನ ಆಸ್ತಿ ಬೀಳ್ತದೆ. ಅದರಿಂದ ನನ್ಗೂ ಲಕ್ಕೀಗೂ ನೆಮ್ಮದಿಯಾಗ್ತದೆ" ಎಂಬುದೇ ಅವನ ಯೋಚನೆಯಾಗಿತ್ತು. ರೈತರಲ್ಲಿ ಗಂಡಿಗೆ ಹೆಣ್ಣುಕೊಡಲು ಹೆಣ್ಣಿನ ತಂದೆತಾಯಿಗಳು ಅತಿಯಾದ ಉತ್ಸಾಹವನ್ನು ತೋರಿಸುವುದು ಪದ್ಧತಿಯಲ್ಲವಾದರೂ ತಿಮ್ಮನ ವಿಷಯದಲ್ಲಿ ಮೇಲೆ ಹೇಳಿದ ಕಾರಣಗಳಿಗಾಗಿ ರೈತರಿಗೆಲ್ಲಾ ಉತ್ಸಾಹ ಹೆಚ್ಚಾಗಿತ್ತು.

ಒಂದು ದಿವಸ ತಿಮ್ಮ ಸಂತೆದಾರಿಯಲ್ಲಿ ಕರಿಯನನ್ನು ಕಂಡು "ಕರಿಯ, ಲಗ್ನ ಆಗೋವ ಅಂತ ವೇಚನೆ ಮಾಡಿದೇನೆ. ನಿನ್ನ ಮನೇಲಿ ಎರಡು ಹುಡಿಗೀರಿವೆ. ಏನ್ಹೇಳ್ತಿಯ?" ಎಂಬುದಾಗಿ ಹೇಳಿದನು. ಕರಿಯನು "ಅದ್ಕೇನು ತಿಮ್ಮಪ್ಪ, ನಾಳೆ ಹಟ್ಟಿಗೆ ಬಾ. ಇಚಾರ ಮಾತಾಡೋಣ" ಎಂದನು. ತಿಮ್ಮನು ಮರುದಿವಸ ಮಧ್ಯಾಹ್ನ ಹನ್ನೆರಡು ಗಂಟೆಗೆ ಬರುವುದಾಗಿ ಹೇಳಿ, ತನ್ನ ಕೆಲಸದ ಮೇಲೆ ಹೊರಟುಹೋದನು.

ಕರಿಯನು ಮನೆಗೆ ಹೋದವನೇ ನಂಜಿಯನ್ನು ಕರೆದು "ನಾಳೆ ತಿಮ್ಮ ಹಟ್ಟಿಗೆ ಬರ್ತಾನೆ. ಏ ನಂಜಿ, ಬಾರಿ ಹಣದ ಚೀಲ ಬಲೆಗೆ ಬೀಳ್ತದೆ. ತಿಮ್ಮ ನಿನ್ನ ಚಂದಕ್ಕೆ ಮರುಳಾಗೋನಲ್ಲ. ಆದರೂ ಅಲಂಕಾರ ಚೆಂದಾಗಿ ಮಾಡ್ಕೊ. ತೆರ ಬೊಗಸೆ ಬೊಗಸೇಲಿ ವಸೂಲಿ ಮಾಡ್ತೀನಿ" ಎಂದು ಹೇಳಿದನು. ನಂಜಿಗೆ ಆ ರಾತ್ರಿಯೆಲ್ಲಾ ತಾನು ಎಂದಿಗೆ ತಿಮ್ಮನ ಹೆಂಡತಿಯಾದೇನು, ಎಂದಿಗೆ ಅವನ ಆಸ್ತಿಯನ್ನೆಲ್ಲಾ ಅನುಭವಿಸಿಯೇನು ಎಂಬುದೇ ಯೋಚನೆಯಾಗಿತ್ತು. ಮರುದಿವಸ ಬೆಳಗ್ಗೆ ನಂಜಿಯು ಆ ದಿನ ಸೋಮವಾರವಲ್ಲದಿದ್ದರೂ—ಬಿಸಿನೀರಿನಲ್ಲಿ ಸ್ನಾನಮಾಡಿದಳು. ಕೈಯಿನ ಬೆಳ್ಳಿಯ ಕಡಗವನ್ನು ಚೆನ್ನಾಗಿ ಉಜ್ಜಿ ಅದಕ್ಕೆ ಮತ್ತಷ್ಟು ಹೊಳಪು ಬರುವಂತೆ ಮಾಡಿದಳು. ಕತ್ತಿನ ಕರಿಮಣಿ ಸರವನ್ನು ಮತ್ತಷ್ಟು ಕಪ್ಪಾಗಿ ಮಾಡಿಕೊಂಡಳು. ಕಾಚಿನಪುಡಿಯಿಂಂದ ಕಪ್ಪಾಗಿದ್ದ ಹಲ್ಲುಗಳನ್ನು ಉಜ್ಜಿ ಉಜ್ಜಿ ಹಲ್ಲಿನಲ್ಲಿ ರಕ್ತ ಬಂದರೂ ಅದರ ಕಪ್ಪನ್ನು ಹೋಗಲಾಡಿಸಲು ಆಗದುದರಿಂದ ಮತ್ತೊಂದು ಸಲ ಬಲೆ ಅಡಿಕೆ ಹಾಕಿಕೊಂಡು ತುಟಿಯನ್ನು ಎಣ್ಣೆಗೆಂಪಾಗಿ ಮಾಡಿಕೊಂಡಳು. ಹಣೆಗೆ ಕಾಸಿನ ಅಗಲ ಸಾದನ್ನು ಇಟ್ಟುಕೊಂಡಳು. ಸಾದನ್ನು ಹಣೆಗೆ

ಇಟ್ಟುಕೊಳ್ಳುವಾಗ ಕನ್ನಡಿಯಲ್ಲಿ, ತನ್ನ ಹಣೆಯ ಬಣ್ಣಕ್ಕೂ ಸಾದಿನ ಬಣ್ಣಕ್ಕೂ ಹೆಚ್ಚು ವ್ಯತಾಸ ಕಾಣದುದರಿಂದ ಹಣೆಯನ್ನು ಸೀಗೆಕಾಯಿಯಿಂದ ಹತ್ತಿಪ್ಪತ್ತು ಸಲ ತೊಳೆದುಕೊಂಡಳು. ಹೇಗೆ ಹೇಗೆ ಮಾಡಿದರೂ ತಿಮ್ಮ ಬರುವವರೆಗೆ ಅವಳ ಸಿದ್ಧತೆಯು ಮುಗಿದೇ ಇರಲಿಲ್ಲ.

ಲಕ್ಕಿ ಸ್ವಲ್ಪ ಥಳಕಿನ ಹುಡುಗಿಯಾಗಿದ್ದಳು. ಆದರೆ ಅವಳಿಗೆ ನಂಜಿಗೆ ಇದ್ದಂತೆ ಹೊಸ ಸೀರೆ ಇರಲಿಲ್ಲ, ದಪ್ಪವಾದ ಬೆಳ್ಳಿಯ ಕಡಗವಿರಲಿಲ್ಲ. ಅವಳ ಹೆಮ್ಮೆಯು ಹೆಚ್ಚಾಗಬಾರದೆಂದು ಕರಿಯನು ಅವಳನ್ನು ಸಾಧ್ಯವಾದಷ್ಟು ಬಡತನದಲ್ಲಿಟ್ಟಿದ್ದನು. ಆದರೆ ಲಕ್ಕಿಯು ನಂಜಿಗಿಂತ ಹೆಚ್ಚು ಚೆನ್ನಾಗಿದ್ದಳು. ಬಹಳ ಮಧುರವಾಗಿ ಗಾಡಿಯ ಪದಗಳನ್ನೂ ಬೀಸುವ ಕಲ್ಲಿನ ಹಾಡುಗಳನ್ನೂ ಹಾಡುತ್ತಿದ್ದಳು. ಅವಳು ದನಗಳನ್ನು ಹೊಡೆದುಕೊಂಡು ಹುಲ್ಲುಗಾವಲಿಗೆ ಹೋಗಿ, ಬೇಸರಿಕೆಯನ್ನು ಕಳೆದುಕೊಳ್ಳಲು ಹಾಡಲು ಪ್ರಾರಂಭಿಸಿದರೆ, ನಮ್ಮೂರಿನ ದನ ಕಾಯುವವರೆಲ್ಲಾ ದನಗಳನ್ನು ಅವುಗಳ ಪಾಡಿಗೆ ಬಿಟ್ಟು ಅವಳ ಹಾಡನ್ನು ಕೇಳುತ್ತಾ ನಿಂತುಕೊಳ್ಳುತ್ತಿದ್ದರು. ಅವಳು ಹಾಡುತ್ತಿದ್ದರೆ ಹುಡುಗರು ಹಾಡುಗಳನ್ನು ಅನುಸರಿಸಿ ಕುಣಿಯುವುದೂ ಕೋಲಾಟವನ್ನಾಡುವುದೂ ಸಾಧಾರಣವಾಗಿ ನಮ್ಮೂರ ಹುಲ್ಲುಗಾವಲಿನಲ್ಲಿ ನಿತ್ಯ ಕಾಣುವ ನೋಟವಾಗಿದ್ದಿತು. ಲಕ್ಕಿಗೆ ವಯಸ್ಸು ಹದಿನೆಂಟು-ಹತ್ತೊಂಭತ್ತು ಆಗಿದ್ದರೂ ಕೂಡ ಅವಳು ಚಿಕ್ಕ ಹುಡುಗಿಯರಂತೆ ದನಗಳ ಹಿಂದೆ ಓಡುವುದು, ಬೇಲಿಗಳನ್ನು ನೆಗೆಯುವುದು, ನದಿಯಲ್ಲಿ ಈಜುವುದು, ಮರ ಹತ್ತುವುದು ಮುಂತಾದ ಚೇಷ್ಟೆಗಳನ್ನೆಲ್ಲಾ ಮಾಡುತ್ತಿದ್ದಳು. ಹಳ್ಳಿಗಳಲ್ಲಿ ಎಲ್ಲಾ ಹುಡುಗಿಯರೂ ಸ್ವಲ್ಪ ಗಂಡು ಬೀರಿಗಳಾಗಿಯೇ ಇರುವುದರಿಂದ ಲಕ್ಕಿಯ ಈ ಮುಂದಾಳುತನವು ಯಾರಿಗೂ ವಿಚಿತ್ರವಾಗಿ ತೋರಲಿಲ್ಲ.

ತಿಮ್ಮನ ಮದುವೆ ವಿಚಾರ ಬಂದಾಗ ಕರಿಯನಿಗೆ ಒಂದು ಸಮಾಧಾನವಿತ್ತು. "ತಿಮ್ಮ ಮುದುಕ. ಹಳೆಯ ಕಾಲದವನು. ಈ ಥಳಕಿನ ಹುಡುಗಿಯನ್ನು ಖಂಡಿತ ಮದುವೆಯಾಗುವವನಲ್ಲ. ಸ್ವಲ್ಪ ಹಳೆಯ ಕಾಲದ ಹುಡುಗಿಯಂತೆಯೇ ತೋರುವ ನಂಜಿಯನ್ನೇ ಅವನು ಒಪ್ಪುತ್ತಾನೆ." ಈ ದೃಷ್ಟಿಯಿಂದ ನೋಡಿದರೆ ಲಕ್ಕಿಯು ಥಳಕಾಗಿರುವುದು ತನಗೆ ಒಳ್ಳೆಯದೆಂದೇ ಅವನಿಗೆ ತೋರಿತು. ಆದರೆ ಆ ಥಳಕೇ ತನಗೆ ವಿರೋಧವಾಗಿ ಪರಿಣಮಿಸಬಹುದೆಂದು ಅವನಿಗೆ ಹೊಳೆಯಲಿಲ್ಲ.

ಗೊತ್ತಾಗಿದ್ದಂತೆ ಮರುದಿನ ಮಧ್ಯಾಹ್ನ ತಿಮ್ಮನು ಕರಿಯನ ಹಟ್ಟಿಗೆ ಬಂದನು. ಅಂಗಳದಲ್ಲಿ ಬಿದ್ದಿದ್ದ ಹುಲ್ಲಿನ ಹೊರೆಯನ್ನು ಎಳೆದುಕೊಂಡು ಅದರ ಮೇಲೆ ತನ್ನ ಹಚ್ಚಡವನ್ನು

ಹಾಸಿಕೊಂಡು ಕುಳಿತನು. ಅನಂತರ ಮದುವೆ ಮಾತು ಪ್ರಾರಂಭವಾಯಿತು. ಕರಿಯನು ಸೂಚಿಸಿದ ಯಾವ ಮಾತನ್ನೂ ತಿಮ್ಮ ಒಪ್ಪಲಿಲ್ಲ. ನಂಜಿಯ ಸೀರೆಯನ್ನೂ ಉಡುಪುಗಳನ್ನೂ ಬೆಳ್ಳಿಯ ಕಡಗಗಳನ್ನೂ ನೋಡಿ ಅವನು "ಈ ಹುಡ್ಗಿಗೆ ಒಡವೆ ಆಸೆ ಪೂರಾ. ಇವಳ್ನ ಮನೆಗೆ ತಂದ್ಕೊಂಡ್ರೆ ಮನೆ ದುಡ್ಡೆಲ್ಲಾ ಇವಳ ಮೈಮೇಲೆಯೇ ಇರಬೇಕಾಗ್ತದೆ. ಸಗಣಿ ತಟ್ಟಿಕೊಂಡು ಗೊಬ್ಬರ ಹೊತ್ತುಕೊಂಡು ಕಸಮುಸುರೆ ಮಾಡ್ಕೊಂಡು ಸಂಸಾರ ಮಾಡೋಕೆ ಈ ಹುಡ್ಗಿ ಸುತರಾಂ ಲಾಯಕ್ಕಲ್ಲ. ಲಕ್ಕೀನೆ ಮದ್ವೆ ಆಗ್ತೀನಿ" ಎಂಬುದಾಗಿ ಅವನು ಯೋಚಿಸಿಕೊಂಡನು. ತಿಮ್ಮನ ಅಭಿಪ್ರಾಯವು ಕರಿಯನಿಗೆ ತಿಳಿದ ಕೂಡಲೆ ಕರಿಯನು "ಬೇಡ, ಲಕ್ಕಿ ತಬ್ಬಲಿ ಹುಡುಗಿ. ತಂದೆತಾಯಿಗಳಿಲ್ಲ. ಅಣ್ಣತಮ್ಮಂದಿರಿಲ್ಲ. ನನ್ನ ತಂಗೀನ ಮದ್ವೆ ಆಗು. ನಿನ್ನ ಅಳಿಯತನ ಚೆನ್ನಾಗಿ ನಡೆಯುತ್ತೆ" ಎಂದು ಪ್ರೋತ್ಸಾಹಿಸಿದನು. ತಿಮ್ಮನು "ತಬ್ಬಲಿ ಹುಡುಗಿಯಾದರೆ ಒಳ್ಳೆಯದೇ ಆಯಿತು. ತೆರ ಕೇಳುವವರೇ ಯಾರೂ ಇಲ್ಲವಾಗುತ್ತೆ. ನಿನ್ನ ಮನೆ ಅಳಿಯತನ ಬೇಕಿಲ್ಲ" ಎಂದನು. ಕರಿಯನು ವಿಧಿಯಿಲ್ಲದೆ ಒಪ್ಪಿಕೊಳ್ಳಬೇಕಾಯಿತು.

ತಿಮ್ಮನ ಸ್ವಭಾವ ಬಹಳ [6]ಅಂಟಾದುದರಿಂದ ಅವನಿಂದ ತೆರದ ಹಣ ವಸೂಲ್ಮಾಡುವುದು ಕರಿಯನಿಗೆ ಬಹಳ ಕಷ್ಟವಾಯಿತು. ಈ ಹಣಕ್ಕೆ ಹಕ್ಕುದಾರರು ಯಾರೂ ಇಲ್ಲ ಎಂಬುದೇ ಅವನ ವಾದವಾಗಿತ್ತು. ಗ್ರಾಮಸ್ತರೆಲ್ಲಾ ಪಂಚಾಯ್ತಿ ಸೇರಿ ಅವನಿಂದ ಸರಿಯಾದ ಹಣವನ್ನು ಕರಿಯರಿಗೆ ವಸೂಲ್ಮಾಡಿಕೊಟ್ಟರು. ಮದುವೆಯ ಕಾಲದಲ್ಲಿ ತಿಮ್ಮ ನಡಸಿದ ಹಿಡಿತವನ್ನು ನೋಡಿ ಅವನ ಸ್ವಭಾವವನ್ನರಿತಿದ್ದ ನಮ್ಮೂರವರಿಗೇ ಆಶ್ಚರ್ಯವಾಯಿತು. ತಿಮ್ಮನು ಊರೊಟ್ಟಿನ ಊಟವನ್ನು ಕೊಡುವುದೇ ಇಲ್ಲವೆಂದೂ ಬದುಕಬೇಕೆಂದು ಆಸೆಯಿರುವವರೆಲ್ಲ ಆ ಪದ್ಧತಿಗಳನ್ನು ಬಿಡಬೇಕೆಂದೂ ವಾದಿಸಿದನು. ಗ್ರಾಮದ ಮುಖಂಡರು "ಪೂರ್ವದಿಂದ ಬಂದ ಪರ್ದಿಷ್ಟ ಅಷ್ಟು ಸುಲಭವಾಗಿ ಬದಲಾಯಿಸುವುದಕ್ಕೆ ಆಗುವುದಿಲ್ಲ. ನೀನು ಬದಲಾಯಿಸಬೇಕೆಂದು ಹೇಳುವುದು ನೀನು ಕೊಡಬೇಕಾದ ಊಟವನ್ನು ಉಳಿಸುವುದಕ್ಕೇ ಹೊರತು, ಈ ಪರ್ದಿಷ್ಟ ಹೋಗಲಾಡಿಸುವುದಕ್ಕಲ್ಲ" ಎಂಬುದಾಗಿ ಹೇಳಿ ಎಂಟು ದಿವಸ ಅವನಿಗೆ ಬೆಂಕಿ ಬಿಸಿನೀರು ದೊರಕದಂತೆ ಮಾಡಿದರು. ಅಗಸ, ಹಜಾಮ, ಕಮ್ಮಾರ, ಕುಂಬಾರ, ಜೋಯಿಸರು ಅವನ ಮನೆಯಕಡೆಗೆ ಸುಳಿಯಲಿಲ್ಲ. ಕೊನೆಗೆ ತಿಮ್ಮನು ಕೂಗಾಡುತ್ತಾ ಕೊಡಬೇಕಾದ ಊಟವನ್ನು ಕೊಟ್ಟುಬಿಟ್ಟನು.

---

[6] ಜಿಪುಣ.

ಮದುವೆಯಾದ ಒಂದು ತಿಂಗಳಿನೊಳಗೆ ಲಕ್ಕಿಯು ಮನೆಯ ಆಡಳಿತವನ್ನು ಪೂರ್ಣವಾಗಿ ವಹಿಸಿಕೊಂಡಳು. ತಿಮ್ಮ ಮದುವೆಯಾಗುವುದಕ್ಕೆ ಮುಂಚೆ ಅಷ್ಟು ಸ್ವತಂತ್ರ ಬುದ್ಧಿಯುಳ್ಳವನಾಗಿದ್ದವನು ಮದುವೆಯಾದ ಕೂಡಲೆ ಲಕ್ಕಿಯ ಕೈಯಲ್ಲಿ ಎಳೆಯ ಮಗುವಿನಂತೆ ಆಗಿದ್ದನು. ಆ ಜಿಪುಣ ಮುದಿಯನನ್ನು ಅವಳು ಎಷ್ಟು ಸುಲಭವಾಗಿ ತನ್ನ ಕಿರುಬೆರಳಿನ ಸುತ್ತ ತಿರುಗಿಸುತ್ತಿದ್ದಳೆಂಬುದು ಆಶ್ಚರ್ಯಕರವಾಗಿತ್ತು. ಹೆಂಡತಿಯು ಮನೆಗೆ ಬಂದ ಮೇಲೆ ತಿಮ್ಮನು ಸುಖಾಭಿಲಾಷಿಯೂ ಸೋಮಾರಿಯೂ ಆದನು. ಮೊದಲಿನಂತೆ ಅವನಿಗೆ ಕೆಲಸಮಾಡಲು ಮೈ ಬಗ್ಗುತ್ತಿರಲಿಲ್ಲ. ಲಕ್ಕಿಯೂ ಕೂಡ ಹೆಚ್ಚಾಗಿ ದುಂದುವೆಚ್ಚಕ್ಕೆ ಪ್ರಾರಂಭಿಸಿದಳು. ಅವಳ ಮೈಮೇಲೆ ಪ್ರತಿದಿನವೂ ಹೊಸ ಹೊಸ ಸೀರೆಗಳೂ ಒಡವೆಗಳೂ ಜರತಾರಿಗಳೂ ನಲಿದಾಡತೊಡಗಿದುವು. ತಿಮ್ಮನು ಮಾತ್ರ ಹೆಂಡತಿಯ ಜಾಣ್ಮೆಯನ್ನೂ ಅವಳ ಖರ್ಚಿನ ಹಿಡಿತವನ್ನೂ ಕುರಿತು ಎಲ್ಲರೊಂದಿಗೂ ಹೇಳಿಕೊಂಡು ತಿರುಗುತ್ತಿದ್ದನು. "ಮುದುಕ ಹುಡುಗೀ ಕೈಗೆ ಸಿಕ್ಕಿದ್ದಾನೆ. ಬೆಕ್ಕು ಇಲಿಯನ್ನು ಆಡಿಸುವಂತೆ ಅವಳು ಇವನನ್ನು ಆಡಿಸುತ್ತಿದ್ದಾಳೆ, ಪಾಪ" ಎಂಬುದಾಗಿ ಜನರು ನಗುತ್ತಿದ್ದರು.

ಮದುವೆಯಾದ ಎಂಟು ತಿಂಗಳನಂತರ ತಿಮ್ಮನಿಗೆ ಒಂದು ದಿವಸ ಜ್ವರ ಬಂತು. ಅವನಿಗೆ ಅದುವರೆಗೆ ಯಾವಾಗಲೂ ಜ್ವರ ಬಂದಿರಲಿಲ್ಲ. ಮೂರು ದಿವಸದೊಳಗಾಗಿ ಯಾವ ಔಷಧಿಯಿಂದಲೂ ಗುಣವಾಗದೆ ತಿಮ್ಮನು ಸತ್ತುಹೋದನು. ಲಕ್ಕಿಯು ಮದುವೆಯಾದ ಎಂಟು ತಿಂಗಳಿನೊಳಗೆ ವಿಧವೆಯಾದಳು.

ತಿಮ್ಮನ ಮರಣದಿಂದ ಲಕ್ಕಿಗೆ ಮುದಿಗಂಡನ ಮರಣದಿಂದ ಎಷ್ಟು ದುಃಖ ಹುಡುಗಿಗೆ ಆಗಬಹುದೋ ಅಷ್ಟು ಆಯಿತು. ತಿಮ್ಮ ತಾನು ಸಂಪಾದಿಸಿದ್ದ ಎಲ್ಲಾ ಆಸ್ತಿಯನ್ನೂ ಲಕ್ಕಿಯ ಹೆಸರಿಗೆ ಮಾಡಿದ್ದನು. ಅದರಿಂದ ಲಕ್ಕಿಯು ತಿಮ್ಮನಿಗೆ ಬಹಳ ಕೃತಜ್ಞಳಾಗಿದ್ದಳು. ಕೊನೆಯಪಕ್ಷ ಮೂರು ತಿಂಗಳಾದರೂ ಹೊರಕ್ಕೆ ಹೊರಡದೆ, ಮನೆಯೊಳಗೇ ಇದ್ದು ದುಃಖವನ್ನು ಅನುಭವಿಸಬೇಕೆಂದೂ ಹಾಗೆ ಮಾಡದಿದ್ದರೆ ಊರಿನಲ್ಲಿ ತನಗೆ ಮಾನ ಬರುವುದಿಲ್ಲವೆಂದೂ ಲಕ್ಕಿಗೆ ಖಂಡಿತವಾಗಿ ಗೊತ್ತಾಗಿತ್ತು. ಆದುದರಿಂದ ಅವಳು ಮನೆಬಿಟ್ಟು ಕದಲದೆ ನದಿಗೆ ನೀರಿಗೂ ಸಂತೆಗೆ ಸಾಮಾನಿಗೂ ಹೋಗದೆ ದುಃಖವನ್ನು ನಟಿಸುತ್ತಾ ಕಾಲಹರಣಮಾಡುತ್ತಿದ್ದಳು.

ನಮ್ಮೂರಿನ ಸಂತೆ ಊರಿನಿಂದ ಮೂರು ಮೈಲಿ ದೂರದಲ್ಲಿರುವ ನದಿಯ ತೀರದ ತೋಪಿನಲ್ಲಿ ಪ್ರತಿ ಶನಿವಾರವೂ ಸೇರುವುದು. ತಿಮ್ಮನು ಸತ್ತ ಹದಿನೈದು ದಿವಸದ ಶನಿವಾರ

ಕರಿಯನ ತಂಗಿ ನಂಜಿಯು ಸಂತೆಗೆ ಹೊರಟಳು. ಬಿಸಿಲು ಬಹಳ ಬಿರುಸಾಗಿದ್ದಿತು. ನಂಜಿಯು ಕರಿಯನಿಗೆ "ಸಂತೆಗೆ ಹೋಗೋಣ, ಗಾಡಿಯನ್ನು ಹೂಡು" ಎಂದು ಹೇಳಿದಳು. ಕರಿಯನಿಗೆ ಬೇರೆ ಕೆಲಸವಿದ್ದುದರಿಂದ ಅವನು ಗಾಡಿಯನ್ನು ಹೂಡಿಕೊಟ್ಟು "ನಾನು ಬರಲಾರೆ; ನೀನೇ ಹೊಡೆದುಕೊಂಡು ಹೋಗು" ಎಂಬುದಾಗಿ ಹೇಳಿ ಹೊರಟುಹೋದನು. ನಮ್ಮೂರಿನಲ್ಲಿ ಗಂಡಸರಂತೆ ಹೆಂಗಸರೂ ಉಳುವುದೂ ಗಾಡಿ ಹೊಡೆಯುವುದೂ ಮುಂತಾದ ಕೆಲಸಗಳನ್ನು ಮಾಡುತ್ತಾರೆ. ನಂಜಿಯು ತಾನೇ ಗಾಡಿಯನ್ನು ಹೊಡೆದುಕೊಂಡು ಸಂತೆಯ ಕಡೆ ಹೊರಟಳು. ಊರಬಾಗಿಲ ಸ್ಕೂಲಿನ ಮಗ್ಗುಲಲ್ಲಿರುವುದು ತಿಮ್ಮನ ಮನೆ. ಆನೆಯ ಕಣ್ಣಿನಂತಿದ್ದ ಆ ಮನೆಯ ಕಿಟಕಿಯಲ್ಲಿ ತಲೆಯಿಟ್ಟು ಲಕ್ಕಿಯು ಸಂತೆಗೆ ಹೋಗುವವರನ್ನೆಲ್ಲಾ ನೋಡುತ್ತಿದ್ದಳು. ಹದಿನೈದು ದಿನ ಮನೆಯಲ್ಲಿ ಕುಳಿತಿದ್ದುದೇ ಅವಳಿಗೆ ಒಂದು ಯುಗವಾಗಿ ಕಾಣುತ್ತಿದ್ದಿತು. ನಾನೂ ಎಲ್ಲರಂತೆ ಯಾವಾಗ ಹೊರಗಡೆ ಹೋಗಿ ಸ್ವತಂತ್ರವಾಗಿ ತಿರುಗಾಡಿಯೇನು, ಎಂದಿಗೆ ಇವರ ಜತೆಯಲ್ಲಿ ಸಂತೆಗೆ ಹೋಗಿ ದಾರಿಯುದ್ದಕ್ಕೂ ಎಲೆ ಅಡಿಕೆ ಹೊಗೆಸೊಪ್ಪು ಕಾಚಿನ ಪುಡಿಗಳನ್ನು ಬಾಯಿಗೆ ಎಸೆದುಕೊಳ್ಳುತ್ತ ಹಕ್ಕಿಯಂತೆ ಹಾರಾಡಿಯೇನು—ಎಂಬುದೇ ಅವಳ ಹಂಬಲವಾಗಿತ್ತು. ಆ ವೇಳೆಗೆ ನಂಜಿಯು ಲಕ್ಕಿಯ ಮನೆ ಮುಂದಕ್ಕೆ ಬಂದಳು. ಬಾಗಿಲಿನಲ್ಲಿ ಗಾಡಿಯನ್ನು ನಿಲ್ಲಿಸಿ ಒಳಕ್ಕೆ ಹೋಗಿ "ಏ ಲಕ್ಕಿ, ಬಾ. ಸಂತೆಗೆ ಹೋಗಿ ಬರೋಣ. ಇಲ್ಯಾಕೆ ಬಾಳೆಕಾಯಿ ಹಗೇವಿನಲ್ಲಿ ಹಾಕಿದಂತೆ ಹಣ್ಣಾಗ್ತ ಇದೀಯ. ನೀ ಸಂತೆಗೆ ಬಂದೇ ಒಂದು ತಿಂಗಳಾಯ್ತೆಲ್ಲ, ಬಾ" ಎಂದಳು. ಲಕ್ಕಿಗೆ ನಂಜಿಯನ್ನು ಕಂಡು ಬಹಳ ಸಂತೋಷವಾಯಿತು. ಅವಳ ಮಾತು ಬಹಳ ಹಿತವಾಗಿ ಕಂಡಿತು. ಆದರೆ ಅವಳಿಗೆ ನಮ್ಮೂರಿನ ಜನರ ಬಾಯಿನ ಭಯ ಹೆಚ್ಚಾಗಿತ್ತು. ಅವಳು "ಒಲ್ಲೆ ನಂಜಿ. ಅವರು ಹೋಗಿ ಇನ್ನೂ ಹದಿನೈದು ದಿನ ಆಗಿಲ್ಲ. ಈಗ ಅಲೆಯೋಕೆ ಹೋದ್ರೆ ಜನ ಸುಮ್ಮನೆ ಬಿಟ್ಟಾರಾ? ತಲೆಗೆ ಮಂಕ್ರಿ ಬೂದಿ ಹೂದಾರು. ನಾ ವಲ್ಲೆ ನಮ್ಮವ್ವ. ಆರು ತಿಂಗಳು ಮನೆ ಬಿಟ್ಟು ಅಲ್ಲಾಡೋಕಿಲ್ಲ" ಎಂದಳು. ನಂಜಿಯು "ಏ ಹುಚ್ಚಿ, ಮದ್ವೆ ಆದ್ಮೇಲೆ ನಿನ್ನ ಧೈರ್ಯ ಎಲ್ಲಿ ಹೋಯ್ತು? ಯಾರು ಏನಂತಾರೆ ನೋಡೋಣ ಬಾ, ನಾನಿವ್ನಿ, ಎಲ್ಲರ ಬಾಯೀನೂ ಮುಚ್ಚಿಸ್ತೀನಿ. ಗಾಡಿ ಅಯ್ತೆ. ಅದರಲ್ಲಿ ಬಗ್ಗಿಕೊಂಡು ಕೂತ್ರೆ ಯಾರಿಗೂ ಕಾಣೋಕಿಲ್ಲ ಬಾ" ಎಂದು ಬಲಾತ್ಕರಿಸಿದಳು. ಲಕ್ಕಿಯು "ಸಂತೇಲಿ ನಾ ಬೇರೆ ಗಾಡಿ ಬಿಟ್ಟು ಇಳಿಯೋಕಿಲ್ಲ. ಒಬ್ಬರ ಕಣ್ಣಿಗೂ ಬೀಳೋಕಿಲ್ಲ" ಒಂದು ಹೇಳಿ, ಮಾಸಿದ್ದ ಸೀರೆಯನ್ನು ತೆಗೆದುಹಾಕಿ ಒಳ್ಳೆಯ ಸೀರೆಯೊಂದನ್ನು ಉಟ್ಟುಕೊಂಡು, ಆಚೆ ಈಚೆ ನೋಡಿ ಗಾಡಿಯಲ್ಲಿ ಕುಳಿತಳು.

ಅದು “ಗಟ್ಟಕ್ಕೆ”[7] ಬಾಡಿಗೆ ಹೊಡಿಯುವುದಕ್ಕೆ ಕರಿಯ ಕಟ್ಟಿಸಿದ್ದ ಗಾಡಿ. ಕಮಾನು ಚೆನ್ನಾಗಿತ್ತು. ಹಿಂದುಗಡೆ ಸುಮಾರು ಎರಡು ಅಡಿಯವರೆಗೆ ಗೋಣಿ ಚೀಲವನ್ನು ಕಟ್ಟಿದ್ದುದರಿಂದ ಒಳಗೆ ಯಾರಾದರೂ ಇದ್ದರೂ ಹಿಂದಲಿಂದ ಕಾಣುತ್ತಿರಲಿಲ್ಲ. ಒಳಗೆ ಹುಲ್ಲು ಹಾಸಿ ತಕ್ಕುಮಟ್ಟಿಗೆ ಮೃದುವಾಗಿತ್ತು. ಸಂತೆಯಲ್ಲಿ ಮಾರಿ, ಉಪ್ಪು ಸೊಪ್ಪು ತರುವುದಕ್ಕಾಗಿ ನಂಜಿಯು ಗಾಡಿಯಲ್ಲಿ ಒಂದು ಹುಂಜವನ್ನು ಹಾಕಿಕೊಂಡಿದ್ದಳು. ಲಕ್ಕಿಯು ಗಾಡಿಯಲ್ಲಿ ಬೆನ್ನು ಮೇಲುಮಾಡಿಕೊಂಡು ಮಲಗಿಕೊಂಡು ಹುಂಜವನ್ನು ಕೈಯಂದ ಸವರುತ್ತ ನಂಜಿಯೊಂದಿಗೆ ಮಾತನಾಡಲು ಪ್ರಾರಂಭಿಸಿದಳು. ಗಾಡಿಯು ಮುಂದೆ ಹೊರಟಿತು.

ಅವರು ನಮ್ಮೂರಿನಿಂದ ಸುಮಾರು ಒಂದು ಮೈಲು ದೂರ ಹೋಗಿರಬಹುದು. ಹಿಂದುಗಡೆ, ನಮ್ಮ ಹನುಮಯ್ಯ, ದೊಡ್ಡಿ ಹರಾಜಿನಲ್ಲಿ ತಾನು ಆರು ರೂಪಾಯಿಗೆ ಕೊಂಡುಕೊಂಡಿದ್ದ ಕುದುರೆ ಏರಿ, ಜತೆಯಲ್ಲಿ ನಾಯಿಯನ್ನು ನಡೆಸಿಕೊಂಡು ಸಂತೆಗೆ ಬರುತ್ತಿರುವುದು ಕಾಣಿಸಿತು. ನಂಜಿಯು ಲಕ್ಕಿಗೆ ಹನುಮ ಬರುವುದನ್ನು ತೋರಿಸಿದಳು. ಲಕ್ಕಿಯು “ಏನುಮಾಡಲಿ ಏನುಮಾಡಲಿ” ಎಂದುಕೊಂಡು ಗಾಡಿಯಲ್ಲಿದ್ದ ಹುಲ್ಲನ್ನು ಮೈಮೇಲೆ ಕವಿಚಿಕೊಂಡು “ಬೇಗ ಬೇಗ ಗಾಡಿ ಹೊಡಿ” ಎಂದು ನಂಜಿಯನ್ನು ಆತುರಪಡಿಸಿದಳು. ಹತ್ತು ನಿಮಿಷದೊಳಗೆ ಹನುಮನು ಗಾಡಿಯ ಮುಂದಕ್ಕೆ ಬಂದೇ ಬಿಟ್ಟನು.

ನಂಜಿಯು ಗಾಡಿಹೊಡೆಯುತ್ತಿದ್ದುದನ್ನು ನೋಡಿ ಹನುಮನು “ಕರಿಯ ಎಲ್ಲಿ? ಈ ಬಿಸಿಲಲ್ಲಿ ಗಾಡಿ ನೀನೆ ಹೊಡೀತಿದೀಯಲ್ಲ. ನನ್ನಾದ್ರು ಹೇಳಿದ್ರೆ? ಈಗ ಈ ಕುದುರೆ ಬೇರೆ ಗಂಟುಬಿದ್ದಯ್ತೆ. ಕುದುರೆ ಗಾಡಿ ಹಿಂದಕ್ಕೆ ಕಟ್ಟಿಹಾಕಿ...”

ಹನುಮನ ಮಾತು ಪೂರೈಸುವುದರೊಳಗಾಗಿ ಲಕ್ಕಿಯು ನಂಜಿಯನ್ನು ಒಂದು ಸಲ ಹಿಂದಲಿಂದ ತಿವಿದಳು. ನಂಜಿಗೇನೋ ಹನುಮನ ಮೂತು ಅಹಿತವಾಗಿ ಕಾಣಲಿಲ್ಲ. ಜತೆಯಲ್ಲಿ ಮಾತನಾಡುತ್ತಾ ದಾರಿ ಕಳೆದರೆ ಬಿಸಿಲಿನ ಜೋರು ಕಡಮೆಯಾದಂತೆ ತೋರಿ ದಾರಿ ಬೇಗ ಸಾಗುವುದೆಂದು ಅವಳು ಯೋಚಿಸಿದಳು. ಆದರೆ ಲಕ್ಕಿ ಹಿಂದಲಿಂದ ಜಿಗುಟಿದುದರಿಂದ ಹನುಮನು ತನ್ನ ಮಾತನ್ನು ಪೂರೈಸುವುದಕ್ಕೆ ಮುಂಚೆ “ಬೇಡ ಹನುಮಯ್ಯ, ನಿನ್ನ ಪಾಡಿಗೆ ನೀನು ಮುಂಚೆ ಹೋಗು. ನಾವೂ ಬೇಗ ಬೇಗ ಒಂದು ಸಂತೆ ಸೇರುತ್ತೇವೆ” ಎಂದಳು. ಹನುಮನು

[7] ಮಂಗಳೂರು ಪ್ರಾಂತ್ಯಕ್ಕೆ ಗಟ್ಟವೆನ್ನುತ್ತಾರೆ.

"ಗಾಡಿಯಲ್ಲಿ ಒಬ್ಬಳೆ ಇದ್ದೀಯೆ. ದಾರಿ ಚೆನ್ನಾಗಿಲ್ಲ. ಎತ್ತು 'ಕಣಿಹಾಕಿದರೆ' ಹಳ್ಳಕ್ಕೆ ಬಿದ್ದರೆ ನೀನೊಬ್ಬಳು ಏನುಮಾಡಬಲ್ಲೆ? ಮುಂದೆ ಅಲ್ಲಿ ಹಾವಿನ ಹುತ್ತದ ತಾವ ದೊಡ್ಡ ಹಳ್ಳ ಅದೆ. ಅಲ್ಲಿ ಗಾಡಿಗಳೆಲ್ಲಾ ಮಗಚಿಕೋತವೆ. ಹಿಂದಗಡೆ ಪಾರಿ ಎತ್ತಿ ಹಿಡೀಬೇಕು" ಎಂದನು. ಅಷ್ಟುಹೊತ್ತಿಗೆ ಗಾಡಿಯೊಳಗಿದ್ದ ಹುಂಜವು ಒಂದು ಸಲ ಕೂಗಿತು.[8] ಹನುಮನು ಸುತ್ತಲೂ ನೋಡಿ ಏನು ಕೂಗಿದ್ದು? ಗಾಡೀಲಿ ಏನಿಟ್ಟಿದ್ದಿ ನೋಡೋಣ" ಎಂದನು. ಲಕ್ಕಿಯು ಅಷ್ಟು ಹೊತ್ತಿಗೆ ಗಾಡಿಯನ್ನು ಮುಂದೆ ಬಿಡೆಂದು ಹೇಳುವಂತೆ ನಂಜಿಯನ್ನು ಬಲವಾಗಿ ಚಿಗುಟಿದಳು. ಗಾಡಿಯಲ್ಲಿ ಹುಂಜವಿದೆ ಎಂದರೆ ಹನುಮನು ಎಲ್ಲಿ ನೋಡೋಣ ಎನ್ನುತ್ತಾನೆಯೋ ಎಂಬ ಗಾಬರಿಯಿಂದ ನಂಜಿಯು "ಏನೂ ನನಗೆ ಸದ್ದು ಕೇಳಲಿಲ್ಲವಲ್ಲ" ಎಂದಳು. ಹನುಮನು "ಒಳ್ಳೇದು ಒಂದು ಚೂರು ಎಲೆ ಅಡಿಕೆ ಕೊಡು, ನಾನು ಮುಂದೆ ಹೋಯ್ತೀನಿ. ಆ ಹಾವಿನ ಹುತ್ತ ದಾಟಿಬಟ್ಟರೆ ಏನೂ ಅಪಾಯಿಲ್ಲ" ಎಂದನು. ನಂಜಿಯು ತನ್ನ ಸೊಂಟದ ಚೀಲವನ್ನು ತೆಗೆದು ಅವನಿಗೆ ಒಂದು ಎಲೆಯನ್ನೂ ಒಂದು ಚೂರು ಅಡಕೆಯನೂ ಕೊಟ್ಟಳು. ಅಷ್ಟುಹೊತ್ತಿಗೆ ಒಳಗಿದ್ದ ಹುಂಜ ಮತ್ತೊಂದು ಸಲ ಕೂಗಿಕೊಂಡು ಗಾಡಿಯ ಹೊರಕ್ಕೆ ಹೊರಟಿತು. ಲಕ್ಕಿಯು ಕೈಹಾಕಿ ಅದನ್ನು ಹಿಂದಕ್ಕೆ ಎಳೆದುಕೊಂಡಳು. ಅವಳು ಹೊರಕ್ಕೆ ಚಾಚಿದ ಕಡಗದ ಕೈ ಹನುಮನಿಗೆ ಕಂಡಿತು. ಹನುಮನು "ಒಳಗೆ ಇನ್ನೊಂದು ಹುಡ್ಗಿ ಅಯ್ತೆ. ಅದ್ಯಾಕೆ ಅಲ್ಲಿ ಅವಿತುಕೊಂಡಿದೆಯೋ ಕಾಣೆ. ನೋಡಬೇಕು" ಎಂದುಕೊಂಡು ಕುದುರೆಯನ್ನು ಎರಡು ಹೆಜ್ಜೆ ಮುಂದೆ ಬಿಟ್ಟು ಗಾಡಿಯ ಹತ್ತಿರಕ್ಕೆ ಬಂದನು. ಅಷ್ಟುಹೊತ್ತಿಗೆ ಅವನ ನಾಯಿಯು ದೂರದಲ್ಲಿ ಏನನ್ನೋ ಕಂಡು ಬಲವಾಗಿ ಬಗುಳಿತು. ಕುದುರೆ ಹತ್ತಿರಕ್ಕೆ ಬಂದುದರಿಂದಲೋ ನಾಯಿ ಬಗುಳಿದುದರಿಂದರೋ ಅಂತೂ ಎತ್ತುಗಳು ಬೆದರಿ ಮೇಲಕ್ಕೆ ನೆಗೆದು ಮಗ್ಗುಲಲ್ಲಿದ್ದ ಹಳ್ಳದ ಕಡೆಗೆ ಓಡಿದವು. ಹನುಮನು ತಡೆಯುವುದಕ್ಕೆ ಮುಂಚೆ, ನಂಜಿಯು ಹಗ್ಗವನ್ನು ಹಿಡಿಯುವುದಕ್ಕೆ ಮುಂಜೆ ಎತ್ತುಗಳು ಗಾಡಿಯನ್ನು ಹಳ್ಳದಲ್ಲಿ ಕೆಡವಿ ಬಿಟ್ಟುವು.

ಯಾರಿಗೂ ಏನೂ ಪೆಟ್ಟಾಗಲಿಲ್ಲ. ನಂಜಿಯು ಎದ್ದುನಿಂತುಕೊಂಡಳು. ಲಕ್ಕಿಯು ಹುಲ್ಲೊಳಗಿನಿಂದ ಹೊರಕ್ಕೆ ಬಂದಳು. ಅವಳ ಮುಖ ಬಿಸಿಲಿಗೆ ಬೆವರಿ ಬೆವರಿನ ಹನಿಗಳು ನೆತ್ತಿಯ ಮೇಲೂ ಕೆನ್ನೆಯ ಮೇಲೂ ಮಣಿಪೋಣಿಸಿದ್ದವು. ಹುಲ್ಲಿನ ಗರಿಗಳು ಅವಳ ಕೂದಲಿಗೆ

---

[8] ಐರಿಷ್ ಗ್ರಂಥಕರ್ತನಾದ ಸ್ಯಾಮ್ಯುಯಲ್ ಲವರ್ ಎಂಬವನು ಈ ತರದ ಸಂಗತಿಯೊಂದನ್ನು ತನ್ನ ಗ್ರಂಥದಲ್ಲಿ ನಿರೂಪಿಸಿದ್ದಾನೆ.

ಸಿಕ್ಕಿಕೊಂಡು ರಕ್ಕೆಯಾಡುತ್ತಿದ್ದುವು. ಅವಳನ್ನು ನೋಡಿ ಹನುಮನಿಗೂ ಹನುಮನನ್ನು ನೋಡಿ ಲಕ್ಕಿಗೂ ಇಬ್ಬರನ್ನೂ ನೋಡಿ ನಂಜಿಗೂ ನಗು ಬಂದಿತು. ಎಲ್ಲರೂ ಒಂದು ಸಲ ನಕ್ಕರು.

ಹನುಮನು "ತಿಮ್ಮೆಗೌಡ್ನ ಹೆಡ್ತಿ ಅಲ್ವಾ. ಪಾಪ ತಿಮ್ಮೆಗೌಡ್ರು ಹೋಗಿ ಬಿಟ್ರು. ನನಗೆ ಬಾರಿ ಬೇಕಾದವರಾಗಿದ್ರು. ಅವರು ಹೋಗಿ ಎರಡು ತಿಂಗಳಾಯ್ತಲ್ವೆ?" ಎಂದನು. ತಿಮ್ಮನು ಸತ್ತು ಎರಡು ತಿಂಗಳಾಗಿರಲಿಲ್ಲವೆಂಬುದು ಲಕ್ಕಿಗೂ ನಂಜಿಗೂ ಗೊತ್ತಿದ್ದಂತೆಯೇ ಹನುಮನಿಗೂ ಗೊತ್ತಿದ್ದಿತು. ತಿಮ್ಮ ಸತ್ತು ಎರಡುವಾರ ಮಾತ್ರವಾಗಿದ್ದುದರಿಂದ ಲಕ್ಕಿಯು ಜನಕ್ಕೆ ಮುಖ ತೋರಿಸಲು ನಾಚಿ ಗಾಡಿಯಲ್ಲಿ ಅವಿತುಕೊಂಡಿದ್ದಳೆಂಬುದು ಅವನಿಗೆ ಕೂಡಲೆ ಹೊಳೆಯಿತು. ಲಕ್ಕಿಯೂ ನಂಜಿಯೂ ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ. ಹನುಮನು ಗಾಡಿಯನ್ನು ಹೂಡಿಕೊಟ್ಟನು. ಗಾಡಿಯನ್ನು ನಿಧಾನವಾಗಿ ಹೊಡೆದುಕೊಂಡು ಬರುವಂತೆ ನಂಜಿಗೆ ಹೇಳಿ ತಾನು ಮುಂದೆ ಹೊರಟುಹೋದನು.

ಹನುಮ ನಮ್ಮೂರ ದೊಡ್ಡಬೋರನ ಮೊಮ್ಮಗ. ದೊಡ್ಡಬೋರನಿಗೆ ಈಗ ಸುಮಾರು ತೊಂಬತ್ತು ವಯಸ್ಸು. ಆದರೂ ಗಟ್ಟಿಮುಟ್ಟಾಗಿ ಕುದುರೆಯಂತೆ ಇದ್ದಾನೆ. ಕಣ್ಣು ಕಿವಿ ಹಲ್ಲು ಇವುಗಳೆಲ್ಲಾ ಹುಡುಗರಿಗಿರುವುದಕ್ಕಿಂತ ಹೆಚ್ಚು ಚುರುಕಾಗಿಯೂ ಪಟುವಾಗಿಯೂ ಇವೆ. ದೊಡ್ಡಬೋರನಿಗೆ ಒಬ್ಬರಾದ ಮೇಲೆ ಒಬ್ಬರಂತೆ ಮೂವರು ಹೆಂಡತಿಯರು ಆಗಿಹೋದರು. ಮಕ್ಕಳು ಮೊಮ್ಮತ್ತುಳೆಲ್ಲಾ ಸೇರಿ ಅವನ ಮನೆಯಲ್ಲಿ ಅರವತ್ತು-ಎಪ್ಪತು ಜನರಿದ್ದಾರೆ. ದೊಡ್ಡಬೋರ ಬಾಲ್ಯದಲ್ಲಿ ಬಹಳ ಆಟಗಳನ್ನು ಆಡಿದವನು, ಬಹಳ ಸಾಹಸಗಳನ್ನು ಮಾಡಿದವನು, ಉತ್ಸಾಹಶಾಲಿ. ಯಾವುದಕ್ಕೂ ಹೆದರಿದವನಲ್ಲ. ಪೂರ್ಣಪ್ರವಾಹದಲ್ಲಿ ನದಿಯನ್ನು ಒಂದು ದಡದಿಂದ ಮತ್ತೊಂದು ದಡಕ್ಕೆ ಸುಲಭವಾಗಿ ಈಜಿ ದಾಟಿದ್ದನು. ಅಳಿಯಂದಿರ ತ್ರಾಣವನ್ನು ಪರೀಕ್ಷಿಸುವದಕ್ಕೆ ನಮ್ಮೂರ ಹನುಮಂತರಾಯನ ಗುಡಿಯ ಮುಂದೆ ಇಟ್ಟಿರುವ ಗುಂಡುಗಳನ್ನು ಊರಿಗೆ ಹೊಸ ಅಳಿಯ ಬಂದಾಗಲೆಲ್ಲಾ ದೊಡ್ಡಬೋರನು ಅವನ ಎದುರಿಗೆ ಸುಲಭವಾಗಿ ಎದೆಯವರೆಗೆ ಎತ್ತಿ ನೆಲಕ್ಕೆ ಬಿಡುತ್ತಿದ್ದನು. ವರ್ಷೇ ವರ್ಷೇ ಬರುತ್ತಿದ್ದ ಅಳಿಯಂದರ ತ್ರಾಣವು ಬರಬರುತ್ತಾ ಕಡಮೆಯಾಗಿ ಆ ಗುಂಡನ್ನು ಎತ್ತುವವರ ಸಂಖ್ಯೆಯೇ ಅಪರೂಪವಾದಾಗ ದೊಡ್ಡಬೋರನು "ಈ ಕಾಲ್ದ ಹೈಕ್ಳು ಉಪಯೋಗಿಲ್ಲ. ಬಣ್ಣದ ಬೀಸಣಿಗೆಗಳು. ಒಂದು ಬೀಡಿ ಸೇದಿ ದಕ್ಕಿಸಿಕೊಳ್ಳಾರ್ವು; ಒಂದು ಚಿಟಿಕೆ ಅಫೀಮು ಜೀರ್ಣಸಿಕೊಳ್ಳಾರ್ವು, ಪಾಪ" ಎಂದು ಹಾಸ್ಯಮಾಡುತ್ತಿದ್ದನು.

ದೊಡ್ಡಬೋರನ ಮಗ ಕೆಂಗ. ಕೆಂಗನ ಮಗನೇ ನಾನು ಹಿಂದೆ ಹೇಳಿದ ಹನುಮ. ಹನುಮನಿಗೆ ವಯಸ್ಸು ಸುಮಾರು ಇಪ್ಪತ್ತೈದು ಆಗಿತ್ತು. ನೋಡುವುದಕ್ಕೆ ಜಟ್ಟಿಯಂತಿದ್ದನು. ಕೈಕಾಲು ಮುಟ್ಟಿದರೆ "ಕಂಚಿನಂತೆ ಕಣಿಗುಟ್ಟುತ್ತಿದ್ದಿತು." ಅವನಿಗೆ ಯಾವ ಕೆಲಸವನ್ನು ಮಾಡುವುದಕ್ಕೂ ಧೈರ್ಯವೂ ಉತ್ಸಾಹವೂ ಬೇಕಾದಂತೆ ಇದ್ದುವು. ಕೆಂಗನೂ ಅವನೂ ಸೇರಿಕೊಂಡು ಊರಿನಲ್ಲಿದ್ದ ಅರ್ಧ ಜಮೀನುಗಳನ್ನೆಲ್ಲಾ ತಾವೇ ಗುತ್ತಿಗೆಗೆ ಮಾಡಿದ್ದರು. ದೊಡ್ಡಬೋರನಿಗೆ ಹನುಮನು ಮೆಚ್ಚಿನ ಮೊಮ್ಮಗನಾಗಿದ್ದನು. ದೊಡ್ಡಬೋರನು "ಇವನೊಬ್ಬ ನನ್ಹಂಗಾದ್ರೆ ಆಗ್ತಾನೆ. ಉಳಿದೋರು ಸಪ್ಪೆ" ಎನ್ನುತ್ತಿದ್ದನು. ಹನುಮನೂ ದೊಡ್ಡಬೋರನೂ ಯಾವಾಗಲೂ ಬಹಳ ದೊಸ್ತಿಯಿಂದಿರುತ್ತಿದ್ದರು. ಹೊಲದಲ್ಲಿ ಕೆಲಸಮಾಡುವುದು, ಕಳೆ ಕೀಳುವುದು, ಪೈರು ಬಡಿಯುವುದು, ಗೊಬ್ಬರ ಹೊರುವುದು—ಇವುಗಳನೆಲ್ಲಾ ಅವರಿಬ್ಬರೂ ಒಟ್ಟಾಗಿಯೇ ಮಾಡುತ್ತಿದ್ದರು.

ಹನುಮನಿಗೆ ಸಂತೆ ದಾರಿಯಲ್ಲಿ ಲಕ್ಕಿಯನ್ನು ಕಂಡಂದಿನಿಂದ ಅವಳ ಮೇಲೆ ಮನಸ್ಸಾಗಿತ್ತು. ಅದಕ್ಕೆ ಹಿಂದೆ, ಅವಳು ತಿಮ್ಮನ ಹೆಂಡತಿಯಾಗಿದ್ದಾಗ, ತಿಮ್ಮ ಸಾಯುವದಕ್ಕೆ ಮುಂಚೆ ಹನುಮ ಅವಳನ್ನು ನೋಡಿರಲಿಲ್ಲವೆಂದಲ್ಲ. ತಿಮ್ಮನು ಸಾಯುವುದಕ್ಕೆ ಮುಂಚೆ, ಹನುಮನ ಕಣ್ಣಿಗೆ ಪ್ರತಿದಿನವೂ ಲಕ್ಕಿಯು ಒಂದಿಲ್ಲೊಂದು ರೀತಿಯಿಂದ ಬೀಳುತ್ತಲೇ ಇದ್ದಳು. ಆದರೆ ಹೇಗೋ ಹನುಮನಿಗೆ ತಿಮ್ಮ ಬದುಕಿರುವವರೆಗೆ ಅವಳ ಮೇಲೆ ಮನಸ್ಸಾಗಿರಲಿಲ್ಲ. ಅಲ್ಲದೆ ಸಂತೇ ದಾರಿಯಲ್ಲಿ ಗಾಡಿಯಿಂದ ಕೆಳಕ್ಕೆ ಬಿದ್ದಾಗ ಕಂಡಷ್ಟು ಚೆನ್ನಾಗಿ ಅವಳು ಮತ್ತಾವಾಗಲೂ ಕಂಡಿರಲಿಲ್ಲ. ಹನುಮನಿಗೆ ತಾನು ಲಕ್ಕಿಯನ್ನು ಮದುವೆಯಾಗಬೇಕೆಂಬ ಹುಚ್ಚು ದಿನದಿನಕ್ಕೆ ಕ್ಷಣಕ್ಷಣಕ್ಕೆ ಪ್ರಬಲವಾಗುತ್ತಾ ಬೆಳೆಯಿತು.

ಗಂಡನು ಸತ್ತಮೇಲೆ ಲಕ್ಕಿಯು ಮನೆಯ ಆಡಳಿತವನ್ನೆಲ್ಲಾ ತನ್ನ ಕೈಗೆ ತೆಗೆದುಕೊಂಡು ಅದನ್ನು ಬಹಳ ದಕ್ಷತೆಯಂದ ನಡೆಸತೊಡಗಿದಳು. ಆಳುಗಳನ್ನಿಟ್ಟುಕೊಂಡು ತಿಮ್ಮನ ಜಮೀನುಗಳನ್ನೆಲ್ಲಾ ತಾನೇ ಸ್ವತಃ ಆರಂಬ ಮಾಡಿಸತೊಡಗಿದಳು. ನೇಗಿಲನ್ನು ಕೆತ್ತುವುದಕ್ಕೆ, ಗುಳವನ್ನು ಬಿಗಿಯುವುದಕ್ಕೆ, ಗಾಡಿಪಟ್ಟೆ ಬಿಡಿಸುವುದಕ್ಕೆ, ಎತ್ತುಗಳಿಗೆ ಲಾಳ ಕಟ್ಟಿಸುವುದಕ್ಕೆ ತಿಂದು ಕೊಬ್ಬಿ ಜೋರಾಗಿದ್ದ ಹೋರಿಗಳನ್ನು ಕೆಡವಿಕೊಂಡು ಮುಗುದಾರ ಬಿಗಿಯುವುದಕ್ಕೆ, ದೊಡ್ಡ ಮೋಟಾರು ಲಾರಿಯ ಶಬ್ದದಂತೆ ಕೊಬ್ಬಿದ ಹಂದಿ ಕಿರೋ ಎಂದು ಕಿರುಚುತ್ತಿರುವಾಗ ಅದನ್ನು ತಿವಿದು ಕೊಲ್ಲುವುದಕ್ಕೆ—ಇವುಗಳಿಗೆಲ್ಲಾ ಲಕ್ಕಿಗೆ ಗಂಡಾಳಿನ ಆವಶ್ಯಕತೆ ಬಹಳವಾಗಿತ್ತು.

ಹನುಮನು ಅವಳ ಮನೆಗೆ ಪ್ರತಿದಿನವೂ ಒಂದಿಲ್ಲೊಂದು ನೆಪದಿಂದ ಹೋಗುತ್ತಲೇ ಇದ್ದನು. ಮತ್ತು ಅವಳ ಎಲ್ಲಾ ಕೆಲಸಗಳಲ್ಲೂ ಅವಳಿಗೆ ಸಹಾಯಕನಾಗುತ್ತಲೇ ಇದ್ದನು.

ಹನುಮನು ನಿತ್ಯ ಲಕ್ಕಿಯ ಮನೆಗೆ ಹೋಗುತ್ತಿರುವುದು, ಅವಳ ಸೆರಗಿನ ಹಿಂದೆ ಓಡಾಡುತ್ತಿರುವುದು ಊರಿನಲ್ಲಿ ಯಾರಿಗೂ ಗೊತ್ತಾಗದೆ ಇರಲಿಲ್ಲ. ಹನುಮನೂ ಕೂಡ 'ದೋಸ್ತಿ' ಯವರೊಂದಿಗೆಲ್ಲಾ ನಾನು ಲಕ್ಕೀನೇ "ನಗ್ನ" ಆಗ್ತೀನಿ ಎಂಬುದಾಗಿ ಹೇಳಿಕೊಳ್ಳುತ್ತಿದ್ದುದರಿಂದ ಊರಿನಲ್ಲಿ ಯಾರ ಬಾಯಲ್ಲಿ ನೋಡಿದರೂ ಅವರಿಬ್ಬರ ಮದುವೆಯ ವಿಚಾರದ ಮಾತೇ ಮಾತಾಗಿತ್ತು. ಹನುಮ ತಂದೆಗೆ ಈ ವಿಚಾರವನ್ನು ಹೇಗೆ ಹೇಳಬೇಕೆಂದು ಯೋಚಿಸುತ್ತಿರುವಲ್ಲಿ ಈ ಸುದ್ದಿ ಕೆಂಗನಿಗೂ ಹನುಮನ ತಾಯಿಗೂ ಮುಟ್ಟಿತು.

ಕೆಂಗನಿಗೆ ತನ್ನ ಮಗ ಹನುಮನು ಲಕ್ಕಿಯನ್ನು ಮದುವೆಯಾಗುವುದು 'ಸುತರಾಂ' ಇಷ್ಟವಿರಲಿಲ್ಲ. ಇದಕ್ಕೆ ಮುಖ್ಯ ಕಾರಣವು ಲಕ್ಕಿಯು ಚೆನ್ನಾಗಿರಲಿಲ್ಲವೆಂದಾಗಲಿ, ಗಟ್ಟಿಗಡತವಾಗಿ ಇರಲಿಲ್ಲವೆಂದಾಗಲಿ ಅಲ್ಲ. ನಮ್ಮೂರಿನಲ್ಲಿ ಲಕ್ಕಿಗೆ ಸಮಾನಳಾದ ಹುಡುಗಿಯೇ ಯಾರೂ ಇರಲಿಲ್ಲವೆಂದೂ ಅವಳು ತಿಮ್ಮನಿಗೆ ದೊರೆತುದು ತಿಮ್ಮನ ಪುಣ್ಯವೆಂದೂ ಹೇಳುವವರ ಸಂಖ್ಯೆಯೇ ಹೆಚ್ಚಾಗಿತ್ತು. ಆದರೆ ಅವಳು ವಿಧವೆಯಾಗಿದ್ದುದರಿಂದ ಅವಳನ್ನು "ಬದುಕಿ ಬಾಳಿ" ದೊಡ್ಡಸ್ತಿಕೆಗೆ ಬರಬೇಕಾದ ತನ್ನ ಮಗನಿಗೆ ಮದುವೆ ಮಾಡಿಕೊಡಲು ಕೆಂಗನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ನಮ್ಮೂರಿನಲ್ಲಿ ಅನೇಕ ಒಕ್ಕಲಿಗರು ವಿಧವಾವಿವಾಹವನ್ನು ಮಾಡಿಕೊಂಡು ತಾವೂ ಸುಖವಾಗಿ ಬದುಕಿ ಹೆಂಡತಿಯರನ್ನೂ ಮಾನವಾಗಿ ಬಾಳಿಸುತ್ತಿರುವುದು ನಿಶ್ಚಯವಾದರೂ ತನ್ನ ಮಗನಿಗೆ ಮೊದಲನೆ ಹೆಂಡತಿಯನ್ನು "ಕನ್ಯಾದಾನ" ಮಾಡಿಸಿಕೊಳ್ಳಬೇಕೇ ಹೊರತು ತಾಲಿಕಟ್ಟಿಸಿಕೊಳ್ಳಕೂಡದೆಂಬುದು ಕೆಂಗನ ಅಭಿಪ್ರಾಯವಾಗಿತ್ತು. ಕೆಂಗನು "ಹೆಂಡ್ತಿ ತೀರ್ಕೊಂಡೋನು ಗಂಡ ತೀರ್ಕೊಂಡೋಳ್ನ ತಾಲಿ ಕಟ್ಕೊಳ್ಳಿ. ನಾನು ಬೇಡ ಅನ್ನೋಕಿಲ್ಲ. ಆದರೆ ನನ್ನ ಮಗನ ಮೊದಲನೆ ಮದ್ವೇಗೆ ಕನ್ಯೇನೇ ಆಗಬೇಕು. ಅದೇ ನಮ್ಮ ಅಪ್ಪ ಅಜ್ಜನ ಕಾಲದಿಂದ ಬಂದ ಪರ್ದಿಷ್ಟ" ಎಂದುಬಿಟ್ಟನು. ಹನುಮನು ಲಕ್ಕಿಯ ಆಸ್ತಿ, ಅವಳ ಎಳೆ ವಯಸ್ಸು, ಅವಳ ಚಂದ, ಅವಳ ಗದ್ದೆ ಹೊಲ, ಎತ್ತು ಹಂದಿ ಕುರಿಗಳ ಜೋರು ಇವುಗಳನ್ನೆಲ್ಲಾ ಹೇಳಿದುದು ವ್ಯರ್ಥವಾಯಿತು. ಕೆಂಗನು "ನೀನು ಲಕ್ಕೀನೆ ತಾಲಿ ಕಟ್ಕೊಳ್ಳೊದಿದ್ರೆ ನೀನು ನನ್ಮಗ್ನೆ ಅಲ್ಲ, ಹೋಗು" ಎಂದುಬಿಟ್ಟನು.

ಕೆಂಗನ ಈ ಅಭಿಪ್ರಾಯದಿಂದ ಹನುಮನ ಆಸೆ ಹುಟ್ಟಿದಲ್ಲಿಯೇ ಸಾಯುವ ಸ್ಥಿತಿಗೆ ಬಂತು. ತಂದೆಯ ಅಭಿಪ್ರಾಯಕ್ಕೆ ವಿರೋಧವಾಗಿ ಲಕ್ಕಿಯನ್ನು ಮದುವೆಯಾಗಲು ಅವನಿಗೆ ಧೈರ್ಯವೂ ಶಕ್ತಿಯೂ ಇರಲಿಲ್ಲವೆಂದಲ್ಲ. ಆದರೆ ಊರಿನಲ್ಲಿ "ಒಂದು ಹುಡುಗಿಗಾಗಿ ಅಪ್ಪ ಅಮ್ಮನ್ನೆಲ್ಲಾ ತೊರೆದ" ಎಂದು ಎನ್ನಿಸಿಕೊಳ್ಳಲು ಅವನಿಗೆ ಇಷ್ಟವಿರಲಿಲ್ಲ. ಊರಿನಲ್ಲಿ ಯುವಕರಿಗೆಲ್ಲಾ ಮೇಲುಪಂಕ್ತಿಯಾಗಿದ್ದ ತಾನು ಹೆಣ್ಣಿನ ಮಂಕಿಗೆ ಬಲಿಬಿದ್ದು ತನ್ನ ಮನೆತನದ ಗೌರವಕ್ಕೂ ತಂದೆಯ ಮನಸ್ಸಿಗೂ ವಿರೋಧವಾದ ಕೆಲಸವನ್ನು ಮಾಡಲು ಅವನು ಹಿಂಜರಿದನು. ಹೀಗಾಗಿ ಈ ಕಡೆ ತಂದೆಯೂ ಬೇಕು, ಆ ಕಡೆ ಲಕ್ಕಿಯೂ ಬೇಕು, ಮನೆತನದ ಗೌರವವೂ ಉಳಿಯಬೇಕು, ಮನಸ್ಸಿನ ಆಸೆಯೂ ಪೂರೈಸಬೇಕು ಎಂಬ ಸ್ಥಿತಿಯಲ್ಲಿ ಅವನ ಮನಸ್ಸು ಹಿಂದಕ್ಕೂ ಮುಂದಕ್ಕೂ ಓಲಾಡುತ್ತಿತ್ತು.

ಹನುಮನ ಈ ಸ್ಥಿತಿಯು ದೊಡ್ಡಬೋರನ ಕಣ್ಣಿಗೆ ಬೀಳದಿರಲಿಲ್ಲ. ಅದರ ಕಾರಣವೂ ಅವನಿಗೆ ತಿಳಿಯದಿರಲಿಲ್ಲ. ಹುಡುಗನಾದ ಹನುಮ ಲಕ್ಕಿಯನ್ನು ತಾಲಿಕಟ್ಟಿಕೊಳ್ಳುವುದರಲ್ಲಿ ಅವನಿಗೆ ಏನೂ ದೋಷ ತೋರಲಿಲ್ಲ. ಅಲ್ಲದೆ ಯಾವ ಗಂಡಸಿನ ಜೀವನವೂ ಒಂದು ಮದುವೆಯಿಂದಲೇ ಪೂರ್ತಿಯಾಗುವುದಿಲ್ಲವೆಂಬುದೂ ಒಂದರಲ್ಲಿ ತಪ್ಪಿದುದನ್ನು ಮತ್ತೊಂದರಲ್ಲಿ ಸರಿಪಡಿಸಿಕೊಳ್ಳಬಹುದೆಂಬುದೂ ಅವನ ಅಭಿಪ್ರಾಯವಾಗಿತ್ತು. ಅವನೂ ಹನುಮನೂ ಎರಡು-ಮೂರು ದಿವಸ ಒಟ್ಟಿಗೆ ಗದ್ದೆಬದುವಿನಲ್ಲಿ ಹುಲ್ಲು ಕುಯ್ಯುತ್ತಾ ಏನೇನೋ 'ಮಸಲತ್' ಮಾಡಿದರು. ಹನುಮನು ಪದೇ ಪದೇ ಲಕ್ಕಿಯನ್ನು ನೋಡುತ್ತಿದ್ದುದರಿಂದ ಈ ಮಸಲತ್ತಿಗೆ ಅವಳೂ ಸೇರಿದ್ದಳೆಂಬುದರಲ್ಲಿ ಸಂದೇಹವಿರಲಿಲ್ಲ. ನಾಲ್ಕನೆ ದಿವಸ ದೊಡ್ಡಬೋರನು ತಾನು ಲಕ್ಕಿಯನ್ನು ಮದುವೆಯಾಗುವುದಾಗಿ ಊರಿನಲ್ಲಿ ಪ್ರಕಟಿಸಿ ಜನರಿಗೆಲ್ಲಾ ಆಶ್ಚರ್ಯವನ್ನೂ ಗಾಬರಿಯನ್ನೂ ಉಂಟುಮಾಡಿದನು.

ದೊಡ್ಡಬೋರನ ಮದುವೆ ವಿಚಾರ ಕೇಳಿ ನಮ್ಮೂರಿನಲ್ಲಿ ಕೋಲಾಹಲವೇ ಎದ್ದಿತು. ತೊಂಬತ್ತು ವಯಸ್ಸಿನ ಮುದುಕ ನಾಲ್ಕನೆ ಹೆಂಡತಿ ಹದಿನೆಂಟು ವರುಷದ ಹುಡುಗಿಯನ್ನು ಮದುವೆಯಾಗುವುದೆಂದರೆ ಎಂತಹ ಹಿಂದೆಬಿದ್ದ ಸಮಾಜದಲ್ಲಿಯೂ ಅದು ಕೋಲಾಹಲವನ್ನು ಎಬ್ಬಿಸತಕ್ಕ ಸಮಾಚಾರವೇ. ದೊಡ್ಡಬೋರನ ಈ ಹೊಸ ಹುರುಪನ್ನೂ ಯೌವನದ ಉತ್ಸಾಹವನ್ನು ಕಂಡು ನಮ್ಮೂರಿನವರಿಗೆಲ್ಲಾ ಬಹಳ ವಿನೋದವುಂಟಾಯಿತು. ಜನರೆಲ್ಲ ಕೆಂಗನನ್ನು "ನಿಮ್ಮಪ್ಪನಿಗೆ ಮತ್ತೊಂದು ಯವ್ವನ ಬಂದಿದೆ. ಮಮ್ಮಗನಿಗೆ ಗೊತ್ತಾಗಿದ್ದ ಹೆಣ್ಣನ್ನು ತಾನೇ ಮದುವೆ

ಆಗ್ತಾನೆ. ಮೂರು ಹೆಂಡತಿ ತಿಂದೋನು ನಾಲ್ಕನೆ ಹೆಂಡತಿ ತಿನ್ನೋದು ಆಶ್ಚರ್ಯವಲ್ಲ. ಸೊಸೆಯಾಗಿ ಬಂದಾಗ ಬೇಡ ಅಂದೆ. ಈಗ ತಾಯಿಯಾಗಿ ಬರ್ತಾಳೆ. ಏನ್ಮಾಡ್ತೀಯ?" ಎಂದು ಮುಂತಾಗಿ ಹಾಸ್ಯಮಾಡತೊಡಗಿದರು. ಕೆಂಗನು ದೊಡ್ಡಬೋರನೊಂದಿಗೆ "ಅಪ್ಪಾ, ಏನು ನಿನ್ನ ಹುಚ್ಚು. ಊರೆಲ್ಲಾ ನಕ್ಕು ಕುಣೀತಿದೆ. ನಿನ್ನ ಉಪಚಾರಕ್ಕೆ ನನ್ನ ಹೆಂಡ್ತಿ ಇಲ್ವೆ. ಈ ಮುಪ್ಪಿನಲ್ಲಿ ನಾಲ್ಕನೆ ಹೆಂಡತೀನ ಯಾಕೆ ತಾಲಿಕಟ್ಕೊತೀಯ? ನಿನಗೆ ವಯಸ್ಸು ತೊಂಭತ್ತಕ್ಕೆ ಮೀರಿದೆ. ಆ ಹದಿನೆಂಟು ವರ್ಷದ ಹುಡುಗಿ ನಿನ್ನ ಮಾನವಾಗಿ ಬಾಳಿಸ್ತಾಳ? ಖಂಡಿತ ಬೇಡ" ಎಂದು ಹೇಳಿದನು. ದೊಡ್ಡಬೋರನು "ಏ ಕೆಂಗಾ, ನನ್ನ ಮುಪ್ಪೂ ಒಂದೆ ನಿನ್ನ ಯೌವನಾನೂ ಒಂದೆ, ಅದರ ಇಚಾರ ಕಟ್ಕೊಂಡು ನಿನ್ಗೇನು. ಲಕ್ಕಿ ಒಳ್ಳೆ ಹುಡ್ಗಿ. ತಿಮ್ಮನ ಹತ್ತು ಸಾವಿರ ಆಸ್ತಿ, ನನಗೆ ದಕ್ತದೆ. ನಿನಗೆ ದಕ್ತದೆ. ಆ ಹುಡ್ಗೀನ ನಮ್ಮ ಮನೆಗೆ ಸೇರಿಸ್ಕೊಬೇಕು. ಸೊಸೆ ಮಾಡ್ಕೊಳ್ಳೋಕೆ ನೀನು ಅವಕಾಶ ಕೊಡಲಿಲ್ಲ. ಹೆಂಡ್ತೀನೆ ಮಾಡ್ಕೊತೀನಿ. ಹೇಗಾದರೂ ಆ ಹುಡುಗೀನೂ ಅವಳ ಆಸ್ತೀನೂ ನಮ್ಮ ಮನೆಗೆ ಸೇರಬೇಕು. ಇದೇ ನನ್ನ ಕಡೆ ಮದುವೆ. ಮುದುಕನ ಮದುವೆ ಅಂತ ಉದಾಸೀನ ಮಾಡಬೇಡ. ನಾನು ಮುದುಕನಾದರೂ ಲಕ್ಕಿ ಹುಡ್ಗಿಯಾಗವ್ಳೆ. ಎಲ್ಲಾ ಏರ್ಪಾಡೂ ಒಳ್ಳೆ ಜಬರದಸ್ತಿಯಿಂದ ಮಾಡು. ನಿನ್ಗೆ ಹತ್ತುಸಾವಿರ ರೂಪಾಯಿ ಆಸ್ತಿ ದಕ್ತದೆ" ಎಂದು ಹೇಳಿದನು.

ಮುದುಕನ ಮನೋಭಾವವನ್ನು ಬದಲಾಯಿಸಬಹುದೆಂಬ ನಂಬಿಕೆಯು ಕೆಂಗನಿಗೆ ಪೂರ್ಣವಾಗಿ ನಾಶವಾದ ನಂತರ ಅವನು ಇದ್ದದ್ದರಲ್ಲಿ ಸಮಾಧಾನಪಟ್ಟುಕೊಂಡನು. ಸದ್ಯ ತನ್ನ ಮಗ ಲಕ್ಕಿಯನ್ನು ಮದುವೆಯಾಗುವುದು ತಪ್ಪಿತಲ್ಲಾ ಎಂಬುದೇ ಅವನ ಸಮಾಧಾನವಾಗಿತ್ತು. ಹತ್ತು ಸಾವಿರ ರೂಪಾಯಿನ ಆಸ್ತಿ ಕೈಗೆ ಸೇರುವುದು ಬಹಳ ಸಂತೋಷದ ಸಮಾಚಾರವಾಗಿತ್ತು. ಮುದಿ ಬೋರನಿಗೆ ಇದೇ ಕೊನೆಯ ಮದುವೆ ಎಂಬುದು ಅವನಿಗೂ ಚೆನ್ನಾಗಿ ಮಂದಟ್ಟಾಯಿತು. ಲಕ್ಕಿಯು ತನ್ನ ಸೊಸೆಯಾಗದೆ ತನ್ನ ಮನೆತನಕ್ಕೆ ಹತ್ತು ಸಾವಿರ ರೂಪಾಯಿನ ಆಸ್ತಿ ಸೇರಿದುದು ಇದ್ದದ್ದರಲ್ಲಿ ಸಮವಾಧಾನದ ಸಂಗತಿಯಾಗಿತ್ತು.

ಕೆಂಗನು ದೊಡ್ಡಬೋರನ ಮದುವೆಗೆ ಚೆನ್ನಾದ ಏರ್ಪಾಡುಗಳನ್ನೇ ಮಾಡಿದನು. ಪದ್ಧತಿಯಂತೆ ಸುತ್ತಲಿನ ಹನ್ನೆರಡು ಹಳ್ಳಿಗಳಿಗೂ ಊಟದ ಚೀಟಿಗಳು ರವಾನೆಯಾದುವು. ಹಾಲು ಮೊಸರು ಹಿಟ್ಟು ಹಪ್ಪಳ ಇವುಗಳೆಲ್ಲಾ ಸಾವಿರ ಜನಕ್ಕೆ ಆಗುವಷ್ಟು ಒದಗಿಸಲ್ಪಟ್ಟವು. ಹೂವು, ಹಾರ, ವೀಳೆಯದೆಲೆ ಇವುಗಳು ಲೆಕ್ಕವಿಲ್ಲದಷ್ಟು ಬಂದು ಬಿದ್ದವು. ಧಾರೆಯ ದಿನವೂ ಬಂದಿತು. ನಮ್ಮೂರ

ಜೋಯಿಸರು ತಮ್ಮ ಮಂಗಳದ್ರವ್ಯದೊಂದಿಗೆ ಸಿದ್ಧವಾಗಿ ಹನುಮಂತರಾಯನ ಗುಡಿಯ ಹತ್ತಿರಕ್ಕೆ ಬಂದರು.

ಆ ದಿನ ಮುದುಕನ ಮದುವೆಯನ್ನು ನೋಡಬೇಕೆಂದು ಹಳ್ಳಿಯವರೆಲ್ಲಾ ಗುಂಪುಗುಂಪಾಗಿ ನೆರೆದಿದ್ದರು. ಕೆಂಗ ಎದುರಿಗೆ ಇದ್ದು ವೀಳೆಯದೆಲೆ ಕುಯ್ಸಿಕೊಂಡು ಬರಲು ನಮ್ಮೂರ ಕುಂಟಯ್ಯನವರ ಎಲೆತೋಟಕ್ಕೆ ಹೋಗಿದ್ದನು. ಲಕ್ಕಿಯು ಹೊಸ ಸೀರೆಯನ್ನು ಉಟ್ಟುಕೊಂಡು ಸಿದ್ಧವಾಗಿದ್ದಳು. ಜೋಯಿಸರು ಮುಹೂರ್ತವು ಬಂದ ಕೂಡಲೆ "ಸುಮುಹೂರ್ತಾ ಸಾವಧಾನ ಸುಲಗ್ನಾ ಸಾವಧಾನ" ಎಂದು ಹೇಳಿ, "ಎಲ್ಲಿ, ಬೇಗ ಎಲ್ಲಾ ಸಿದ್ಧವಾಗಲಿ. ಮುಹೂರ್ತದಲ್ಲಿ ಲಗ್ನ ನಡೆದುಹೋಗಲಿ. ಉಳಿದದ್ದು ನಿಧಾನವಾಗಿ ಆದರೂ ಚಿಂತೆಯಿಲ್ಲ. ಬೋರಯ್ಯ, ಎಲ್ಲಿ ಬಾ. ಲಕ್ಕೀ ನೀನೂ ಬಾ, ನಾಚಿಕೆ ಬೇಡ" ಎಂದರು. ಬೋರನು ಹನುಮನ ಕೈಯನ್ನೂ ಲಕ್ಕಿಯ ಕೈಯನ್ನೂ ಹಿಡಿದುಕೊಂಡು ಮುಂದಕ್ಕೆ ಬಂದು ಜೋಯಿಸನ ಎದುರಿಗೆ ಅವರಿಬ್ಬರ ಕೈಗಳನ್ನೂ ಸೇರಿಸಿ ಹಿಡಿದನು. ಜೋಯಿಸನು "ಏನು ಬೋರಯ್ಯ ಲಕ್ಕಿ ವಧು, ನೀನು ವರ. ಹನುಮನಲ್ಲ, ನೀನೇ ಇಲ್ಲಿ ಬರಬೇಕು, ಬಾ" ಎಂದನು, ಬೋರಯ್ಯನು "ಏ ಜೋಯಿಸಯ್ಯ ನಾ ನಿಂತರೇನು ಹನುಮ ನಿಂತರೇನು? ನಿನ್ನ ಮಂತ್ರ ನೀನು ಪಟಿಕ್ಸು. ನಿನ್ನ ಮಿರಾಸೆ ನಿನ್ಗೆ ಬಿದ್ರೆ ಸರಿಯೋ ಇಲ್ವೋ. ಆ ಹುಡ್ಗೀನ ನನ್ನಂತ ಮುದಕ ಮದ್ವೆ ಆಗೋಕೆ ನಾವೇನು ಬ್ರಾಂಮುಣರಾಗಿಬಿಟ್ಟೆವಾ. ಬೇಗ ಮಂತ್ರ ಹೇಳು" ಎಂದನು. ನೆರೆದಿದ್ದ ಜನಕ್ಕೆ ಏನು ಅಂತ ತಿಳಿಯುವುದಕ್ಕೆ ಮುಂಚೆ ಹನುಮನಿಗೂ ಲಕ್ಕಿಗೂ ಮದುವೆಯಾಗಿಹೋಯಿತು. ಬಂದಿದ್ದವರೆಲ್ಲಾ ಧಾರೆ ನೀರನ್ನು ಬಿಟ್ಟು ಆಶೀರ್ವಾದ ಮಾಡಿದರು.

ಎರಡು-ಮೂರು ಗಂಟೆಗಳೊಳಗಾಗಿ ಕೆಂಗ ವೀಳೆಯದೆಲೆ ಕುಯ್ಸಿಕೊಂಡು ಬಂದನು. ನಡೆದ ವಿಚಾರಗಳನ್ನೆಲ್ಲಾ ಕೇಳಿ ಅವನಿಗೆ ಮೊದಲು ಆಶ್ಚರ್ಯವಾಯಿತು. ಲಕ್ಕಿಯೂ ಹನುಮನೂ ಒಂದು ದಣ್ಣಿಕ್ಕಿದರು. ದೊಡ್ಡಬೋರನು "ಏ ಕೆಂಗಾ, ನನ್ನ್ಮದ್ವೆ ಬೇಡ ಬೇಡ ಅಂತ ಹೊಡ್ಕೊಂಡೆ. ನಿನ್ಮಾತ್ನೆ ನಡ್ಸಿವ್ನಿ. ಲಕ್ಷ್ಮಿ ಬೇಡ ಬೇಡ ಅಂದ್ರೂ ಒದ್ಕೊಂಡು ಬರ್ತಾಳೆ. ಸೊಸೆ ಮನೆಗೆ ಕರ್ಕೊ" ಎಂದನು. ಕೆಂಗನಿಗೂ ಸೊಸೆಯನ್ನು ಕರೆದುಕೊಳ್ಳುವ ಹೊರತು ಬೇರೆ ಉಪಾಯ ತೋರಲಿಲ್ಲ. ಅವನು ಬೋರಯ್ಯನಿಗೆ "ಆ ಹುಡುಗರ ಜತೆ ಸೇರಿ ನೀವೂ ಹುಡುಗರಾದಿರಿ." ಎಂದು ಹೇಳಿ ಮಗನಿಗೂ ಸೊಸೆಗೂ ಆಶೀರ್ವಾದ ಮಾಡಿದನು.

# ಯುದ್ಧದ ಕಾವು

“ಗೆಳೆಯರೇ ಎಲ್ಲರೂ ಬನ್ನಿ ಸಭೆಗೆ. ಇದು ಪದಾರ್ಥಗಳ ತಯಾರಿ ಮೀಟಿಂಗ್ (Production meeting)”

ಗುಮಾಸ್ತನು ಗುಡ್ಡದ ಬುಡದ ಕಿರಿದಾದ ದಾರಿಯಲ್ಲಿ, ಕೈಯಿನ ದೀಪವನ್ನು ಆಚೆಗೂ ಈಚೆಗೂ ಅಲ್ಲಾಡಿಸುತ್ತಾ ಪ್ರತಿಯೊಂದು ಗುಹೆಗೂ ಕೇಳುವಂತೆ ಕಿರುದನಿಯಲ್ಲಿ ಮೇಲಿನಂತೆ ಕೂಗುತ್ತಿದ್ದನು.

ಪಾಕಶಾಲೆಯಲ್ಲಿ ಕಬ್ಬಿಣದ ಬಟ್ಟಲುಗಳನ್ನು ತೊಳೆಯುತ್ತಿದ್ದ ಅಡಿಗೆಯವನ ಕಿವಿಗೆ ಧ್ವನಿಯು ಕೇಳಿಸಿತು. ಅವನು ಒಲೆಯ ಮೇಲಿದ್ದ ಗೂಡಿನಲ್ಲಿ, ಸಣ್ಣ ಸೇತುವೆಯ ಹಾಗೆ ಕಾಣುವಂತೆ, ಬಟ್ಟಲುಗಳನ್ನೆಲ್ಲಾ ಒಂದರ ಮಗ್ಗುಲಲ್ಲಿ ಒಂದನ್ನು ಏರಿಸಿದನು. ಅವುಗಳ ಪೈಕಿ ಒಂದು ಬಟ್ಟಲು ಸ್ವಲ್ಪ ಸರಿಯಾಗಿಲ್ಲದಂತೆ ತೋರಿದುದರಿಂದ ಅದನ್ನು ಕೈಗೆ ತೆಗೆದುಕೊಂಡು ಮತ್ತೆ ಸರಿಯಾಗಿ ಇಟ್ಟನು. ಕಲಾವಸ್ತುಗಳನ್ನು ಸಂಗ್ರಹಿಸುವವನು ಕಲಾಕೃತಿಯನ್ನು ದೃಷ್ಟಿಯಿಟ್ಟು ನೋಡುವಂತೆ, ಅವನು ಸ್ವಲ್ಪ ಹಿಂದಕ್ಕೆ ನಿಂತುಕೊಂಡು ತನ್ನ ಬಟ್ಟಲುಗಳ ಸೇತುವೆಯನ್ನು ನೋಡಿದನು. ಅವುಗಳಲ್ಲಿ ಯಾವ ಕೊರತೆಯೂ ತೋರದುದರಿಂದ ಪೂರ್ಣವಾಗಿ ಸಮಾಧಾನವನ್ನು ಹೊಂದಿ ಕೈಯನ್ನು ಚೆನ್ನಾಗಿ ಬಟ್ಟೆಗೆ ತಿಕ್ಕಿಕೊಂಡನು.

ಗುಮಾಸ್ತನು ಮತ್ತೆ ಅಡಿಗೆಯ ಮನೆಯ ಹತ್ತಿರಕ್ಕೆ ಬಂದು ಬಗ್ಗಿ “ಗೆಳೆಯ ಅಡಿಗೆಯವನೇ ಸಭೆಗೆ ಬಾ” ಎಂದು ತನ್ನ ದಪ್ಪದನಿಯಲ್ಲಿ ಕೂಗಿದನು.

“ಬರುತ್ತಿದ್ದೇನೆ ಬಂದೆ ಬಂದೆ”

ಅಡಿಗೆಯವನು ಹೀಗೆ ಹೇಳಿಕೊಂಡು, ಇಳಿಜಾರಾದ ಅಡಿಗೆ ಮನೆಯ ನೆಲದ ಮೇಲೆ ಒಂದು ಬಿಂದಿಗೆ ನೀರನ್ನು ಸುರಿದನು. ಅದು ಒಣಗಿದ್ದ ಹಳದಿ ಬಣ್ಣದ ಚರಂಡಿಗೆ ಹರಿದು ಹೋಯಿತು. ಅನಂತರ ಅವನು “ಸಭೆ, ಯಾವ ವಿಷಯಕ್ಕೆ ಸಭೆ? ನನಗಂತೂ ಸಭೆಯಲ್ಲಿ ಮಾತನಾಡಲು ತಿಳಿಯುವುದಿಲ್ಲ, ಆದುದರಿಂದ ಹೋಗಿ ತಾನೆ ಏನು ಪ್ರಯೋಜನ?” ಎಂದು ಗೊಣಗುಟ್ಟಿದನು.

ಪ್ರತಿಯೊಂದು ಸಭೆಯಲ್ಲ ಯಾವ ಚರ್ಚೆಯನ್ನಾದರೂ ಮಾಡಿಕೊಳ್ಳಲಿ, ಅಡಿಗೆಯವನು ಮಾತನಾಡದೆ ಕೆನ್ನೆಯ ಮೇಲೆ ಕೈಯನ್ನು ಇಟ್ಟುಕೊಂಡು ಮೇಜದ ಕೊನೆಯಲ್ಲಿ ಕುಳಿತಿರುತ್ತಿದ್ದನು.

ಅಧ್ಯಕ್ಷನು "ನಿನ್ನ ಅಭಿಪ್ರಾಯವೇನು?" ಎಂದು ಬಲಾತ್ಕರಿಸಿದಾಗ ಅವನು ವಿನಯದಿಂದ ತಲೆಬಾಗಿ "ನನಗೆ ಅಭಿಪ್ರಾಯವಿಲ್ಲ"ವೆನ್ನುತ್ತಿದ್ದನು.

ಅಡಿಗೆ ಮನೆಯನ್ನು ಮತ್ತೊಂದು ಸಲ ನೋಡಿ, ಅವನು ಈಚೆಗೆ ಬಂದನು. ಕೂಡಲೇ ಮರದ ಸೌಟು, ಈಳಿಗೆಮಣೆಯ ಮೇಲೆ ಇದ್ದುದು ಅವನಿಗೆ ಜ್ಞಾಪಕಕ್ಕೆ ಬಂದಿತು. ಹಿಂದಕ್ಕೆ ಬಂದು ಸೌಟನ್ನು ಅದರ ತೊಟ್ಟಿಯಲ್ಲಿ ಇಟ್ಟು, ಸೊಂಟಕ್ಕೆ ಕಟ್ಟಿಕೊಂಡಿದ್ದ ಬಟ್ಟೆಯನ್ನು ಬಿಚ್ಚಿ ಒದರಿ ಹೆಗಲಿನ ಮೇಲೆ ಹಾಕಿಕೊಂಡು ರಾಷ್ಟ್ರೀಯ ರಕ್ಷಣೆಯ ಕೊಠಡಿಗೆ (National Salvation Room) ಬಂದನು.

ಗುಡ್ಡಗಳ ಮೇಲೆ ಆಕಾಶದಲ್ಲಿ ಮಿನುಗುತ್ತಿದ್ದ ನಕ್ಷತ್ರಗಳಿಂದ, ಅಂತರಿಕ್ಷವು ಚಿನ್ನದ ಧೂಳನ್ನು ಚುಮುಕಿಸಿದ ಕರಿಯ ಕಾಗದದಂತೆ ಕಾಣುತ್ತಿದ್ದಿತು. ವಸಂತಕಾಲದ ಸಂಧ್ಯಾಕಾಲದ ತಂಗಾಳಿಯು ಗುಡ್ಡಗಳ ಕೋಡುಗಲ್ಲುಗಳ ಮೇಲೆ ಬೀಸಿ ಅವುಗಳ ತಲದಲ್ಲಿದ್ದ ಮೈದಾನದ ಮೇಲೆ ತೇಲಿಕೊಂಡು ಹೋಗುತ್ತಿದ್ದಿತು.

ರಾಷ್ಟ್ರೀಯ ರಕ್ಷಣೆಯ ಕೊಠಡಿಯಲ್ಲಿ ಚಚ್ಚೌಕವಾಗಿದ್ದ ಮೇಜಿನ ಮೇಲೆ ಒಂದು ಲಾಂದ್ರವೂ, ಅದರ ಸುತ್ತು ಸುಮಾರು ೨೦ ಜನರಿಗಿಂತ ಹೆಚ್ಚು ಕೂಲಿಗಳು, ಅಧ್ಯಕ್ಷನಲ್ಲೇ ನೆಟ್ಟ ಮನಸ್ಸುಳ್ಳವರಾಗಿ ಕುಳಿತಿದ್ದರು. ಅಧ್ಯಕ್ಷನೂ ಮೇಜದ ತಗ್ಗಾದ ಕೊನೆಯಲ್ಲಿ ಇದ್ದನು. ಈ ತಯಾರಿ ಚಳುವಳಿಯ ಉದ್ದೇಶ ಆರ್ಥಿಕ ಕಷ್ಟವನ್ನು ಎದುರಿಸುವುದು; ಜಪಾನಿನ ಮೇಲಿನ ಯುದ್ಧವನ್ನು ಬಲಪಡಿಸುವುದು; ಜನರ ಕಷ್ಟವನ್ನು ಕಡಿಮೆ ಮಾಡುವುದು; ಎಂಬುದಾಗಿ ಅಧ್ಯಕ್ಷನು ವಿವರಿಸಿ, ಪ್ರತಿಯೊಬ್ಬರೂ ಎಷ್ಟು ಎಕರೆ ಜಮೀನನ್ನು ಸಾಗುಮಾಡಬೇಕೆಂದು ನಿರ್ಣಯಸುವದಕ್ಕಾಗಿ ನೆರೆದಿದ್ದವರೆಲ್ಲರ ಅಭಿಪ್ರಾಯವನ್ನು ಕೇಳಿದನು.

"ನಾವು ಈಗ ೯೬ ಮೌ (೬ ಮೌಗೆ (mow) ೧ ಎಕ್ರೆ) ಜಮೀನನ್ನು ಸಾಗುವಳಿ ಮಾಡುತ್ತಿದ್ದೇವೆ. ಅಂದರೆ ಒಬ್ಬೊಬ್ಬನಿಗೆ ನಾಲ್ಕು ಮೌ ಆಯಿತು. ತಯಾರಿಯ ಮುಖ್ಯಸಭೆಯವರು ನಮಗೆ ಆ ರೀತಿ ನಿಯಮಿಸಿದ್ದರು."

ಸಿಯೊ ಕ್ವಿ ಎಂಬ ಹೆಸರಿನ ಹುಡುಗ; (ಅವನಿಗೆ ಸಣ್ಣದೆಯ್ವ ಎಂದು ಅಡ್ಡಹೆಸರಿದ್ದಿತು ) ಅವನು ಲೇಖನಿಯನ್ನು ಕೈ ಸುತ್ತಾ ತಿರುಗಿಸುತ್ತಾ "ನಾನು ೫ ಮೌ ಸಾಗುವಳಿ ಮಾಡಬಲ್ಲೆ" ಎಂದನು.

"ಹೌದು. ನಾವೆಲ್ಲಾ ಇನ್ನೂ ಸ್ವಲ್ಪ ಹೆಚ್ಚಾಗಿ ಸಾಗುಮಾಡಬಹುದು?" ಎಂಬುದಾಗಿ ಎಲ್ಲರೂ ಹೇಳಿದರು.

ಅಧ್ಯಕ್ಷನು 'ಸಣ್ಣ ದೆಯ್ವ'ದ ಕಡೆ ನೋಡಿ ಅವನ ಬಲವನ್ನು ಗುಣಿಸಿ "ನಿನಗೆ ೫ ಮೌ ಆಗುವುದಿಲ್ಲ" ಎಂದನು.

"ಆಗುತ್ತೆ. ನಾನು ಊರಿನಲ್ಲಿದ್ದಾಗ ಮಾಡುತ್ತಿದ್ದೆ"

ಅನಂತರ ಅಧ್ಯಕ್ಷನು "ನಾವು ಹಾಗೆ ಒಪ್ಪುವುದಾದರೆ ೯೬ ಕ್ಕೆ ಬದಲು ೧೨೦ ಮೌ ಸಾಗುವಳಿ ಮಾಡಬಹುದು. ನಿಮ್ಮ ಅಭಿಪ್ರಾಯವೇನು?" ಎಂದು ಹೇಳಿ ಎಲ್ಲರ ಅಭಿಪ್ರಾಯವನ್ನೂ ನಿರೀಕ್ಷಿಸುತ್ತಾ ಕುಳಿತನು.

ಗೆಳೆಯ ಲಿ (Li) ಮೊದಲನೆಯವನಾಗಿ "ನಾನು ಒಪ್ಪುತ್ತೇನೆ" ಎಂದು ಕೂಗಿದನು.

ಅನಂತರ ಎಲ್ಲರೂ ಒಂದೇ ಧ್ವನಿಯಲ್ಲಿ "ಒಪ್ಪುತ್ತೇವೆ" ಎಂದು ಕೂಗಿದರು.

ಗುಮಾಸ್ತನು ತಲೆ ಬಗ್ಗಿಸಿಕೊಂಡು ವಿರಾಮವಿಲ್ಲದೆ ಬರೆಯುತ್ತಿದ್ದನು. ಅಡಿಗೆಯವನ ಕಣ್ಣುಗಳು ಯಾವುದನ್ನೂ ದೂರದಲ್ಲಿ ನೋಡುತ್ತಿರುವಂತೆ ತೋರುತ್ತಿದ್ದುವು. ಅವನು ಮಾತನಾಡದೆ ಕುಳಿತಿದ್ದನು.

ಅಧ್ಯಕ್ಷನು, ಅಡಿಗೆಯವನ ತುಂಬಿ ಬೆಳೆದಿದ್ದ ಒರಟಾದ ಗಡ್ಡವನ್ನು ನೋಡುತ್ತಾ "ಗೆಳೆಯ ಅಡಿಗೆಯವನೇ ನಾಳೆಯಿಂದಲೇ ಪ್ರಾರಂಭಿಸಿ ಕಾಡನ್ನು ಉಳಬೇಕು" ಎಂದನು.

ಅಡಿಗೆಯವನು ಎದ್ದು ನಿಂತು ಬಾಯಿನ ಕೊನೆಯಲ್ಲಿ ಚೂಪಾಗಿ ನಗುತ್ತಾ "ನನಗೆ ಅಭಿಪ್ರಾಯವಿಲ್ಲ" ಎಂದು ಹೇಳಿ ತಲೆ ಬಗ್ಗಿಸಿದನು.

ಅವನ ಉತ್ತರವನ್ನು ಕೇಳಿ ಕೊಠಡಿ ಪೂರ್ಣವಾಗಿ ನಗುವಿನಿಂದ ತುಂಬಿಹೋಯಿತು. ಒಂದು ಸಲ ನಗು ಪ್ರಾರಂಭವಾದುದೇ ತಡ, ಅನಂತರ ನಿಲ್ಲಿಸುವುದೇ ಎಲ್ಲರಿಗೂ ಕಷ್ಟವಾಯಿತು.

"ಜಪಾನಿನ ಮೇಲಿನ ಈ ಯುದ್ಧದಲ್ಲಿ ನಾವು ಕಾಡನ್ನೆಲ್ಲಾ ಉತ್ತು ಹೆಚ್ಚು ಹೆಚ್ಚಾಗಿ ಬೆಳೆಯನ್ನು ಬೆಳೆಯಬೇಕು. ನೀನು ಕೂಡ ಕಾಡನ್ನು ಉಳಬೇಕಾಗುತ್ತದೆ"

ಅಡಿಗೆಯವನು "ನಾನು.... ನನಗೆ ಕೆಲಸ ಈಗಲೆ ಬಹಳ ಹೆಚ್ಚು. ೨೦-೩೦ ಜನರ ಅಡಿಗೆ ಊಟ ವ್ಯವಸ್ಥೆ ಮಾಡಬೇಕಾಗಿದೆ. ಅಲ್ಲದೆ ನೀರು ಬೇರೆ ಹೊರಬೇಕು. ಶಿ..... ಶಿ….." ಎಂದನು.

"ಹಾಗಾದರೆ ಕಾಡನ್ನು ಸಾಗುವಳಿ ಮಾಡುವ ಕೆಲಸ ನೀನು ಸ್ವಲ್ಪವೂ ಮಾಡುದಿಲ್ಲವೆಂದು ಹೇಳುತ್ತೀಯ?"

“ನನಗೆ ಹೊತ್ತಿಲ್ಲ. ೨೦-೩೦ ಜನರ ಅಡಿಗೆ ಊಟದ ವ್ಯವಸ್ಥೆ ಮಾಡಬೇಕು”

ಈ ಮಧ್ಯೆ ಅಡಿಗೆಯವನ ಕೆಲಸ ಅಡಿಗೆ ಮಾಡುವುದು ಎಂದು ಅವನು ಯೋಚಿಸುತ್ತಿದ್ದನು. “ಅಡಿಗೆಯವನು ವ್ಯವಸಾಯಗಾರನಲ್ಲ. ಆದುದರಿಂದ ಅವನು ಜಮೀನನ್ನು ಯಾಕೆ ಸಾಗುವಳಿ ಮಾಡಬೇಕು? ನಾನು ಜಮೀನನ್ನು ಯಾಕೆ ಸಾಗುವಳಿ ಮಾಡಬೇಕು? ಇದು ಅಸಂಬದ್ಧವಲ್ಲವೆ? ನಾನು ವ್ಯವಸಾಯ ಮಾಡುವುದಿಲ್ಲ. ರೈತರು ವ್ಯವಸಾಯ ಮಾಡಲಿ. ಇಲ್ಲಿಗೆ ನಾನು ಬೇರೆ ಊರಿನಿಂದ ಬಂದೆ. ಮೊದಲಿನ ನಿಯಮದಂತೆ ನಾನು ಅಡಿಗೆ ಮಾಡಿ ನೀರು ಹೊರುವುದು ಮಾತ್ರ ನನ್ನ ಪಾಲಿನದು.”

ಅಧ್ಯಕ್ಷನು ಈ ಕಾಡನ್ನು ನಾಡು ಮಾಡುವ ತಯಾರಿಯ ಚಳುವಳಿಯನ್ನು (Reclamation work) ಅವನಿಗೆ ವಿವರಿಸಿ ಪ್ರತಿಯೊಬ್ಬರೂ ಸ್ವಲ್ಪ ಭಾಗವಾದರೂ ಕಾಡನ್ನು ಸಾಗುವಳಿ ಮಾಡಬೇಕೆಂದು ಹೇಳಿದನು. ಅಡಿಗೆಯವನು ಒಪ್ಪಲಿಲ್ಲ.

“ನನಗೆ ಹೊತ್ತಿಲ್ಲ. ಕೈತುಂಬ ಕೆಲಸ, ಅಡಿಗೆ ಮಾಡಬೇಕು” ಎಂದನು.

**(೨)**

ಉತ್ತರ ದಿಕ್ಕಿನ ಶೆನ್‌ಸಿ ಪ್ರದೇಶದ ಗುಡ್ಡಗಳು ವೃದ್ಧರಂತೆ ವಿಚಿತ್ರವಾಗಿವೆ. ವೃದ್ಧನ ಜೀರ್ಣವಾದ ಬೂದುಬಣ್ಣದ ನಿಲುವಂಗಿಯಂತೆ, ಆ ಗುಡ್ಡಗಳು ಪೊದೆಗಳಿಂದಲೂ ದಿಕ್ಕಾಪಾಲಾಗಿ ಬೆಳೆದ ಹುಲ್ಲುಗಳಿಂದಲೂ ತುಂಬಿವೆ. ಬಯಲಿನಲ್ಲಿ ಕಾಯಿ-ಪಲ್ಯಗಳು ಪೂರ್ಣವಾಗಿ ಬೆಳೆದಿವೆ. ಗುಡ್ಡದ ಪಾದದಲ್ಲಿ ಯೆನ್ ನದಿಯು ಅವಿರಳವಾಗಿ ಜುಳುಜುಳು ಶಬ್ದಮಾಡುತ್ತಾ ಹರಿಯುತ್ತಿದೆ.

ಸಿಯೊ ಕ್ವಿ (ಸಣ್ಣ ದೆವ್ವ) ಯು ಗುಡ್ಡದ ತುದಿಯನ್ನು ಮೆಲ್ಲನೆ ಏರುತ್ತಾ ಇದ್ದನು. ಅವನ ಕೈಯಲ್ಲಿ ಒಂದು ಬೆಂಕಿಯ ಪೊಟ್ಟಣವಿದ್ದಿತು. ಅವನ ಹಿಂದುಗಡೆ ೧೦ ಜನ ಕೂಲಿಗಳು ಅವನನ್ನು ಅನುಸರಿಸುತ್ತಿದ್ದರು. ಪ್ರತಿಯೊಬ್ಬನ ಹೆಗಲಿನ ಮೇಲೂ ಒಂದೊಂದು ಹೊಸ ಗುದ್ದಲಿ ಬಿಸಲಿನ ಬೆಳಕಿನಲ್ಲಿ ಹೊಳೆಯುತ್ತಾ ಇದ್ದಿತು.

ಸಿಯೊ ಕ್ವಿ ಮೊದಲು ಗುಡ್ಡದ ತುದಿಯನ್ನು ಮುಟ್ಟಿದನು. ತನ್ನ ನೆತ್ತಿಯ ಮೇಲೆ ಬರುತ್ತಿದ್ದ ಬೆವರಿನ ಹರಳುಗಳನ್ನು ಮುಂಗೈಯಿಂದ ಒರಸುತ್ತಾ ಉದ್ದಕ್ಕೂ ಬೆಂಕಿಕಡ್ಡಿಯನ್ನು ಗೀರಿ ಹತ್ತಿಸುತ್ತಿದ್ದನು. ಸ್ವಲ್ಪ ಹೊತ್ತಿನಲ್ಲಿ ಗುಡ್ಡದ ಹುಲ್ಲಿಗೆಲ್ಲಾ ಬೆಂಕಿ ಹತ್ತಿ ಹಸಿರು ಹೊಗೆಯು ಅಂತರಿಕ್ಷದ ಕಡೆಗೆ ಹೊರಟಿತು. ಕೂಡಲೆ ಮೆಲ್ಲಗೆ ಗಾಳಿಯು ಬೀಸಿತು. ಹಸಿರಾದ ಹೊಗೆಯ ತಳದಲ್ಲಿ

ಉರಿಯು ಕುಣಿಯುತ್ತಾ, ಗಾಳಿಯ ಬಾಲವನ್ನು ಹತ್ತಿದ ಹಾವಿನಂತೆ ಹೋಗುತ್ತಿದ್ದಿತು. ಉರಿಯ ಕೆನ್ನಾಲಿಗೆಗಳು, ಒಂದಾದ ಮೇಲೆ ಒಂದರಂತೆ ಹುಲ್ಲಿನ ಪೊದೆಗಳನ್ನು ನೆಕ್ಕಿಬಿಟ್ಟವು. ಕೊನೆಯಲ್ಲಿ ಬರಿಯ, ಕರಿಯ ಉರಿಯೂ ಹೊಗೆಯೂ ಮೆಯಿದು ಬಿಟ್ಟ ಹುಲ್ಲಿನ ಬೊಡ್ಡೆಗಳು ಮಾತ್ರ ಉಳಿದುವು.

ನಿಧಾನವಾಗಿ ಹೊಗೆಯು ಮಾಯವಾಯಿತು. ಗುಡ್ಡದ ಬೋಳು ತಲೆ ಮತ್ತೆ ಕಾಣತೊಡಗಿತು. ಗೆಳೆಯರು ತಮ್ಮ ಗುದ್ದಲಿಗಳಿಂದ ಭೂಮಿಯನ್ನು ಮೀಟಿದರು. ತೇವವಿದ್ದ ನೆಲದಲ್ಲಿದ್ದ ಹುಲ್ಲಿನ ಗೆಡ್ಡೆಗಳು ಮೇಲಕ್ಕೆ ಎದ್ದು ಬಿಸಲಿನಲ್ಲಿ ಹರಡಿಕೊಂಡವು.

ಸಿಯೊಕ್ಷಿಯು ಗುದ್ದಲಿಯಿಂದ ನೆಲವನ್ನು ಕಷ್ಟಪಟ್ಟು ಅಗೆಯುತ್ತಿದ್ದನು. ನಾಲ್ಕು ಪೆಟ್ಟು ಹಾಕುವುದರೊಳಗಾಗಿ ಅವನ ಸಣ್ಣ ದುಂಡು ಮೊಖವು ಬೆವರುಹನಿಗಳಿಂದ ತುಂಬಿಕೊಂಡಿತು. ಅವನು ಒಂದು ಸಲ ಗುದ್ದಲಿಯಿಂದ ಅಗೆಯುವದು, ಮತ್ತೊಂದು ಸಲ ಬೆವರನ್ನು ಒರಸಿಕೊಳ್ಳುವುದು ಈ ರೀತಿ ಮಾಡುತ್ತಿದ್ದನು.

ಗೆಳೆಯ ಲಿ (Li) ಯು, "ಗೆಳೆಯ ಸಿಯೊಕ್ಷಿ, ಸ್ವಲ್ಪ ಹೊತ್ತು ಸುಧಾರಿಸಿಕೋ. ನಿನಗೆ ಕೆಲಸ ಬಹಳ ಜಾಸ್ತಿಯಾಯಿತು." ಎಂದನು. ಗೆಳೆಯ 'ಲಿ' ಯು ಪ್ಯಾರಿಸ್ಸಿನಲ್ಲಿ ೬ ವರುಷ ಇದ್ದಿದ್ದನು. ಆದರೂ ಅವನು ತನ್ನ ಹಾಂಗ್‌ಚೌ ಮಾತಿನ ತರಹವನ್ನು ಬಿಟ್ಟಿರಲಿಲ್ಲ. ಅವನ ಕೈಯಲ್ಲಿ ಒಂದು ಗುದ್ದಲಿಯಿದ್ದಿತು. ಅವನು ಸಿಯೊಕ್ಷಿಯನ್ನು ಮುಗುಳುನಗೆ ನಗುತ್ತಾ ನೋಡುತ್ತಿದ್ದನು.

ಸಿಯೊಕ್ಷಿಯು "ನನಗೆ ಆಯಾಸವಾಗಿಲ್ಲ. ಇದೇನು ಹೆಚ್ಚು ಕೆಲಸವಲ್ಲ. ಹಾಗೆ ನೋಡಿದರೆ ನಿನಗೇ ಆಯಾಸವಾಗಿದೆ" ಎಂದು ಹೇಳಿ ಮೊದಲಿಗಿಂತಲೂ ಹೆಚ್ಚು ಜೋರಾಗಿ ಗುದ್ದಲಿಯಿಂದ ಕೆಲಸವನ್ನು ಪ್ರಾರಂಭಿಸಿದನು. 'ಲಿ' ಯು "ಆಗಲಿ ನೋಡೋಣ, ಯಾರು ಗಟ್ಟಿ ಎಂದು" ಎಂದನು. ಸುತ್ತಾ ಇದ್ದವರು ಉತ್ಸಾಹದಿಂದ "ಅದು ಸರಿ, ನೋಡೋಣ" ಎಂದರು.

ಸಿಯೊಕ್ಷಿಯು ಅಗೆದಿದ್ದ ಮಣ್ಣಿನ ಹೆಂಟೆಯನ್ನು 'ಲಿ' ಯು ಅವನಿಗೆ ತೋರಿಸಿ "ನಿನ್ನ ಏಟುಗಳು ಬಹಳ ಹಗುರವಾಗಿವೆ. ಬಹಳ ಸ್ವಲ್ಪವೇ ಮಣ್ಣಿನ ಹೆಪ್ಪು ಬಂದಿದೆ" ಎಂದನು.

ಸಿಯೊಕ್ಷಿಗೆ ನಾಚಿಕೆಯಾಯಿತು.

ಗೆಳೆಯ 'ಲಿ'ಯ ಕೈನಲ್ಲಿ ಮೂರು ಕೊಪ್ಪಳ (ಬೊಕ್ಕೆ)ಗಳು ಬಂದವು. ಅವನು ತೆಳ್ಳಗೆ ಇದ್ದರೂ, ಹಿಂದೆ ಕೂಲಿಯಾಗಿ ಕೆಲಸ ಮಾಡಿದ್ದನು. ನಿಧಾನವಾಗಿ ಸಿಯೊಕ್ಷಿಯು ಹಿಂದೆಬಿದ್ದನು. ಗಡಿಯಾರವನ್ನು ನೋಡುತ್ತಿದ್ದ ಮತ್ತೊಬ್ಬ ಗೆಳೆಯನು "ಹೂ ಹೊತ್ತಾಯಿತು" ಎಂದು ಕೂಗಿದನು.

ಕೂಡಲೆ, ಸುದಾರಿಸಿಕೊಳ್ಳುತ್ತಾ ಇಳಿಜಾರಿನಲ್ಲಿ ಕುಳಿತಿದ್ದ ಎರಡನೆಯ ಗುಂಪಿನ ಗೆಳೆಯರು ಧೂಳನ್ನು ಎಬ್ಬಿಸುತ್ತಾ ಎದ್ದರು. ಅನಂತರ ಅವರ ಗುದ್ದಲಿಗಳು ಆಡಲು ಪ್ರಾರಂಭವಾದುವು. ಗುಮಾಸ್ತನು, ಮಂಜು ಮುಸುಕಿದ್ದ ಬೆಟ್ಟದ ಆಚೆ ಕಡೆಯಿಂದ ೨ ಕುಕ್ಕೆ ಮೂಲಂಗಿಗಳನ್ನು ಹೊತ್ತುಕೊಂಡು ಆಗ ತಾನೆ ಬಂದನು. ಕುಕ್ಕೆಗಳನ್ನು ಅಡಿಗೆಮನೆಯಲ್ಲಿಟ್ಟು ಒಂದು ಸೌಟು ನೀರನ್ನು ಕುಡಿದು ತಾನೂ ಒಂದು ಗುದ್ದಲಿಯನ್ನು ತೆಗೆದುಕೊಂಡು ಅಡಿಗೆಯವನಿಗೆ "ನೀನೂ ಸ್ವಲ್ಪ ಕಾಡನ್ನು ಅಗೆದು ಸರಿಮಾಡಬೇಕು" ಎಂದನು. ಅಡಿಗೆಯವನು ಹಳದಿ ಬಣ್ಣದ ಅಕ್ಕಿಯನ್ನು ತೋರಿಸಿ "ನನಗೆ ಹೊತ್ತಿಲ್ಲ. ಈ ಅಕ್ಕಿಯನ್ನು ಈಗ ಶುದ್ಧಿ ಮಾಡದೆ ಹೋದರೆ ಊಟಕ್ಕೆ ಅಕ್ಕಿ ಇಲ್ಲವಾಗುತ್ತೆ" ಎಂದನು.

ಗುಮಾಸ್ತನು "ಮುಖಂಡರೆಲ್ಲಾ ಭೂಮಿಯನ್ನು ಉಳುತ್ತಿರುವುದು ನಿನಗೆ ಕಾಣುವುದಿಲ್ಲವೆ? ಅವರಿಗೂ ಅವರವರ ಕೆಲಸಗಳು ಇದ್ದೇ ಇವೆ. ನೀನು ೨-೩ ಗಂಟೆ ಇದಕ್ಕಾಗಿ ಇಟ್ಟುಕೊಳ್ಳಬಹುದು. ಜಪಾನರಿಗೆ ವಿರೋಧವಾಗಿ ಕಾದಾಟವನ್ನು ಬಲಪಡಿಸಬೇಕಾದರೆ, ನಮ್ಮ ಆಹಾರವನ್ನು ನಾವು ಬೆಳೆದುಕೊಳ್ಳಬೇಕಾಗಿದೆ. ಈ ಕೊನೆಯ ಡಿಸ್ಟ್ರಿಕ್ಟಿನಲ್ಲಿ ಪ್ರತಿಯೊಬ್ಬರೂ ಬೇಸಾಯ ಮಾಡಲೇಬೇಕು. ಈ ವರುಷ ೬ ಲಕ್ಷ ಮೌ ಜಮೀನನ್ನು ಸಾಗುವಳಿ ಮಾಡಬೇಕು. ನೀನು ಒಂದು ಮೌ ಜಮೀನನ್ನೂ ಸಾಗುಮಾಡುವುದಿಲ್ಲವೇ?" ಎಂದನು.

ಅಡಿಗೆಯವನು "ನನಗೆ ಹೊತ್ತಿಲ್ಲ. ನಾನು ೨೦-೩೦ ಜನರ ಊಟದ ವ್ಯವಸ್ಥೆ ಮಾಡಬೇಕಾಗಿದೆ" ಎಂದನು.

ಗುಮಾಸ್ತನು "ಸ್ವಲ್ಪ ಕಾಲ ಇದಕ್ಕೂ ಕೊಡು. ಸಿಯೊಕ್ವಿ ಸಹ ಕೆಲಸ ಮಾಡುತ್ತಿದ್ದಾನೆ" ಎಂಬುದಾಗಿ ಗುಡ್ಡದ ಮೇಲೆ ಕೆಲಸಮಾಡುತ್ತಿದ್ದವರ ಕಡೆಗೆ ಕೈತೋರಿಸಿದನು.

ಅಡಿಗೆಯವನು ಮನಸ್ಸಿನಲ್ಲಿ "ನಾನು ರೈತನಲ್ಲ, ನಾನು ಯಾಕೆ ಉಳಬೇಕು?" ಎಂದುಕೊಂಡನು. ಆದರೆ ಬಾಯಲ್ಲಿ ಏನನ್ನೂ ಹೇಳದೆ ಅಕ್ಕಿಯನ್ನು ತೊಳೆಯತೊಡಗಿದನು.

ಅಡಿಗೆಯವನು ಗೊಣಗುಟ್ಟುವ ಹಟಮಾರಿಯಾಗಿದ್ದನು. ಅವನಿಗೆ ಆಗಲೆ ೪೬ ವಯಸ್ಸಾಗಿದ್ದರೂ ಅವನ ಸ್ವಭಾವ ಹುಡುಗರ ಸ್ವಭಾವದಷ್ಟೇ ಹಟಮಾರಿತನದ್ದಾಗಿದ್ದಿತು. ಅವನ ಹಿಂದಲ ಯಜಮಾನನು "ನಿನಗೆ ಇಷ್ಟವಿಲ್ಲದಿದ್ದರೆ ನೀನು ಹೋಗಬಹುದು" ಎಂದು ಹೇಳಿದ್ದುದರಿಂದ, ಅವನಿಗೆ ಕೋಪವುಂಟಾಗಿ ಅವನು ಚೆಂಗ್‌ವುಶಿಯದಿಂದ ಯೆನ್ ಯಾನ್‌ಗೆ ಎರಡು ತಿಂಗಳ ಹಿಂದೆ ಬಂದಿದ್ದನು. ಆಗ ಅವನ ಮೊದಲಿನ ಯಜಮಾನನು ನಂಬಿಗಸ್ತನಾಗಿದ್ದ

ಇವನನ್ನು ನಿಲ್ಲಿಸಿಕೊಳ್ಳಬೇಕೆಂದು ಎಷ್ಟೋ ಪ್ರಯತ್ನ ಪಟ್ಟನು. ಆದರೆ ಅಡಿಗೆಯವನು ಒಪ್ಪಲಿಲ್ಲ. ಅವನು "ನಾನು ಬಿಟ್ಟಾಯಿತು. ಹೇಳಿದ ಮಾತನ್ನು ಬದಲಾಯಿಸಲು ಸಾಧ್ಯವಿಲ್ಲ" ಎಂದುಬಿಟ್ಟನು.

ಯೆನ್-ಯಾನ್‌ಗೆ ಬಂದ ಈಚೆಗೆ ಅವನು ಅಡಿಗೆಯ ಹೊರತು ಮತ್ತಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಅವನ ಕರ್ತವ್ಯಭಾಗವಾಗಿ ಬಿದ್ದ ಕೆಲಸಗಳನೆಲ್ಲಾ ಅವನು ಬಹಳ ಕ್ರಮವಾಗಿ ಮಾಡುತ್ತಿದ್ದನು. ಊಟ ಸಕಾಲಕ್ಕೆ ಸಿದ್ಧವಾಗಿರುತ್ತಿದ್ದಿತು. ಅಡಿಗೆ ಮನೆ ಸ್ವಚ್ಛವಾಗಿ ಅಚ್ಚುಕಟ್ಟಾಗಿರುತ್ತಿದ್ದಿತು. ಅವನ ರಾಜ್ಯದಲ್ಲಿ ಇತರರಿಗೆ ಪ್ರವೇಶವಿರಲಿಲ್ಲ. ಒಂದು ಸಲ ಒಬ್ಬ ಗೆಳೆಯನು ಮಡಕೆಯಿಂದ ಅನ್ನವನ್ನು ತೆಗೆದುಕೊಳ್ಳಲು ಪ್ರಯತ್ನಿಸುತ್ತಿದ್ದುದನ್ನು ನೋಡಿ ಅವನು "ಗೆಳೆಯ, ನಿನಗೆ ಯಾಕೆ ಶ್ರಮ. ನಾನು ಇಲ್ಲವೆ?" ಎಂದು ಬಂದನು.

ಅನ್ನವನ್ನು ಚಚ್ಚೌಕವಾದ ತುಂಡುಗಳಾಗಿ ಕತ್ತರಸಿ, ನಗುತ್ತಾ ಎಲ್ಲರಿಗೂ ಬಡಿಸುವುದು ಅವನಿಗೆ ಬಹು ಇಷ್ಟವಾಗಿದ್ದಿತು. ಅಡಿಗೆಮನೆಯಿಂದ ಯಾವ ಸಾಮಾನು ತೆಗೆದುಕೊಳ್ಳಬೇಕಾದರೂ ಅವನ ಒಪ್ಪಿಗೆಯನ್ನು ಪಡೆಯುವುದು ಅವಶ್ಯಕವಾಗಿದ್ದಿತು. ಅವನು ಯಾವಾಗಲೂ "ಆಗಲಿ" ಎಂದೇ ಹೇಳುತ್ತಿದ್ದನು. ಒಂದು ಸಲ ಅವನು ಒಂದು ವಿಚಾರದಲ್ಲಿ ಮನಸ್ಸು ಮಾಡಿದ ಮೇಲೆ ಅದನ್ನು ಬದಲಾಯಿಸಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಇದನ್ನು ತಿಳಿದಿದ್ದ ಗುಮಾಸ್ತನು ಈಗಲೂ ಹೆಚ್ಚಿಗೆ ಹೇಳದೆ ಸುಮ್ಮನಾದನು. ಹೆಗಲಿಗೆ ಗುದ್ದಲಿಯನ್ನು ಹಾಕಿಕೊಂಡು ತಾನು ಗುಡ್ಡದ ಮೇಲಕ್ಕೆ ಹೋದನು.

(೩)

ಮೂರು ದಿನಗಳು ಕಳೆದವು. ಸೂರ್ಯನು ಇನ್ನೂ ಬೆಟ್ಟದ ಸಂದಿನಲ್ಲಿ ಮರೆಯಾಗಿದ್ದನು. ಮಂಜು ತೆಳುವಾದ ಮುಸುಕಿನಂತೆ ಗುಡ್ಡದ ಮೇಲೆ ಹರಡಿತ್ತು. ಅಡಿಗೆಯವನು ಅಡ್ಡೆಯಲ್ಲಿ ನೀರನ್ನು ಹೊರುತ್ತಾ ನಿಧಾನವಾಗಿ ಗುಡ್ಡದ ಮೇಲಕ್ಕೆ ಹತ್ತುತ್ತಿದ್ದನು. ಅರ್ಧ ದಾರಿ ಹೋಗುವ ವೇಳೆಗೆ ಮುಂದಕ್ಕೆ ಒಂದು ಹೆಜ್ಜೆಯ ಇಡಲಾರದಷ್ಟು ಅವನ ಕಾಲುಗಳು ಭಾರವಾದವು. ಅವನು ನಿಂತಲ್ಲಿಯೇ ನಿಂತನು. ಮಂಜಿನಲ್ಲಿ ಅವನ ಮುಖವು ಭಯಂಕರವಾಗಿ ಕಾಣುತ್ತಿದ್ದಿತು. ಅವನು ದೀರ್ಘವಾದ ನಿಟ್ಟುಸಿರನ್ನು ಬಿಟ್ಟನು. ಅಡ್ಡೆಯನ್ನು ಕೆಳಗಿಟ್ಟು ಮಗ್ಗುಲಲ್ಲಿದ್ದ ಕಲ್ಲಿನ ಮೇಲೆ ಕುಳಿತುಕೊಂಡನು.

ಸ್ವಲ್ಪ ಸುಧಾರಿಸಿಕೊಂಡನಂತರ, ಅವನು ತನ್ನ ಬಟ್ಟೆಯ ಧೂಳನ್ನೆಲ್ಲಾ ಕೊಡವಿಕೊಂಡು ಅನಂತರ ಮೆಲ್ಲನೆ ನಿಂತುಕೊಂಡು ಅಡ್ಡೆಯನ್ನು ಹೊತ್ತುಕೊಂಡನು. ಇನ್ನು ಎರಡು ಹೆಜ್ಜೆ ಮುಂದಕ್ಕೆ ಹಾಕುವುದರೊಳಗಾಗಿ, ಅವನ ಮುಖದಿಂದ ಧಾರೆಧಾರೆಯಾಗಿ ಬೆವರು ಹರಿಯಿತು. ತಲೆ ತಿರುಗುವಂತಾಯಿತು. ಕಳೆದ ರಾತ್ರಿ, ಮಲಗುವಾಗ ತನ್ನ ಗವಿಯ ಬಾಗಿಲನ್ನು ಮುಚ್ಚುವುದನ್ನು ಅವನು ಮರೆತು ಮಲಗಿದನು. ರಾತ್ರಿಯ ಶೀತದ ಗಾಳಿಯು ಅವನ ಶಕ್ತಿಯನ್ನೇ ಹೀರಿದ್ದಿತು.

ಹಾಲಿನ ಹಾಗೆ ಬೆಳ್ಳಗಿದ್ದ ಮಂಜಿನ ಸಂದಿಯಲ್ಲಿ, ಗೆಳೆಯ 'ಲಿ' ಗೆ ಅಡಿಗೆಯವನು ಸೋತು ಕುಳಿತಿದ್ದುದು ಕಾಣಿಸಿತು. ಅವನು ಅಡಿಗೆಯವನಿಗೆ ಸಹಾಯಮಾಡಬೇಕೆಂದು ಬೇಗ ಬೇಗ ಬಂದನು. ಆದರೆ ಅಡಿಗೆಯವನು ಒಪ್ಪಲಿಲ್ಲ.

"ಬೇಡ ಬೇಡ. ನಾನೇ ಮಾಡುತ್ತೇನೆ. ಸ್ವಲ್ಪ ಸುಧಾರಿಸಿಕೊಂಡರೆ ಆಯಿತು. ರಾತ್ರಿ ಸ್ವಲ್ಪ ಛಳಿಯಾಗಿದೆ ಅಷ್ಟೆ."

'ಲಿ'ಯು "ನೀರನ್ನು ನಾನು ಮೇಲಕ್ಕೆ ತರುತ್ತೇನೆ. ಸ್ವಲ್ಪ ಸುಧಾರಿಸಿಕೊ. ಚಿಂತೆಯಿಲ್ಲ" ಎಂದನು.

"ಇದು ನನ್ನ ಕೆಲಸ. ನಾನೇ ಮಾಡುತ್ತೇನೆ. ಸ್ವಲ್ಪ ಸುಧಾರಿಸಿಕೊಂಡರೆ ಸರಿಹೋಗುತ್ತೆ"

"ಆಗಲಿ. ಪರವಾಯಿಲ್ಲ"

ಗೆಳೆಯ 'ಲಿ' ನೀರನ್ನು ಹೊತ್ತುಕೊಂಡು ಮೇಲಕ್ಕೆ ಹೋಗಿ "ಗೆಳೆಯ ಅಡಿಗೆಯವನೇ ಇವತ್ತು ನೀನು ಬಿಡುವು ತೆಗೆದುಕೊ. ಇವತ್ತು ಅಡಿಗೆ ನಿನಗಾಗಿ ನಾವೇ ಮಾಡುತ್ತೇವೆ" ಎಂದನು.

ಅಡಿಗೆಯವನು "ಬೇಡ. ನಾನು ಅಡಿಗೆ ಮಾಡುತ್ತೇನೆ. ಸ್ವಲ್ಪ ಬಿಗಡಾಯಿಸಿದೆ ಅಷ್ಟೆ" ಎಂದನು.

ಅಡಿಗೆಗೆ ಬೇಕಾದ ಸೌದೆಯನ್ನು ಕತ್ತರಿಸಲು ಅವನು ಕೈಯಲ್ಲಿ ಕೊಡಲಿಯನ್ನು ಹಿಡಿದುಕೊಂಡು ಹೊರಟನು. ಆದರೆ ಆವತ್ತು ಕೊಡಲಿ ಯಾಕೋ ಅವಿಧೇಯವಾಗಿತ್ತು. ಯಾವಾಗಲೂ ಗುರಿತಪ್ಪಿಯೇ ಬೀಳುತ್ತಿದ್ದಿತು. ಎಷ್ಟೋ ಸಲ ಕೊಡಲಿಯು ಭೂಮಿಯೊಳಗೆ ಹೂಳಿಕೊಳ್ಳುತ್ತಿದ್ದಿತು. ಅವನ ಹಣೆಯ ಮೇಲೆ ಸೋಯಾಬೀನ್‌ಗಳಷ್ಟು ದಪ್ಪ ಬೆವರಿನ ಹನಿಗಳು ಕೂಡಿ ನೆಲಕ್ಕೆ ಬೀಳುತ್ತಿದ್ದುವು. ಅವನಿಗೆ ಕಾಲು ಹಗುರವಾದಂತಾಗಿ ನಿಲ್ಲುವುದೇ ಕಷ್ಟವಾಯಿತು. ಬೆಟ್ಟಗಳು ಅವನ ಸುತ್ತಾತಿರುಗುತ್ತಿರುವಂತೆ ಕಾಣಿಸಿದವು.

ಗೆಳೆಯ ’ಲಿ’ಯು ಅವನನ್ನು ಮಣ್ಣಿನ ಮಂಚದ ಹಾಸಿಗೆಯ ಮೇಲೆ ಬಿಟ್ಟು “ಇವತ್ತು ಬಿಡುವು ತೆಗೆದುಕೊ. ನಾವು ಅಡಿಗೆ ಮಾಡುತ್ತೇವೆ... ಅದೇನು ಕಷ್ಟವಿಲ್ಲ” ಎಂದು ಸಮಾಧಾನ ಮಾಡಿದನು.

ಅಡಿಗೆಯವನು ಹಾಸಿಗೆಯ ಮೇಲೆ ಕುಳಿತುಕೊಂಡು, ಗೆಳೆಯ ’ಲಿ’ಯನ್ನು ನೋಡುತ್ತಾ ತನ್ನಲ್ಲಿಯೇ ತಾನು ತಿರಸ್ಕಾರವನ್ನು ಹೊಂದಿ “ಅಡಿಗೆ ಮಾಡಬೇಕಾದವನು ನಾನು. ನಿಮ್ಮ ನಿಮ್ಮ ಕೆಲಸ ನಿಮಗೆ ಇದ್ದೇ ಇದೆ.” ಎಂದನು.

ಗೆಳೆಯ ’ಲಿ’ಯು “ಚಿಂತೆಯಿಲ್ಲ. ನಿನಗೆ ಹುಷಾರಿಲ್ಲ. ನಮ್ಮ ಯಾವುದಾದರೂ ಕೆಲಸವನ್ನು ಕಮ್ಮಿ ಮಾಡುತ್ತೇವೆ. ಕೆಲಸದ ಹೊರೆಯನ್ನು ಎಲ್ಲರೂ ಹಂಚಿಕೊಂಡರೆ ಯಾವ ಕೆಲಸವೂ ಚೆನ್ನಾಗಿ ಆಗುತ್ತದೆ. ನಿನಗೆ ಗುಣವಾದ ಮೇಲೆ ನೀನು ನಮಗೆ ಸಹಾಯಮಾಡಬಹುದು” ಎಂದನು.

’ಲಿ’ಯ ಮಾತನ್ನು ಕೇಳಿದ ಮೇಲೆ ಅಡಿಗೆಯವನಿಗೆ ಸ್ವಲ್ಪ ಸಮಾಧಾನವಾಯಿತು. “ಆಗಲಿ; ಬುದ್ಧಿಯಿಲ್ಲದೆ ಛಳಿಗೆ ಸಿಕ್ಕಿದೆ. ನನ್ನದೇ ತಪ್ಪು” ಎಂದನು.

“ಸ್ವಲ್ಪ ಮಲಗಿ ಸುಧಾರಿಸಿಕೊ”

ಅಡಿಗೆಯವನು “ಆಗಲಿ” ಎಂದನು. ಆದರೆ ಮಲಗಿಕೊಳ್ಳಲಿಲ್ಲ. ಗೋಡೆಗೆ ಒರಗಿಕೊಂಡು ಕೃತಜ್ಞತೆಯಿಂದ ನಕ್ಕನು.

ಗುಮಾಸ್ತನು ನೀರು ತರಲು ಅಡ್ಡೆಯನ್ನು ತೆಗೆದುಕೊಂಡು ನದಿಗೆ ಹೋದನು. ಗೆಳೆಯ ’ಲಿ’ ಯು ಈಳಿಗೆಮಣೆಯಲ್ಲಿ ಮೂಲಂಗಿಗಳನ್ನು ಹೆಚ್ಚಲು ಪ್ರಾರಂಭಿಸಿದನು. ಕ್ಯಾಂಪಿನ ಮುಖಂಡನು ಅಡಿಗೆಯವನಿಗೆ ಹುಷಾರಿಲ್ಲವೆಂದು ಕೇಳಿ ಅಡಿಗೆಗೆ ಸಹಾಯಮಾಡುವುದಕ್ಕಾಗಿ ಬಂದು ಬೆಂಕಿಯ ಮುಂದೆ ಕುಳಿತನು. ಅಡಿಗೆಯವನು ಸಂಕೋಚದಿಂದ ಅವರಕಡೆ ನೋಡುತ್ತಾ “ನಾನು ನಿಮಗೆಲ್ಲಾ ಋಣಿಯಾಗಿದ್ದೇನೆ. ನಿಮ್ಮ ಕೆಲಸಗಳನ್ನೆಲ್ಲಾ ತಪ್ಪಿಸಿ ಇಲ್ಲಿಗೆ ಬರುವಂತೆ ಮಾಡಿದೆ” ಎಂದನು.

ಮುಖಂಡನು “ಏನೂ ಇಲ್ಲ. ಕೆಲಸವನ್ನು ಎಲ್ಲರೂ ಒಟ್ಟಾಗಿಯೇ ಮಾಡಬೇಕಾದುದು. ನಿನಗೆ ಪಾಪ ಖಾಯಿಲೆ.” ಎಂದನು.

ಮೂಲಂಗಿಗಳನ್ನು ಹೆಚ್ಚುತ್ತಾ ಗೆಳೆಯ ’ಲಿ’ ಯು ಹಿಂದಲ ಕೂಲಿಗಾರರ ಚಳುವಳಿಯ ಕಾಲದಲ್ಲಿ ಮಾತನಾಡುತ್ತಿದ್ದ ಎತ್ತರವಾದ ಧ್ವನಿಯಲ್ಲಿ “ಕೆಲಸವನ್ನು ಎಲ್ಲರೂ ಮಾಡಬೇಕು.

ಪರಸ್ಪರ ಸಹಾಯದಿಂದ ಮಾತ್ರ ಯಾವ ಕೆಲಸವೂ ಸಾಧ್ಯ. ನಿನಗೆ ಖಾಯಿಲೆಯಾದಾಗ ನಾವು ಸಹಾಯ ಮಾಡುತ್ತೇವೆ. ನಮಗೆ ಬೇಕಾದಾಗ ನಿನ್ನನ್ನೂ ಸಹಾಯಕ್ಕೆ ಕರೆಯುತ್ತೇವೆ." ಎಂದನು.

"ಆಗಲಿ"

'ಲಿ' ಯು ಮುಂದುವರಿಸಿದನು: "ಉದಾಹರಣೆಗೆ ಈಗ ನೋಡು. ನಮ್ಮ ಸೈನ್ಯಗಳು ಯುದ್ಧಭೂಮಿಯಲ್ಲಿ ಜಪಾನ್ ಪಿಶಾಚಿಗಳೊಂದಿಗೆ ಕಾದಾಡುತ್ತಿದ್ದಾರೆ. ನಾವು ಹಿಂದಲಿಂದ ಕೆಲಸ ಮಾಡಿ ಸಹಾಯ ಮಾಡುತ್ತಿದ್ದೇವೆ. ಅವರು ಬರಿಯ ಹೊಟ್ಟೆಯಲ್ಲಿ ಕಾದಾಡುವುದು ಸಾಧ್ಯವಿಲ್ಲ. ಆದುದರಿಂದ ಹಿಂದೆ ಇರುವ ನಾವು ಕಾಡುಗಳನ್ನೆಲ್ಲಾ ಉತ್ತು ಆಹಾರವನ್ನು ಬೆಳೆಯ ಬೇಕಾಗಿದೆ. ನೀನೂ ಸ್ವಲ್ಪ ಕಾಡನ್ನು ಉಳಬೇಕಾಗುತ್ತದೆ."

ಅಡಿಗೆಯವನು ಕೆಮ್ಮುತ್ತಾ "ಅಡಿಗೆ ಮಾಡುವುದು ನನ್ನ ಕೆಲಸ" ಎಂದು ಗೊಣಗುಟ್ಟಿದನು. 'ಲಿ'ಯು "ಹೌದು ನೀನು ಹೇಳುವುದು ಸರಿ. ಅಡಿಗೆ ಮಾಡುವುದು ನಿನ್ನ ಕೆಲಸ. ನಮ್ಮನ್ನು ನೋಡು. ನಾವೂ ಹಿಂದೆ ಯಾವಾಗಲೂ ವ್ಯವಸಾಯಗಾರರಾಗಿರಲಿಲ್ಲ. ಆದರೂ ಈಗ ವ್ಯವಸಾಯ ಮಾಡುತ್ತೇವೆ. ಈಗ ಅಡಿಗೆಯನ್ನೂ ಮಾಡುತ್ತಿದ್ದೇವೆ. ಗೆಳೆಯ 'ಮೊ' ಹೇಳಿದುದು ಗೊತ್ತಿಲ್ಲವೆ? 'ಜಪಾನರನ್ನು ಎದುರಿಸುವಿಕೆಯು ಹೆಚ್ಚು ಹೆಚ್ಚು ಕಠಿಣವಾದಂತೆಲ್ಲಾ ನಮ್ಮ ಎಲ್ಲಾ ಕೆಲಸಗಳನ್ನು ನಾವು ನಮ್ಮ ಕೈಗಳಿಂದಲೇ ಮಾಡಿಕೊಳ್ಳಬೇಕಾಗುವುದು' ಎಂದು. ನಾವು ವ್ಯವಸಾಯವನ್ನೂ ಮಾಡಬೇಕು. ನಮ್ಮ ಬಟ್ಟೆಗಳನ್ನು ನಾವೇ ಮಾಡಿಕೊಳ್ಳಬೇಕು. ಈ ಜಪಾನು ಪಿಶಾಚಿಗಳನ್ನು ಓಡಿಸಬೇಕಾದರೆ, ಎಲ್ಲಾ ಕಷ್ಟಗಳನ್ನೂ ಎದುರಿಸಿ ಜಯಿಸುವ ಶಕ್ತಿಯುಳ್ಳವರಾಗಬೇಕು"

ಅಡಿಗೆಯವನು, ಬಳಲಿಕೆಯಿಂದ ನಿಶ್ಶಕ್ತವಾಗಿದ್ದ ಕಣ್ಣುಗಳನ್ನು 'ಓ' ಎಂದುಕೊಂಡು ಮುಚ್ಚಿಕೊಂಡು "ನಿಜ ನಿಜ. ಅವರೂ ವ್ಯವಸಾಯಗಾರರಲ್ಲ. ಅಲ್ಲದೆ ಅಡಿಗೆಯಲ್ಲಿ ಈಗ ನನಗೆ ಸಹಾಯಕರಾಗಿದ್ದಾರೆ." ಎಂದುಕೊಂಡನು. ಆದರೆ ಮುಂದಲ ಗಳಿಗೆಯಲ್ಲಿ ಮತ್ತೆ "ಇದು ಅವರ ಕೆಲಸ. ನನ್ನ ಮಟ್ಟಿಗೆ, ಅಡಿಗೆ ಕೆಲಸ ನನ್ನದು. ನಾನು ಯಾಕೆ ಕಾಡನ್ನು ಉಳಬೇಕು?" ಎಂದುಕೊಂಡನು. 'ಲಿ' ಯ ಮಾತು ಕೇಳದವನಂತೆ ಸುಮ್ಮನೆ ಎಲ್ಲಿಯೋ ದೂರಕ್ಕೆ ನೋಡುತ್ತಿದ್ದನು.

ಅಡಿಗೆಯವನು ಏನೂ ಮಾತನಾಡದುದನ್ನು ಕಂಡು 'ಲಿ' ಯು, ಮೂಲಂಗಿಯನ್ನು ಹೆಚ್ಚಿದ ನಂತರ ಮತ್ತೆ "ನಾವೆಲ್ಲಾ ವ್ಯವಸಾಯ ಮಾಡುತ್ತಿದ್ದೇವೆ" ಎಂದನು.

ಮುಖಂಡನು ಒಲೆಯ ತುಂಬ ಸೌದೆಯನ್ನು ಹಾಕಿ ತುಟಿಗಳನ್ನು ತಿಂಟಿ ನೋಡಿದರೆ ನಗು ಬರುವಂತೆ ಊದುತ್ತಿದ್ದನು. ಹೊಗೆಯು ನಿಧಾನವಾಗಿ ಗುಡ್ಡದ ಮೇಲುಗಡೆಗೆ ತೇಲಿಹೋಗುತ್ತಿದ್ದಿತು.

ಹೊಗೆಯು ಇದ್ದಕ್ಕಿದ್ದಂತೆ ಮುಖಂಡನ ಕಣ್ಣುಗಳನ್ನು ತುಂಬಿ ಕೊಂಡಿತು. ಅವನಿಗೆ ಕಣ್ಣು ಹೋಗಿ ಊಸಿರೇ ಕಟ್ಟಿದಂತಾಯಿತು. ಅವನು ಹೊರಗಿನ ಶುದ್ಧವಾದ ಗಾಳಿಯನ್ನು ಹೀರುವುದಕ್ಕಾಗಿ ಅಡಿಗೆಮನೆಯನ್ನು ಬಿಟ್ಟು ಹೊರಕ್ಕೆ ಓಡಿದನು. ಅಲ್ಲಿ ಕಣ್ಣು ಬಿಟ್ಟಾಗಲೂ, ಅಳುತ್ತಿದ್ದವರ ಕಣ್ಣಿನಂತೆ ಅವನ ಕಣ್ಣುಗಳು ಉರಿಯುತ್ತಿದ್ದವು. ಕಣ್ಣುಗಳನ್ನು ಚೆನ್ನಾಗಿ ಒರಸಿಕೊಂಡನಂತರ ಅವನು ಒಳಕ್ಕೆ ಬಂದು "ಪ್ರಾಂತದ ಆರ್ಥಿಕ ಕಮಿಶನರಿಂದ ಬಂದ ಹಸ್ತಪತ್ರಿಕೆಯಂತೆ ಇನ್ನು ಮುಂದೆ ಕಾಡನ್ನು ಉತ್ತು ಪೈರು ಮಾಡುವವರಿಗೆಲ್ಲಾ ತಿಂಗಳಿಗೆ, ೫೦ ಸೆಂಟುಗಳಂತೆ, ಬೂಟ್ಸು ಮತ್ತು ಕಾಲುಚೀಲಗಳಿಗಾಗಿ ಹೆಚ್ಚಿಗೆ ಸಂಬಳ ದೊರೆಯುತ್ತೆ" ಎಂದನು.

"ಈ ತಿಂಗಳು ನಮಗೆಲ್ಲಾ ೫೦ ಸೆಂಟುಗಳು ಹೆಚ್ಚಿಗೆ ದೊರಕುತ್ತವೆ."

"ಗೆಳೆಯ ಅಡಿಗೆಯವನೇ, ನಿನಗೆ ಗುಣವಾದ ಮೇಲೆ ನೀನು ಒಂದು ಭಾಗ ಜಮೀನನ್ನು ಸಾಗುವಳಿ ಮಾಡುವುದಿಲ್ಲವೆ?"

"ನನಗೆ ವಿರಾಮವಿಲ್ಲ. ವಿರಾಮವಿದ್ದರೆ ಮೂರು ಅಥವ ಐದು ಮೌ ಜಮೀನನ್ನು ಉಳುವುದು ಏನು ಮಹಾ ಕಷ್ಟ?" ಎಂಬುದಾಗಿ ಅಡಿಗೆಯವನು ಕೈಯ್ಯನ್ನು ಉಜ್ಜುತ್ತಾ ಹೇಳಿದನು.

ನೀರನ್ನು ತೆಗೆದುಕೊಂಡು ಹೋಗಲು ಒಳಕ್ಕೆ ಬಂದಿದ್ದ ಸಿಯೋಕ್ವಿಯು ಇತರರು ಅಡಿಗೆಯವನನ್ನು ತಿಟ್ಟುತ್ತಿದ್ದುದನ್ನು ಕಂಡು ತಾನೂ ಅವನನ್ನು ಬಯ್ಯಲು ಅದೇ ಸಮಯವೆಂದುಕೊಂಡು "ನೀನು ಒಂದು ಮೌ ಜಮೀನು ಕೂಡ ಉಳುತ್ತಿಲ್ಲ. ಅಲ್ಲದೆ ಇತರರು ಅಡಿಗೆಯಲ್ಲಿ ನಿನಗೆ ಸಹಾಯ ಮಾಡುತ್ತಿದ್ದಾರೆ. ನಿನಗೆ ನಾಚಿಕೆ ಬೇಡವೆ? ಇದು ಕ್ರಾಂತಿಯ ಕೆಲಸ ಗೆಳೆಯ?" ಎಂದನು.

ಅಡಿಗೆಯವನಿಗೆ ಸಿಟ್ಟು ಹತ್ತಿತು. ರಕ್ತವು ಕುದಿಯಲು ಪ್ರಾರಂಭವಾಯಿತು. "ನೀನು ಮಾಡಬೇಕೆಂದು ನಾನು ಹೇಳಲಿಲ್ಲ. ನೀನೇ ಮಾಡುತ್ತೇನೆಂದು ಬಂದೆ" ಎಂದುಕೊಂಡು ಅವನು ಏಳುವುದಕ್ಕೆ ಪ್ರಯತ್ನಿಸಿದನು. ಗೆಳೆಯ 'ಲಿ' ಯು ಅವನನ್ನು ತಡೆದು "ನೀನು ರೋಗಿ, ಸಿಯೊಕ್ವಿ ಹೇಳಿದರೆ ಹೇಳಿಕೊಳ್ಳಲಿ" ಎಂದನು.

ಸಿಯೋಕ್ವಿಯು ಅಡಿಗೆಯವನನ್ನು ತಿರಸ್ಕಾರದಿಂದ ನೋಡುತ್ತಾ ಓಡಿಹೋದನು.

ಅಡಿಗೆಯವನು ಕೋಪದಿಂದ "ಈ ರೀತಿಯಾದ ಮಾತನ್ನು ಯಾರು ಆಡಿದರೂ ನನಗೆ ಸಹಿಸುವುದಿಲ್ಲ. ನನಗೆ ಖಾಯಿಲೆ ಇಲ್ಲದೆ ಇದ್ದಿದ್ದರೆ...." ಎಂದನು. ಆದರೆ ಅವನ ಆಲೋಚನೆ ಹೀಗೆ ನಡೆದಿತ್ತು: "ಆ ಹುಡುಗನಿಗೆ ತಲೆಹರಟೆ ಹೆಚ್ಚು. ಹೌದು ನಾನು ಸ್ವಲ್ಪವೂ ಭೂಮಿಯನ್ನು ಉಳುತ್ತಾ ಇಲ್ಲ. ಆದರೆ ನಾನೂ ಉತ್ತರೆ! ಎಲ್ಲರೂ ಉಳುತ್ತಿರುವಾಗ ನಾನು ಒಬ್ಬ ಮಾತ್ರ ಉಳದೇ ಇದ್ದರೆ ಚೆನ್ನಾಗಿ ಕಾಣುವುದಿಲ್ಲ. ಉಳಿದವರೆಲ್ಲ ಉಳುತ್ತಾರೆ"

ಆದರೆ ಮೇಲೆ ಮಾತ್ರ ಅವನು "ನನಗೆ ವಿರಾಮವಿದ್ದರೆ ನಾನೂ ಉಳುತ್ತಿದ್ದೆ. ವಿರಾಮವಿಲ್ಲ" ಎಂದು ಒತ್ತಿ ಒತ್ತಿ ಹೇಳಿದನು.

ಗೆಳೆಯ 'ಲಿ' ಯು "ನಾವೆಲ್ಲಾ ನಿನಗೆ ಸಹಾಯಮಾಡುತ್ತೇವೆ" ಎಂದನು. ಅನಂತರ ಬಾಂಡಲೆಗೆ ಸ್ವಲ್ಪ ವನಸ್ಪತಿ ತುಪ್ಪವನ್ನು ಹುಯಿದನು. ಅದನ್ನು ಸೌಟಿನಿಂದ ತಿರುಗಿಸಲು ಪ್ರಾರಂಭಿಸಿದಾಗ ನೀಲಿ ಬಣ್ಣದ ಹೊಗೆಯು ಹೊರಟಿತು.

ಇದ್ದಕ್ಕಿದ್ದಂತೆ ಅಡಿಗೆಯವನು ಹಾಸಿಗೆಯಿಂದ ಎದ್ದು "ನೀನು ಎಣ್ಣೆ ಹೆಚ್ಚಾಗಿ ಹಾಕಿದೆ. ಗುಮಾಸ್ತನು ಈ ತಿಂಗಳಿನ ಆಹಾರದ ಖರ್ಚು, ಅಂದಾಜಿಗಿಂತಲೂ ಹೆಚ್ಚಾಗಿದೆಯೆಂದು ಹೇಳಿದನು. ಎಣ್ಣೆಯನ್ನು ಚೌಕಸಿಯಿಂದ ಉಪಯೋಗಿಸು. ಸ್ವಲ್ಪ ಹೆಚ್ಚು ಎಣ್ಣೆಬಿದ್ದರೆ ತರಕಾರಿ ರುಚಿಯಾಗುತ್ತೆ! ನಾನೂ ಬಲ್ಲೆ." ಎಂದುಕೊಂಡು ಬಾಂಡಲೆಯಲ್ಲಿದ್ದ ಎಣ್ಣೆಯನ್ನೇ ಎವೆಯಿಕ್ಕದೆ ನೋಡುತ್ತಿದ್ದನು.

ಗೆಳೆಯ 'ಲಿ'ಯು ಮಡಕೆಯಲ್ಲಿ ಮೂಲಂಗಿಯನ್ನು ಹಾಕಿಕೊಂಡು ತೊಳೆಯಲು ಹೊರಗಡೆ ಹೋದನು. ಹೋಗುತ್ತಾ "ಸ್ವಲ್ಪ ಎಣ್ಣೆ ತಾನೇ ಹೆಚ್ಚಾದುದು? ಇದರಿಂದ ಯಾರಿಗೂ ಏನೂ ಕೆಡಕಿಲ್ಲ" ಎಂದನು.

ಅಡಿಗೆಯವನು ತಿರಸ್ಕಾರದಿಂದ, ಮೇಲಕ್ಕೆ ಎದ್ದು ಬಾಂಡಲೆಯಿಂದ ಸ್ವಲ್ಪ ಎಣ್ಣೆಯನ್ನು ತೆಗೆದು ಸೀಸೆಗೆ ಹಾಕಿದನು. ಅನಂತರ ಅತ್ಯಾಯಾಸದಿಂದ ಏದುತ್ತಾ ಗೋಡೆಯನ್ನು ಹಿಡಿದುಕೊಂಡು ಮೆಲ್ಲಗೆ ಹಾಸಿಗೆಗೆ ಬಿದ್ದನು.

ಗುಹೆಯ ಅಡಿಗೆಮನೆಯ ಹೊರಗಡೆ ಗೆಳೆಯರೆಲ್ಲಾ ಊಟಮಾಡುತ್ತಾ ಕುಳಿತಿದ್ದರು. ಸಿಯೊಕ್ವಿಯು ಅನ್ನವನ್ನು ತೆಗೆದುಕೊಂಡು ಹೋಗಲು, ಕೈಯಲ್ಲಿ ತಟ್ಟೆಯನ್ನು ಹಿಡಿದುಕೊಂಡು ಒಳಕ್ಕೆ ಬಂದನು. ಅಡಿಗೆಯವನು ಅವನನ್ನು ತಡೆದು "ಸಿಯೋಕ್ವಿ ತಡೆ. ನಾನು ತಂದು ಬಡಿಸುತ್ತೇನೆ" ಎಂದು ಹೇಳಿ ಸ್ವಲ್ಪ ಹೊತ್ತಿನಲ್ಲಿ ಅನ್ನವನ್ನೆಲ್ಲಾ ಚೌಕವಾಗಿ ಕತ್ತರಿಸಿ ಗಂಟಲು

ಕಟ್ಟಿದುದರಿಂದ ಸಣ್ಣದನಿಯಲ್ಲಿ ನಗುತ್ತಾ "ಗೆಳೆಯರೇ ಅಡಿಗೆ ಮಾಡುವುದರಲ್ಲಿ ನೀವೆಲ್ಲಾ ನನಗೆ ಸಹಾಯಮಾಡಿದ್ದೀರಿ. ನಿಮ್ಮ ಉಪಕಾರವನ್ನು ಸ್ಮರಿಸುತ್ತೇನೆ-ಇವತ್ತು ಅನ್ನವಂತೂ ಬಹಳ ಚೆನ್ನಾಗಿದೆ. ಅದರ ವಾಸನೆ ಬಹುಹಿತವಾಗಿದೆ. ಈ ಕಾಣಿಕೆಯನ್ನು ಸ್ವೀಕರಿಸಿ" ಎಂದು ಎಲ್ಲರಿಗೂ ಒಂದೊಂದು ಚೂರು ಅನ್ನವನ್ನು ಬಡಿಸಿದನು.

**(೪)**

ಗುಮಾಸ್ತನು ಮಾರ್ಕೆಟ್ಟಿನಿಂದ ಎರಡು ಹಂದಿಗಳನ್ನೂ ಹದಿನೈದು ಕೋಳಿಮರಿಗಳನ್ನು ತೆಗೆದುಕೊಂಡು ಬಂದನು. ಅಡಿಗೆಯವನನ್ನು ಕುರಿತು "ಊಟದಲ್ಲಿ ಮಿಕ್ಕುದನ್ನು ಎಸೆಯಬೇಡ. ಹಂದಿಗಳಿಗೆ ಹಾಕು" ಎಂದನು.

ಅಡಿಗೆಯವನು "ಆಗಲಿ" ಎಂದು ತಲೆಯಲ್ಲಾಡಿಸಿದನು.

ಗುಡ್ಡದ ಬುಡದಲ್ಲಿ ತಿರುಗಾಡುತ್ತಿದ್ದ ಹಂದಿಗಳನ್ನು ಗುಮಾಸ್ತನು ನೋಡಿದನು. ಆಗಾಗ್ಗೆ ಒಂದು ಎರಡು ಧೈರ್ಯಶಾಲಿಗಳಾದ ಕಪ್ಪು ಹಕ್ಕಿಗಳು ಅವುಗಳ ಬೆನ್ನುಗಳ ಮೇಲೆ ಕುಳಿತುಕೊಳ್ಳುತ್ತಿದ್ದುವು. ಕೋಳಿಮರಿಗಳು ಆಹಾರವನ್ನು ಹುಡುಕುತ್ತಾ ಮುದುಕಿಯರಂತೆ ಮುಂದಕ್ಕೂ ಹಿಂದಕ್ಕೂ ತಿರುಗುತ್ತಿದ್ದವು. ಅದನ್ನು ನೋಡಿ ಅವನಿಗೆ ಬಹಳ ವಿನೋದವಾಯಿತು. ಅವನು ನಕ್ಕಾಗಲೆಲ್ಲಾ ಅವನ ಮೀಸೆ ಎದ್ದು ನಿಲ್ಲುತ್ತಿದ್ದಿತು. ಹಂದಿಗಳ ಹತ್ತಿರಕ್ಕೆ ಹೋಗಿ ಕಪ್ಪು ಹಕ್ಕಿಗಳನ್ನು ಹೆದರಿಸಿದನು. ಹಂದಿಗಳನ್ನು ಸ್ವಲ್ಪ ಮುದ್ದಾಡೋಣವೆಂದು ಅವುಗಳ ಹತ್ತಿರಕ್ಕೆ ಹೋಗಲು ಅವು ಗುರುಗುಟ್ಟುತ್ತಾ ಗುಡ್ಡದ ಕಡೆಗೆ ಓಡಿಬಿಟ್ಟವು. ಗುಮಾಸ್ತನು "ಜಪಾನರನ್ನು ಸೋಲಿಸಬೇಕಾದರೆ ನಮ್ಮ ಪದಾರ್ಥಗಳ ತಯಾರಿಯನ್ನು ಹೆಚ್ಚಿಸಬೇಕೆಂದು" ಗೊಣಗುಟ್ಟಿದನು.

ಅನಂತರ ಗುಮಾಸ್ತನು ಮೊದಲು ದಿವಸ ಮಿಕ್ಕಿದ್ದ ಅನ್ನವನ್ನು ಒಂದು ಮಡಕೆಗೆ ಹಾಕಿ ಹಂದಿಗಳು ಸ್ವಲ್ಪ ದೂರ ಹೋಗಿದ್ದರೂ ಲೊಲೋ ಎಂದು ಕರೆದನು.

ಅವನ ಧ್ವನಿಯನ್ನು ಕೇಳಿ ಹಂದಿಗಳು ಹಿಂದಕ್ಕೆ ಬಂದು ಮಡಕೆಯಲ್ಲಿ ತಲೆಗಳನ್ನಿಟ್ಟು ಸದ್ದು ಮಾಡುತ್ತಾ ಅನ್ನವನ್ನು ತಿನ್ನತೊಡಗಿದುವು. ಅನಂತರ ಗುಮಾಸ್ತನು ಮಡಕೆಯನ್ನು ತೊಳೆದಿಟ್ಟು, ಗುದ್ದಲಿಯನ್ನು ತೆಗೆದುಕೊಂಡು ಗುಡ್ಡದ ಮೇಲಕ್ಕೆ ಹೋದನು.

ಅಡಿಗೆಯವನು ಖಾಯಿಲೆ ಬಿದ್ದ ಮರುದಿನ, ಮುಖಂಡನು ಡಾಕ್ಟರರನ್ನು ಕರೆಸಲು ಒಬ್ಬ ಆಳನ್ನು ಕಳುಹಿಸಿದನು. ಅಡಿಗೆಯವನಿಗೆ ಅದು ಕೇಳಿಸಿತು. ಅವನು "ಮುಖಂಡನೇ ಡಾಕ್ಟರು

ಬೇಡ. ಯಾಕೆ ಹಿಂಸೆ?" ಎಂದನು. ಮುಖಂಡನು ಒಳಗೆ ಬಂದು "ಔಷಧಿಯಿಂದ ಬೇಗ ಗುಣವಾಗುತ್ತದೆ. ಅದಕ್ಕಾಗಿಯೇ ವೈದ್ಯನಿಗೆ ಹೇಳಿಕಳುಹಿಸಿದೆ" ಎಂದನು.

ಅಡಿಗೆಯವನು "ಯಾವಾಗ ಕಾಯಿಲೆ ಬಿದ್ದರೂ ವೈದ್ಯರನ್ನು ನೋಡದಿರುವುದೇ ನನ್ನ ಪದ್ಧತಿ. ಪಾಶ್ಚಾತ್ಯ ರೀತಿಯಲ್ಲಿ ತಯಾರಾದ ವೈದ್ಯನಿಂದ ನಮಗೇನೂ ಪ್ರಯೋಜನವಿಲ್ಲ. ನನಗೆ ಆಗಿರುವುದೇನೆಂಬುದು ನನಗೆ ಗೊತ್ತು. ಸ್ವಲ್ಪ ಹೊತ್ತಿಗೆ ಮುಂಚೆ ಗುಮಾಸ್ತನು ಶುಂಠಿಕಷಾಯವನ್ನು ಮಾಡಿಕೊಟ್ಟನು. ನಾಳೆಯ ಹೊತ್ತಿಗೆ ಹುಷಾರಾಗುತ್ತೇನೆ"

"ಡಾಕ್ಟರು ನಿನ್ನನ್ನು ನೋಡಿದರೆ ನಿನಗೆ ಬೇಗ ಗುಣವಾಗುವುದು."

"ಅದೇನೂ ನಿಯಮವಲ್ಲ. ಪಾಶ್ಚಾತ್ಯ ವೈದ್ಯವನ್ನು ಕಲಿತವರು ಶಸ್ತ್ರಚಿಕಿತ್ಸೆಯನ್ನು ಮಾತ್ರ ಮಾಡಬಲ್ಲರು. ಅವನ್ಯಾರನ್ನೂ ನಾನು ನೋಡುವುದಿಲ್ಲ."

ಮುಖಂಡನು "ಹಾಗಾದರೆ ಆಳು ಡಾಕ್ಟರರ ಹತ್ತಿರಕ್ಕೆ ಹೋಗುವುದು ಬೇಡ" ಎಂದು ಹೇಳಿ ಗುದ್ದಲಿಯ ಆಕಾರದ ತನ್ನ ಮುಖವನ್ನು ಅಡಿಗೆಯವನ ಕಡೆಗೆ ತಿರುಗಿಸಿ "ನಿನಗೆ ತಿನ್ನುವುದಕ್ಕೆ ಏನು ಬೇಕು?" ಎಂದನು.

"ಮುಖಂಡನೆ, ಏನೂ ಬೇಡ. ಎರಡು ಊಟ ಬಿಟ್ಟರೆ ನನಗೆ ಗುಣವಾಗುವುದು"

"ಕುಡಿಯುವುದಕ್ಕೆ ಸ್ವಲ್ಪ ನೀರನ್ನು ಕುದಿಸಿ ಕೊಡಲೇ?"

"ದಯವಿಟ್ಟು....ಬೇಡ. ಗುಮಾಸ್ತನು ಬರುವವರೆಗೆ ಕಾಯುತ್ತೇನೆ" ಹೀಗೆ ಹೇಳುತ್ತಾ ಅವನು ಬಾಯಾರಿಕೆಗಾಗಿ, ನಾಲಿಗೆಯಿಂದ ತುಟಿಗಳನ್ನು ನೆಕ್ಕಿದನು.

ಮುಖಂಡನು "ನಾನು ಕುದಿಸಿದರೂ ಒಂದೇ, ಆತನು ಕುದಿಸಿದರೂ ಒಂದೇ" ಎಂದು ಹೇಳಿ ಒಲೆಯ ಹತ್ತಿರಕ್ಕೆ ಹೋದನು.

ಅಡಿಗೆಯವನು ಹಾಸಿಗೆಯ ಮೇಲೆ ಎದ್ದುಕುಳಿತು, ಗೋಡೆಗೆ ಒರಗಿಕೊಂಡು ನೀರನ್ನು ಕುಡಿದನಂತರ ಮುಖಂಡನು, ಮಣ್ಣಿನ ಮಂಚದ ಬಳಿಗೆ ಬಂದು ಅವನೊಂದಿಗೆ ಮಾತನಾಡಲು ಪ್ರಾರಂಭಿಸಿದನು.

"ಗೆಳೆಯ ಅಡಿಗೆಯವನೆ, ಜಪಾನರ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು? ಅವರು ಒಳ್ಳೆಯವರೆ, ಕೆಟ್ಟವರೆ?"

"ಮುಖಂಡನೇ, ಕೆಟ್ಟವರೆ; ಸಂದೇಹವೇನು? ಆ ಪ್ರಶ್ನೆಯೇ ಆವಶ್ಯಕವಿಲ್ಲ. ನೀನು ನಿಜವಾಗಿಯೂ...."

“ಹಾಗಾದರೆ ಅವರನ್ನು ಚೀನಾದಿಂದ ಓಡಿಸುವುದು ನಮ್ಮೆಲ್ಲರ ಆಸೆಯಲ್ಲವೆ?”

“ಅದನ್ನು ಹೇಳಬೇಕಾದುದೇ ಇಲ್ಲ. ಅವರನ್ನು ಓಡಿಸಲೇಬೇಕು. ಓಡಿಸದೆ ಇದ್ದರೆ ನಮಗೆ ಖಂಡಿತ ಶಾಂತಿಯಿಲ್ಲ. ಕೆಲವು ತಿಂಗಳುಗಳಾದ ಮೇಲೆ, ನನ್ನನ್ನು ಜಪಾನರ ಮೇಲೆ ಕಾದಾಡಲು ಯುದ್ಧಭೂಮಿಗೆ ಕಳುಹಿಸಬೇಕೆಂದು ಮುಖ್ಯ ಕಾರ್ಯದರ್ಶಿಯನ್ನು (Secretary General) ಕೇಳಿರುವುದಾಗಿ ನಿನಗೆ ಹೇಳಲಿಲ್ಲವೆ.”

“ನಿನ್ನಷ್ಟು ವಯಸ್ಸಾದವನು ಹಿಂದೆ ಇರುವುದು ಸರ್ವೋತ್ತಮ. ಹಿಂದೆ ನಿಂತು ನೀನು ಜಪಾನರ ಮೇಲೆ ಅಷ್ಟೇ ಜೋರಾಗಿ ಕಾದಾಟವನ್ನು ಮಾಡಬಹುದು.”

ಅಡಿಗೆಯವನಿಗೆ ಏನೂ ತೋಚಲಿಲ್ಲ. ಆದರೆ ಅವನು ಮುಖಂಡನ ಕಡೆಗೆ ಬೀರಿದ ನೋಟದಲ್ಲಿ, ಅವನ ಮಾತನ್ನು ತಾನು ನಂಬಲಿಲ್ಲವೆಂಬುದು ವ್ಯಕ್ತವಾಗುತ್ತಿದ್ದಿತು. ಆದರೆ ಅವನು ಬಾಯಲ್ಲಿ ಏನನ್ನೂ ಹೇಳಲಿಲ್ಲ. ಮುಖಂಡನು ಮುಂದುವರಿಸಿದನು:

“ಉದಾಹರಣೆಗೆ ನಾವು ವ್ಯವಸಾಯ ಮಾಡುತ್ತೇವೆ. ಮುಂದೆ, ಯುದ್ಧಭೂಮಿಯಲ್ಲಿರುವ ಯೋಧರಿಗೆ ಆಹಾರವನ್ನು ಕಳುಹಿಸುತ್ತೇವೆ. ಅವರ ಹೊಟ್ಟೆಗಳು ತುಂಬಿದ್ದರೆ ಅವರು ಜಪಾನರ ಮೇಲೆ ಹೆಚ್ಚು ಸಾಹಸದಿಂದ ಯುದ್ಧ ಮಾಡಬಲ್ಲರು. ಅದು ನಾವೇ ಜಪಾನರ ಮೇಲೆ ಯುದ್ಧ ಮಾಡಿದಂತೆ ಆಯಿತು. ಅದು ಸರಿಯೋ ಅಲ್ಲವೊ?”

ಮುಖಂಡನು ಹೇಳಿದ ಮಾತನ್ನು ಅಡಿಗೆಯವನು ಮನಸ್ಸಿನಲ್ಲಿಯೇ ತಿರುವಿಹಾಕಿದನು. “ಕಾಡನ್ನು ಯಾಕೆ ಉಳಬೇಕೆಂದು ನಾನು ಅಷ್ಟು ದಿವಸಗಳಿಂದಲೂ ಯೋಚಿಸುತ್ತಿದ್ದೆ. ಜಪಾನರನ್ನು ಸೋಲಿಸುವುದೇ ಅದರ ಉದ್ದೇಶ. ಇದು ನನಗೆ ಮೊದಲು ತಿಳಿಯಲಿಲ್ಲ” ತನ್ನ ಅಜ್ಞಾನವನ್ನು ಕಂಡು ಅವನಿಗೇ ನಾಚಿಕೆಯಾಯಿತು. ಆದರೂ ಅದನ್ನು ಹೊರಕ್ಕೆ ತೋರಿಸದೆ, ತನಗೆ ಅದು ಹಿಂದಲಿಂದಲೂ ತಿಳಿದಿದ್ದವನಂತೆ ಅವನು “ಹೌದು ಅದು ಸರಿ” ಎಂದನು.

“ಹಾಗಾದ ಮೇಲೆ ವ್ಯವಸಾಯ ಮಾಡಲು ನೀನು ಯಾಕೆ ಹಿಂತೆಗೆಯುತ್ತೀಯೆ?”

ಮುಖಂಡನು ಪ್ರಶ್ನೆಯನ್ನು ಆ ರೀತಿ ಹಾಕುವನೆಂದು ಅವನು ಎಣಿಸಲಿಲ್ಲ. ಅವನಿಗೆ ಸ್ವಲ್ಪ ಕೋಪ ಬಂತು. “ಮುಖಂಡನೆ, ನನಗೆ ಕೆಲಸ ಹೆಚ್ಚು. ೨೦-೩೦ ಜನರ ಆಹಾರದ ಮೇಲ್ವಿಚಾರಣೆಯನ್ನು ನಾನು ನೋಡಿಕೊಳ್ಳಬೇಕು.”

"ಪ್ರತಿದಿನವೂ ಮಧ್ಯಾನ್ಹದ ಮೇಲೆ ನಾಲ್ಕು ಗಂಟೆ ಕೆಲಸ ಮಾಡಿದರೆ ಸಾಕು. ರಾತ್ರಿಯ ಊಟವನ್ನು ತಯಾರಿಸಲು ನಾವೆಲ್ಲ ನಿನಗೆ ಸಹಾಯ ಮಾಡುತ್ತೇವೆ. ನೋಡು, ಎಲ್ಲರೂ ವ್ಯವಸಾಯ ಮಾಡುತ್ತಾರೆ. ನೀನು ಒಬ್ಬ ಮಾತ್ರ ಮಾಡದೆ ಇದ್ದರೆ ಚೆನ್ನಾಗಿ ಕಾಣುವುದಿಲ್ಲ"

ಅಡಿಗೆಯವನು ಏನೂ ಪ್ರತ್ಯುತ್ತರ ಕೊಡಲಿಲ್ಲ. ಅವನು ಸೂರಿನ ಕಡೆ ನೋಡುತ್ತಾ 'ನೀವು ಅಡಿಗೆಯಲ್ಲಿ ನನಗೆ ಸಹಾಯಮಾಡಿದರೆ ನಾನು ಯಾಕೆ ವ್ಯವಸಾಯ ಮಾಡಕೂಡದು? ಹೇಗೂ ಒಬ್ಬ ಮನುಷ್ಯ ಇಬ್ಬರ ಕೆಲಸವನ್ನು ಮಾಡಲಾರ' ಎಂದುಕೊಂಡನು.

ಅವನು "ನೀವು ನಿಜವಾಗಿಯೂ ನನಗೆ ಅಡಿಗೆ ಮಾಡುವುದರಲ್ಲಿ ಸಹಾಯ ಮಾಡುತ್ತೀರಾ?" ಎಂದು ನಂಬಿಕೆಯಿಲ್ಲದ ಧ್ವನಿಯಿಂದ ಕೇಳಿದನು.

"ಹೌದೇ ಹೌದು"

"ಹಾಗಾದ ಮೇಲೆ ಸರಿ"

ಎರಡು ದಿವಸ ಕಳೆದ ಮೇಲೆ, ಅಡಿಗೆಯವನು ಮತ್ತೆ ಆರೋಗ್ಯವಾಗಿ ತನ್ನ ಕೆಲಸದಲ್ಲಿ ತೊಡಗಿದ್ದನು. ಬೆಳಗಿನ ತಿಂಡಿ ಆದ ಮೇಲೆ ತಯಾರಿಯ ಸಮಿತಿಯ ಮುಖ್ಯಸ್ಥನಾದ ಗೆಳೆಯ 'ಲಿ' ಯುವನ್ನು ನೋಡಬೇಕೆಂದು ಅವನು ೬ನೇ ನಂಬರ್ ಗುಹೆಗೆ ಹೋದನು.

"ಗೆಳೆಯ 'ಲಿ' ನಾನೂ ಒಂದು ಭಾಗ ಕಾಡನ್ನು ಉಳುತ್ತೇನೆ" ಗೆಳೆಯ 'ಲಿ'ಯು ಅವನ ಕಡೆ ನೋಡಿ "ಇನ್ನೂ ನಿನಗೆ ಚೆನ್ನಾಗಿ ಗುಣವಾಗಿಲ್ಲ" ಎಂದನು.

"ಓಹೋ! ಗುಣವಾಗಿಯೇ ಇದೆ. ನಾನು ಒಬ್ಬ ಮಾತ್ರ ವ್ಯವಸಾಯ ಮಾಡದೇ ಇರುವುದು ಸರಿಯಲ್ಲ. ನಾನು ಎಂಟು ಮೌ ಉಳುತ್ತೇನೆ. ಜಪಾನರನ್ನು ಸೋಲಿಸಬೇಕಾದರೆ ನಾವು ತಯಾರಿಯನ್ನು ಹೆಚ್ಚಿಸಬೇಕೆಂದು ಮುಖಂಡನು ಹೇಳಿದ್ದಾನೆ."

"ಸರಿ. ನಾಳೆ ಹೊಲದಲ್ಲಿ ಇತರರೊಂದಿಗೆ ಸೇರಿಕೊ."

ಅಲ್ಲಿಂದ ಮುಂದೆ ಪ್ರತಿದಿನವೂ ಮಧ್ಯಾನ್ಹದ ಮೇಲೆ ಅವನು ಕೆಲಸಗಾರರೊಂದಿಗೆ ವ್ಯವಸಾಯಕ್ಕೆ ಸೇರುತ್ತಿದ್ದನು. ಸಾಯಂಕಾಲದ ಊಟವನ್ನು ಬಡಿಸಿಯಾದಮೇಲೂ ಅವನು ಹೊಲಕ್ಕೆ ಹೋಗಿ ಒಬ್ಬನೇ ಗುದ್ದಲಿ ಕೆಲಸ ಮಾಡುತ್ತಿದ್ದನು. ತನಗಿಂತ ಮುಂಚೆ ಕೆಲಸವನ್ನು ಪ್ರಾರಂಭಿಸಿದವರ ಜತೆಗೆ ಬರಬೇಕೆಂಬುದೇ ಅವನ ಉದ್ದೇಶವಾಗಿತ್ತು.

ಅವನ ಗುದ್ದಲಿ ಏಟು ಭೂಮಿಗೆ ಬಿದ್ದ ಕೂಡಲೇ ಹುಲ್ಲಿನ ಬೇರಿನೊಂದಿಗೆ ದಪ್ಪ ದಪ್ಪ ಹೆಂಟೆ ಏಳುತ್ತಿದ್ದಿತು. ಅವನ ಬೂಟ್ಸು ಮಣ್ಣಿನಿಂದ ಪೂರ್ಣವಾಗಿ ಮುಚ್ಚಿದ್ದಿತು. ಅವನ ಮೈಯೆಲ್ಲಾ

ಪೂರ್ಣವಾಗಿ ಬೆವತಿತು. ಬೆವರಿನಿಂದ ಶೀತವಾಗಿದ್ದ ಒಳಗಿನ ಬಟ್ಟೆಗಳು ತಣ್ಣಗಾದವು. ಗಟ್ಟಿಯಾಗಿ ಉಸಿರುಬಿಡುತ್ತಾ ಅವನು, ಮೇಲೆ ಧರಿಸಿದ್ದ ಸೈನಿಕನ ಉಡುಪನ್ನು (Army uniform) ತೆಗೆದುಹಾಕಿದನು. ಜೇಬಿನಿಂದ ಒಂದು ಕುರಿಯ ಮೂಳೆಯ ಹೊಗೆಕೊಳವೆಯನ್ನು ತೆಗೆದು ಎರಡು ಸಲ ಸೇದಿ, ಗುಡ್ಡಗಳ ಹಿಂದೆ ಮರೆಯಾಗುತ್ತಿದ್ದ ಸೂರ್ಯನನ್ನು ನೋಡಿದನು. ಗುಡ್ಡದ ಬುಡದಲ್ಲಿದ್ದ ಯೆನ್ ನದಿಯು, ಅಂತರಿಕ್ಷದಲ್ಲಿ ಕಾಣುತ್ತಿದ್ದ ಕೇಸರಿಬಣ್ಣದ ಮೇಘಗಳ ಪ್ರತಿಬಿಂಬವನ್ನು ತಳೆದು ರಕ್ತದಂತೆ ಕೆಂಪಾಗಿ ತೋರುತ್ತಿದ್ದಿತು. ನದಿಯು ಸದ್ದು ಮಾಡುತ್ತಾ ಹರಿಯುತ್ತಿದ್ದಿತು. ಬಯಲೂ ಬೆಟ್ಟದ ತಪ್ಪಲೂ ಅದರ ಧ್ವನಿಯನ್ನು ನೂರುಮಡಿಯಾಗಿ ಹೊರಕ್ಕೆ ಬಿಡುತ್ತಿದ್ದುವು.

ಕತ್ತಲೆಯಾಗುತ್ತಿರುವುದನ್ನು ಕಂಡು ಅವನು ಬೇಗನೆ ತನ್ನ ಹೊಗೆ ಕೊಳವೆಯನ್ನು ಜೇಬಿಗೆ ಇಟ್ಟುಕೊಂಡು, ಕೈಗೆ ಉಗಿದುಕೊಂಡು ಕೈಯನ್ನು ತಿಕ್ಕಿ ಮತ್ತೆ ಗುದ್ದಲಿಯನ್ನು ಮೇಲಕ್ಕೆ ಎತ್ತಿದನು.

ವ್ಯವಸ್ಥಾಪಕನು (Business manager) ಗವಿಯ ಬಾಗಿಲಿನಲ್ಲಿ ನಿಂತುಕೊಂಡು "ಗೆಳೆಯ ಅಡಿಗೆಯವನೇ, ಆಗಲೇ ನೀನು ಹೊಲದಲ್ಲಿ ಕೆಲಸ ಮಾಡಿ ಆಯಿತಲ್ಲಾ? ಈಗ ಮತ್ತೆ ಒಬ್ಬನೇ ಯಾಕೆ ಮಾಡುತ್ತಿದ್ದೀಯೆ? ಹೊತ್ತಾಯಿತು. ಮುಗಿಸು" ಎಂದು ಕೂಗಿದನು. ಅಡಿಗೆಯವನು ಗುಡ್ಡದ ಮೇಲಿನಿಂದ ಕೆಳಕ್ಕೆ ನೋಡುತ್ತಾ "ಇಲ್ಲ. ಈ ಹೊಲ ಉತ್ತು ಮುಗಿಸಬೇಕು" ಎಂದು ತಾನು ಅಗೆಯುತ್ತಿದ್ದ ಭಾಗವನ್ನು ತೋರಿಸಿದನು.

"ನಾಳೆ ಮಾಡಬಹುದು."

"ಇಲ್ಲ. ನಾನು ತಯಾರಿಯಲ್ಲಿ ತೊಡಗಿದ್ದೇನೆ."

ಅಡಿಗೆಯವನು ಮತ್ತೆ ಮತ್ತೆ ಗುದ್ದಲಿಯಲ್ಲಿ ಬಾರಿಸುತ್ತಿದ್ದನು. ಅವನು ಗುಡ್ಡದಿಂದ ಕೆಳಕ್ಕೆ ಬರಲು ಪ್ರಾರಂಭಿಸುವ ವೇಳೆಗೆ ಸಂಧ್ಯೆಯ ಹೆಜ್ಜೆಯ ಗುರುತು ಗುಡ್ಡದ ಎಲ್ಲಾ ಕಡೆಗೂ ಪಸರಿಸಿತ್ತು. ಸುತ್ತಿ ಸುತ್ತಿ ಹೋಗುತ್ತಿದ್ದ ಆ ದಾರಿಯಲ್ಲಿ ದಾರಿತಪ್ಪದೆ ಹೋಗಬೇಕಾದರೆ ಯಾರಿಗಾದರೂ ಕಷ್ಟವಾಗುತ್ತಿದ್ದಿತು.

“ಇಲ್ಲಿಂದ ಬೀಜ ಬಿತ್ತುವುದು ಇನ್ನು ಒಂದು ತಿಂಗಳು ಮಾತ್ರ. ಸೈನ್ಯದವರೂ, ಇತರ ಕೆಲವು ಸರ್ಕಾರಿ ಸಂಸ್ಥೆಗಳೂ ಸ್ಕೂಲುಗಳೂ ಹೊರತು ಉಳಿದವರೆಲ್ಲಾ ಈ ಕಾಡನ್ನು ನಾಡು ಮಾಡುವ ಏರ್ಪಾಡಿನಲ್ಲಿ ಹಿಂದೆ ಇದ್ದಾರೆ. ಆದುದರಿಂದ ಮಾರ್ಚ ೨೦ನೇ ತಾರಿಖಿನಿಂದ ಏಪ್ರಿಲ್ ೫ರ ವರೆಗೆ ತಯಾರಿ ಅಭಿವೃದ್ಧಿಯ ಕಾಲವಾಗಿ (Production onslought) ತೀರ್ಮಾನಿಸಿದೆ”

ಮೇಲಿನ ಹಸ್ತಪತ್ರಿಕೆಯು ಎಲ್ಲರನ್ನೂ ತಯಾರಿಯಲ್ಲಿ ಮುಳುಗಿಸಿತು. ತಯಾರಿ ಸಮಿತಿಯ ಅಪ್ಪಣೆಯಂತೆ ಮಾರ್ಚಿ ೨೦ ರಿಂದ ೨೭ರ ವರೆಗೆ ತಯಾರಿಯ ವಾರವಾಗಿ ತೀರ್ಮಾನಿಸಿದ್ದರು. ಕಾಡನ್ನು ನಾಡಾಗಿ ಮಾಡುವುದನ್ನು ಒಂದು ವಾರದೊಳಗೆ ಮುಗಿಸಬೇಕೆಂದೂ ಪ್ರತಿಯೊಬ್ಬರೂ ನಿತ್ಯ ೮ ಗಂಟೆ ಕೆಲಸ ಮಾಡಬೇಕೆಂದೂ ತೀರ್ಮಾನವಾಗಿತ್ತು. ಅಡಿಗೆಯವನ ಕೆಲಸವೊ? ಪ್ರತಿಯೊಬ್ಬರೂ ನೀರು ಹೊರುವುದರಲ್ಲೂ ಸೌದೆ ಕಡಿಯುವುದರಲ್ಲೂ, ನೀರನ್ನು ಕುದಿಸಿ ಆಹಾರವನ್ನು ಸಿದ್ಧಮಾಡುವುದರಲ್ಲೂ ಎಲ್ಲರೂ ಅಡಿಗೆಯವನಿಗೆ ಸಹಾಯಕರಾದರು. ಮಧ್ಯಾನ್ಹದ ಊಟವಾದಮೇಲೆ ಕೆಲಸ ಮಾಡುವುದಕ್ಕೆ ಮುಂಚೆ ೧ ಗಂಟೆ ಎಲ್ಲರೂ ಸುಧಾರಿಸಿಕೊಳ್ಳುತ್ತಿದ್ದರು.

ರಾಷ್ಟ್ರೀಯ ರಕ್ಷಣೆಯ ಕೊಠಡಿಯಲ್ಲಿ ಒಂದು ವ್ಯಂಗ್ಯಚಿತ್ರವು ನೇತುಬಿದ್ದಿದ್ದಿತು. ಅದರಲ್ಲಿ ಒಂದು ಆಕಾಶವಿಮಾನವೂ ಒಂದು ಆಮೆಯೂ ಚಿತ್ರಿತವಾಗಿದ್ದುವು. ಕೆಳಗೆ ಸಣ್ಣ ಅಕ್ಷರದಲ್ಲಿ “ಗೆಳೆಯರೇ! ಆಕಾಶ ವಿಮಾನದಲ್ಲಿ ಜಾಗಕ್ಕಾಗಿ ಹೋರಾಡಿ. ಆಮೆಗಳಾಗಿರಬೇಡಿ. ಕಾಡನ್ನು ನಾಡು ಮಾಡುವುದರಲ್ಲಿ ಒಂದಕ್ಕೆ ಎರಡಾಗಿ ಶ್ರಮಿಸಿ. ಈ ವಾರದಲ್ಲಿ ಯಾರು ಬೇಗ ಮುಗಿಸುತ್ತಾರೋ ಅವರೇ ನಮ್ಮ ಕಾರ್ಯಧೀರರು. (Working heroes)”

ಮಂಜು ಮುಸುಕಿದ ಬೆಳಿಗ್ಗಿನಿಂದ ಹಿಡಿದು ಮುಳುಗುತ್ತಿದ್ದ ಸೂರ್ಯನು ಪಶ್ಚಿಮದ ಬೆಟ್ಟಗಳ ತುದಿಗೆ ’ಹೋಗಿಬರುತ್ತೇನೆಂದು’ ಮುತ್ತು ಕೊಡುವವರೆಗೆ ಗೆಳೆಯರೆಲ್ಲಾ ಬಯಲಿನಲ್ಲಿ ಕೆಲಸಮಾಡುತ್ತಲೇ ಇದ್ದರು.

ಮಾರ್ಚಿ ೨೭ರ ಮಧ್ಯಾನ್ಹವಾಯಿತು. ಊಟವಾದ ಮೇಲೆ ಎಲ್ಲರೂ ನೆಳಲಿನಲ್ಲಿ ನಿದ್ರಿಸಿ ವಿಶ್ರಮಿಸಿಕೊಳ್ಳುತ್ತಿದ್ದರು. ಎಲ್ಲರೂ ಬೂದುಬಣ್ಣದ ಯೂನಿಫಾರಂ ಉಡುಪು ಧರಿಸಿದ್ದರು. ಅವರ ಗೊರಕೆ ಗುಡ್ಡದ ಮೇಲೆಲ್ಲಾ ಪ್ರತಿಧ್ವನಿತವಾಗುತ್ತಿದ್ದಿತು.

ತಯಾರಿ ಬಾಬಿನ ಗೆಳೆಯ ’ಲಿ’ ಯುವೂ, ಮುಖಂಡನೂ ವಿಶ್ರಾಂತಿಯನ್ನು ತೆಗೆದುಕೊಳ್ಳಲಿಲ್ಲ. ಒಂದು ಸಣ್ಣ ನೂಲಿನಿಂದ ಅವರು ಭೂಮಿಯನ್ನು ಅಳೆಯುತ್ತಿದ್ದರು.

“ಇನ್ನು ೧೨ ಮೌ ಅಗಬೇಕು” ಎಂಬುದಾಗಿ ಗೆಳೆಯ ’ಲಿ’ ಯುವು ಮುಖಂಡನಿಗೆ ಹೇಳಿದನು.

“ಇವತ್ತೆ ನಾವು ಮುಗಿಸಬಹುದೆಂದು ಕಾಣುತ್ತೆ”

ಗೆಳೆಯ ’ಲಿ’ಯುವು “ನಮಗೆ ೭ ದಿನದ ಅವಕಾಶವಿದ್ದಿತು. ಆದರೂ ನಾವು ಆರೇ ದಿನದಲ್ಲಿ ಮುಗಿಸುತ್ತಿದ್ದೇವೆ” ಹೀಗೆ ಹೇಳಿ ಅವನು ಜೇಬಿನಿಂದ ಗಡಿಯಾರವನ್ನು ತೆಗೆದು ನೋಡಿ “ಇನ್ನೂ ೬ ನಿಮಿಷ ಇದೆ” ಎಂದುಕೊಂಡನು. ಅನಂತರ ಶಿಲ್ಪಿಯನ್ನು (ಸೀಟಿ) ಊದಿ “ಐದು ನಿಮಿಷ. ಆಮೇಲೆ ಮತ್ತೆ ಕೆಲಸಮಾಡಬೇಕು” ಎಂದು ಕೂಗಿದನು.

ಸುಖವಾಗಿ ಮಲಗಿ ನಿದ್ರಿಸುತ್ತಿದ್ದ ಗೆಳೆಯರೆಲ್ಲಾ ಶಿಳ್ಳಿನ ಧ್ವನಿಯನ್ನು ಕೇಳಿ ಎದ್ದರು. ಅವರ ಆಯಾಸಗಳು ಪರಿಹಾರವಾಗಿರಲಿಲ್ಲ. ಆದರೂ ಮೆಲ್ಲಗೆ ಕಣ್ಣು ಹೊಸಕುತ್ತಾ ಎದ್ದು ಕುಳಿತರು.

ಗೆಳೆಯ ’ಲಿ’ಯುವ “ಗೆಳೆಯರೇ ಇನ್ನು ೧೧.೩ ಮೌ ಮಾತ್ರ ಭೂಮಿ ಅಗೆಯಬೇಕಾದುದು ಉಳಿದಿದೆ. ನಾವು ಜೋರಾಗಿ ಕೆಲಸ ಮಾಡಿದರೆ ನಮ್ಮ ಗುರಿಯು ಸಾಧಿಸುತ್ತದೆ. ಗೆಳೆಯರೆ ಕಷ್ಟ ಪಟ್ಟು ಕೆಲಸಮಾಡಿ. ನಾಳೆ ನಾವೆಲ್ಲರೂ ಸುಧಾರಿಸಿಕೊಳ್ಳಬಹುದು.” ಎಂಬುದಾಗಿ ಧೈರ್ಯವನ್ನು ಕೊಟ್ಟನು.

ಗೆಳೆಯ ’ಲಿ’ “ಮೊದಲ ಗುಂಪಿಗೂ ಎರಡನೆಯ ಗುಂಪಿಗೂ ಸ್ಪರ್ಧೆಯುಂಟಾಗಲಿ, ಎಲ್ಲರಿಗೂ ಒಪ್ಪಿಗೆಯೆ?” ಎಂದನು.

ಎಲ್ಲರೂ ಉತ್ಸಾಹದಿಂದ “ಆಗಲಿ” ಎಂದರು.

“ಕೂಗನ್ನು ಕೇಳಿ. ಆಕಾಶವಿಮಾನದಲ್ಲಿ ಆಸನಕ್ಕೆ ಕಾದಾಡಿ.”

“ಆಮೆಗಳಾಗಬೇಡಿ”

“ಯಾರು ಜೋರು, ನೋಡೋಣ?”

ಅಗೆಯುವುದು ಪ್ರಾರಂಭವಾಯಿತು. ಬೇಗ ಬೇಗ ದಪ್ಪ ದಪ್ಪ ಮಣ್ಣಿನ ಹೆಂಟೆಗಳು ಮೇಲೆ ಬಂದವು.

ಅರ್ಧಘಂಟೆಯೊಳಗಾಗಿ ಎರಡನೆಯ ಗುಂಪಿನವರು, ಮೊದಲನೆ ಗುಂಪಿನವರನ್ನು ಬಿಡಿಸಲು ಬಂದರು. ಎಲ್ಲರೂ ಗುದ್ದಲಿ ಹಿಡಿಯಲು ಉತ್ಸಾಹವುಳ್ಳವರಾಗಿದ್ದರು.

ಗುಡ್ಡಗಳ ಮೇಲೆ ಗುದ್ದಲಿಯ ಏಟು ಬಹು ಬಲವಾಗಿ ಸದ್ದಾಗುತ್ತಿದ್ದಿತು. ಆ ಸದ್ದು ಕಣಿವೆಯಲ್ಲಿ ಪ್ರತಿಧ್ವನಿತವಾಗಿ ಅರೆಭಂಡೆಗಳಲ್ಲಿ ಲೀನವಾಗುತ್ತಿದ್ದಿತು.

ಅಗೆಯುತ್ತಿದ್ದ ಬೈಲು ನಿಧಾನವಾಗಿ ವಿಶಾಲವಾಯಿತು. ಸುಟ್ಟ ಹುಲ್ಲಿನ ಪ್ರದೇಶವೆಲ್ಲಾ ಮರೆಯಾಯಿತು. ಅಡಿಗೆಯವನ ಮುಂದೆ ಇದ್ದ ಗೆಳೆಯ 'ಲಿ'ಯು ಅವನಿಗೆ "ಬೇಗ ಬೇಗ" ಎಂದನು.

ಅಡಿಗೆಯವನು "ಸಾಧ್ಯವಿಲ್ಲ. ನನಗೆ ವಯಸ್ಸಾಗುತ್ತಿದೆ. ನಾನು ಇನ್ನೂ ಹುಡುಗನಾಗಿದ್ದಿದ್ದರೆ ಇಷ್ಟು ಹೊತ್ತಿಗೆ ಮುಗಿಸುತ್ತಿದ್ದೆ." ಎಂದು ಹೇಳಿ "ನೀನು ಬೇಗ ಮುಗಿಸುವಿ" ಎಂದನು. ಅವನು ಮಾತನಾಡುವಾಗ ಮೇಲೆ ನೋಡದೆ ಗುದ್ದಲಿಯಿಂದ ಬಲವಾಗಿ ನೆಲಕ್ಕೆ ಹೊಡೆಯುತ್ತಿದ್ದನು.

ಗುಡ್ಡದ ಬುಡದಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿದ್ದ ಎರಡನೆಯ ಗುಂಪಿನ ಕೆಲಸಗಾರರು ರಾಷ್ಟ್ರೀಯ ರಕ್ಷಣೆಯ ಕೊಠಡಿಯ ವ್ಯವಸ್ಥಾಪಕಳಾದ ಶ್ರೀಮತಿ 'ವಾಂಗ್ ಲಿನ್' (Miss Wong Lin Director of the National Salvation Room)ರ ಮುಂದಾಳುತನದಲ್ಲಿ ಹಾಡಲು ಪ್ರಾರಂಭಿಸಿದರು.

"ಕಾಡನ್ನು ನಾಡಾಗಿ ಮಾಡಿ, ಕಾಡನ್ನು ನಾಡಾಗಿ ಮಾಡಿ.

"ನಮ್ಮ ಯೋಧರಿಗೆ ಅನ್ನ ಬೇಕು.

"ಬಟ್ಟೆಯನ್ನು ನೇಯಿರಿ. ಬಟ್ಟೆಯನ್ನು ನೇಯಿರಿ.

"ಯುದ್ಧ ಭೂಮಿಯಲ್ಲಿರುವ ನಮ್ಮ ಯೋಧರು ಬೆಚ್ಚಗಿರಬೇಕು.

"ಅತ್ತಿಗೆ; ಅಜ್ಜಿ

"ನಿಮ್ಮ ಗಂಡ ನಿಮ್ಮ ಮಗ ಇವರ ಯೋಚನೆ ಬಿಡಿ.

"ಗದ್ದೆ ಹೊಲಗಳಲ್ಲೂ ಬಟ್ಟೆಯ ಮಗ್ಗಗಳಲ್ಲೂ ನಾವು ಕೆಲಸ ಮಾಡುತ್ತಿದ್ದರೆ ಸಾಕು.

"ಅನ್ನಬಟ್ಟೆಗಳ ಯೋಚನೆ ಅವರಿಗೆ ಇಲ್ಲದಿದ್ದರೆ ಸಾಕು.

"ಜಪಾನ್ ಪಿಶಾಚಿಗಳನ್ನು ಸೋಲಿಸಿ ಅವರು ಹಿಂದಕ್ಕೆ ಬರುವರು......"

ಹಾಡು ಮುಗಿಯಿತು.

ಗಟ್ಟಿಯಾಗಿ ಸಂತೋಷದಿಂದ ಎಲ್ಲರೂ ಕೂಗಿದರು. "ಮೊದಲಿನ ಗುಂಪಿನವರೇ, ಬೇಗ ಬೇಗ"

ಗುದ್ದಲಿಗಳು ಬೇಗ ಬೇಗ ಮೇಲಕ್ಕೆ ಹೋದವು. ಇನ್ನು ಎಲ್ಲೋ ಒಂದು ಚೂರು ಮಾತ್ರ ಅಗೆಯದ ನೆಲ ಉಳಿದಿದ್ದಿತು. ಎಲ್ಲರೂ ಆನಂದ ಪರವಶರಾಗಿದ್ದರು. ಗುದ್ದಲಿಗಳ ವೇಗ ಬರಬರುತ್ತಾ ಹೆಚ್ಚುತ್ತಿದ್ದಿತು. ಅಡಿಗೆಯವನು ಬೇಗ ಬೇಗ ತನ್ನ ಭಾಗವನ್ನು ಪೂರೈಸುತ್ತಿದ್ದನು.

ಇದ್ದಕ್ಕಿದ್ದಂತೆಯೇ ಗೆಳೆಯ ’ಲಿ’ಯು “ಗೆಳೆಯ ಅಡಿಗೆಯವನು ತನ್ನ ಭಾಗವನ್ನು ಪೂರೈಸಿದ್ದಾನೆ!” ಎಂದು ಕೂಗಿದನು.

ಕೆಲಸ ಮಾಡುತ್ತಿದ್ದವರೂ, ಗುದ್ದಲಿಗಳ ಮೇಲೆ ಊರಿಕೊಂಡು ಸುಧಾರಿಸಿಕೊಳ್ಳುತ್ತಿದ್ದವರೂ ನಗುತ್ತಿದ್ದ ಗೆಳೆಯ ಅಡಿಗೆಯವನ ಕಡೆ ನೋಡಿದರು.

ನಮ್ಮ ದುಡಿಮೆಯ ಧೀರ! ಭಲ ಭಲ! ಗೆಳೆಯ ಅಡಿಗೆಯವನೇ ನಮ್ಮ ದುಡಿಮೆಯ ಧೀರ! (Working Hero) ಎಂದು ಕೂಗಿದರು. ಗೆಳೆಯ ಅಡಿಗೆಯವನಿಗೆ “ಆಕಾಶವಿಮಾನದಲ್ಲಿ ಆಸನ ಸಿಕ್ಕಿತು!”

ಪ್ರತಿಯೊಬ್ಬರೂ ಗುದ್ದಲಿಯನ್ನು ಕೆಳಕ್ಕೆ ಹಾಕಿದರು. ಅಗೆಯುವುದು ನಿಂತಿತು. ಅದರ ಬದಲು ಎಲ್ಲೆಲ್ಲು ಚಪ್ಪಾಳೆಗಳು ಪ್ರಾರಂಭವಾದುವು. ಆ ಧ್ವನಿಯಲ್ಲಿ ನದಿಯ ಜರ ಜರ ಶಬ್ದವೂ ಕೂಡ ಕೇಳಿಸದಂತೆ ಆಗಿತ್ತು.

ಅಡಿಗೆಯವನು ಗುಡ್ಡದ ತುದಿಯಲ್ಲಿ ನಿಂತುಕೊಂಡು, ಜೇಬಿನಲ್ಲಿ ತುರುಕಿದ್ದ ತನ್ನ ಹೊಗೆಗೊಳವೆಯನ್ನು ಮೆಲ್ಲನೆ ಹೊರಕ್ಕೆ ತೆಗೆದನು.

ಗೆಳೆಯರ ಆನಂದದ ಕೋಲಾಹಲವನ್ನೆಲ್ಲಾ ಮೀರಿ ಪದಾರ್ಥಗಳ ತಯಾರಿ ಸಮಿತಿಯ (Production Committee) ಗೆಳೆಯ ’ಲಿ’ ಯುವಿನ ಧ್ವನಿಯು ಕೇಳಿಸಿತು.

“ಅಗೆಯುವುದನ್ನು ಮುಂದುವರಿಸೋಣ. ಮೊದಲು ಗೊತ್ತು ಮಾಡಿದುದಕ್ಕಿಂತ ಇನ್ನೂ ಮುಂದಕ್ಕೆ ಹೋಗೋಣ”

ಅದನ್ನು ಕೇಳಿ ಎಲ್ಲ ಗೆಳೆಯರೂ “ಹಾಗೇ ಆಗಲಿ. ತಯಾರಿ ಸಮಿತಿ ಸದಸ್ಯನ ಮಾತಿನ್ನು ಗೌರವಿಸಲೇಬೇಕು” ಎಂದು ಒಂದೇ ಧ್ವನಿಯಲ್ಲಿ ಕೂಗಿದರು. ಕೂಡಲೆ ಗುದ್ದಲಿಗಳೆಲ್ಲ ಮತ್ತೆ ಮೇಲಕ್ಕೆ ಹೋದವು.

# 'ಹಾವಿನ ಅಯ್ಯ'

ನಮ್ಮ ಹಳ್ಳಿಯ ರಸಿಕರ ಪೈಕಿ ಶೀನಪ್ಪ ಬಹಳ ಮುಖ್ಯನಾದವನು. ಶೀನಪ್ಪನು ಸತ್ತ ಎಮ್ಮೆ ಹೊತ್ತ ಕತೆಯನ್ನು ನಾನು ನಿಮಗೆ ಹಿಂದೆಯೇ ಹೇಳಿದ್ದೇನೆ.[9] ಅದರಿಂದಲೇ ಅವನು ಎಷ್ಟರ ಮಟ್ಟಿನ ಒರಟುಸ್ವಭಾವದವನು ಎಂಬುದನ್ನು ನೀವು ಊಹಿಸಿರಬಹುದು. ಅವನು ಬಾಲ್ಯದಲ್ಲಿ ಕಲ್ಲು ಹೊತ್ತು, ಹೆಗಲು ಮುರಿದುಕೊಂಡ ಕತೆಯನ್ನು ಕೇಳಿದ ಈಚೆಗೆ ಅವನ ವಂಶದ ಇತಿಹಾಸವನ್ನು ಆಮೂಲಾಗ್ರವಾಗಿ ತಿಳಿಯಬೇಕೆಂಬ ಕುತೂಹಲ ನನಗೆ ಹೆಚ್ಚಾಗಿತ್ತು. ಆದರೆ ಮರೆತೆ. ಅವನು ಕಲ್ಲು ಹೊತ್ತ ಸುದ್ದಿಯನ್ನು ನಿಮಗೆ ಹೇಳುತ್ತೇನೆ. ಶೀನಪ್ಪನ ತಂದೆಯವರು ಸಂಪಾದನೆಯಲ್ಲಿ ಮಹಾಶೂರರು. ಹೊರಗೆ ಹೋದವರು ಬರಿಯ ಕೈಯಲ್ಲಿ ಎಂದೂ ಮನೆಗೆ ಬಂದವರಲ್ಲ. ಅವರು ಸ್ವಲ್ಪಮಟ್ಟಿಗೆ ಲೇವಾದೇವಿ ಮಾಡಿದ್ದರು. ಹಣ ಅಥವಾ ಬಡ್ಡಿಯ ವಸೂಲಿಗೆ ಹಳ್ಳಿಗಳಿಗೆ ರೈತರ ಮನೆಗೆ ಹೋದರೆ ಬರುವಾಗ ಹುಲ್ಲು, ತರಕಾರಿ, ಒಂದು ಹಗ್ಗ, ಯಾವುದೂ ಇಲ್ಲದಿದ್ದರೆ ದಾರಿಯಲ್ಲಿ ಒಂದು ಹೊರೆ ಮುತ್ತುಗದ ಎಲೆ, ಪುರಲೆ—ಏನಾದರೂ—ತರುವ ಪದ್ಧತಿ. ಒಂದೊಂದು ವೇಳೆ ರೈತನ ಮನೆಯ ಬಾಗಿಲಿನಲ್ಲಿ ಬಿದ್ದಿರುತ್ತಿದ್ದ ಹುಲ್ಲಿನ ಹೊರೆ ಅಥವಾ ಸೌದೆಯ ಕೊರಡನ್ನು ಹೆಗಲಿನ ಮೇಲೆ ಹಾಕಿಕೊಂಡು ಮನೆಯ ಕಡೆಗೆ ಹೊರಟಾಗ ರೈತನ ಹೆಂಡತಿ ಗಟ್ಟಿಯಾಗಿಯೇ ಬಯ್ಯುತ್ತಿದ್ದಳು. ಆದರೆ ಕೂಡಲೇ ರೈತನು "ನಮ್ಮ ಐಗೋಳು, ಹೋದರೆ ಹೋಗಲಿ" ಎನ್ನು ತ್ತಿದ್ದನು. ಐಗೋಳು ಮಾತ್ರ ಯಾವುದರಿಂದಲೂ ವಿಚಲಿತರಾಗದೆ ಶಾಂತರಾಗಿ ಹುಲ್ಲಿನ ಹೊರೆಯನ್ನು ತಂದು ಹಿತ್ತಿಲಿಗೆ ಹಾಕಿಕೊಳ್ಳುತ್ತಿದ್ದರು.

ಶೀನಪ್ಪನಿಗೆ ಸುಮಾರು ಹದಿನೆಂಟು ವರ್ಷ ವಯಸ್ಸಾಗಿದ್ದಾಗ ಅವನ ತಂದೆಯವರು ಒಂದು ದಿವಸ ಅವನನ್ನು ಮಲ್ಲೇನಹಳ್ಳಿಗೆ, ರೈತನ ಬಳಿಗೆ ಯಾವುದೊ ಜಮೀನು ವಿಚಾರ ಮಾತನಾಡಲು ಕಳುಹಿಸಿದರು. ಮಾತುಕತೆ ಮುಗಿಸಿಕೊಂಡು ಶೀನಪ್ಪನು ಮಧ್ಯಾಹ್ನ ಊಟದ ಹೊತ್ತಿಗೆ ಮನೆಗೆ ಬಂದನು. ಅವನನ್ನು ನೋಡಿ ಅವನ ತಂದೆಯವರು— "ಏನು ಬರಿಯ ಕೈಯಲ್ಲಿ ಬಂದೆಯಾ? ಗಂಡಸು ಹೊರಗೆ ಹೋದಮೇಲೆ ಬರಿಯ ಕೈಯಲ್ಲಿ ಬರುವುದೆಂದರೇನು? ಏನೂ ಸಿಕ್ಕದಿದ್ದರೆ ಒಂದು ಕಲ್ಲನ್ನಾದರೂ ಹೊತ್ತುಕೊಂಡು ಬರಬಾರದೆ? ಬರಿಯ ಕೈಯಲ್ಲಿ ಬರುವವನಿಗೆ

---

[9] 'ನಮ್ಮ ಊರಿನ ರಸಿಕರು' ಎಂಬ ಪುಸ್ತಕದಲ್ಲಿ.

ಲಕ್ಷ್ಮಿ ಒಲಿದಾಳೆಯೇ?" ಎಂದು ಗೊಣಗುಟ್ಟಿದರು. ಐದಾರು ದಿವಸಗಳನಂತರ ಶೀನಪ್ಪನು ಮತ್ತೆ ಮಂಜನಹಳ್ಳಿಗೆ ಹೋಗಬೇಕಾಯಿತು. ಅಲ್ಲೂ ಅವನಿಗೆ ಆ ದಿವಸ ಏನೂ ದೊರೆಯಲಿಲ್ಲ. ಶೀನಪ್ಪ ನಮ್ಮೂರ ಬಾಗಿಲಿನ ವರೆಗೆ ಬಂದ. ಆಗ ಅವನಿಗೆ ಅವರ ತಂದೆಯವರು ಹೇಳಿದ್ದ ಮಾತು ಜ್ಞಾಪಕಕ್ಕೆ ಬಂತು. ಅವನು ಅಲ್ಲಿ ಬಿದ್ದಿದ್ದ ಒಂದು ದೊಡ್ಡ ಕರಿಯ ಕಲ್ಲನ್ನು ಹೆಗಲ ಮೇಲೆ ಹೊತ್ತುಕೊಂಡು ಬಂದು ಮನೆಯ ಬಾಗಿಲಿನಲ್ಲಿ ಹಾಕಿದನು. ಅವನ ತಂದೆಯವರು ಅದನ್ನು ನೋಡಿ ಬಹಳವಾಗಿ ನಕ್ಕರು.

ಶೀನಪ್ಪನ ಪೂರ್ವಿಕರ ಪೈಕಿ ಅವನಿಗೆ ಗೊತ್ತಿದ್ದುದು ಅವನ ಅಜ್ಜಂದಿರಿಂದ ಈಚೆಯವರು. ಅವರಲ್ಲೆಲ್ಲಾ ಅವನ ಚಿಕ್ಕ ಅಜ್ಜಂದಿರು ವಿಚಿತ್ರ ಪುರುಷರು. ಅವರು ಮುಮ್ಮಡಿ ಕೃಷ್ಣರಾಜರ ಬಳಿ ಬಹಳ ಪ್ರಸಿದ್ಧರಾಗಿದ್ದರು. ಪುಳ್ಚಾರಿನವರಾದ ನಾವು ಬಂದೂಕವನ್ನು ಕಂಡ ಒಡನೆಯೇ ಹೆದರುವೆವಾದರೂ ಶೀನಪ್ಪನ ಚಿಕ್ಕ ಅಜ್ಜಂದಿರು ಷಿಕಾರಿಯಲ್ಲಿ ಬಹಳ ಪ್ರಚಂಡರಾಗಿದ್ದರು. ನಮ್ಮ ಊರಿನಲ್ಲಿ ಇವರು ಮತ್ತು ಜೋಡಿದಾರ ರಾಮಯ್ಯಂಗಾರ್ರು ಇಬ್ಬರು ಮಾತ್ರ ಬಂದೂಕವನ್ನು ಹೊಡೆಯುವುದನ್ನು ಕಲಿತಿದ್ದವರು. ನಮ್ಮೂರ ಸುತ್ತ ಇರುವ ಗಿಡಗಳಲ್ಲಿಯೂ ಕಾಡುಗಳಲ್ಲಿಯೂ ಬೇಕಾದಂತೆ ಹುಲಿ, ಚಿರತೆ ಇರುತ್ತವೆ. ಶೀನಪ್ಪನ ಚಿಕ್ಕ ಅಜ್ಜಂದಿರು ಅವುಗಳನ್ನು ಅನೇಕವಾಗಿ ಬಲಿಹಾಕಿದ್ದಾರೆ. ಅವರು ಉಪಯೋಗಿಸಿದ ಹಳೆಯ ಬಂದೂಕವೊಂದು ಈಗಲೂ ಶೀನಪ್ಪನ ಮನೆಯ ಅಟ್ಟದ ಮೇಲೆ ಬಿದ್ದಿದೆ.

ಶೀನಪ್ಪನ ಚಿಕ್ಕ ಅಜ್ಜಂದಿರು ಮುಮ್ಮಡಿ ಕೃಷ್ಣರಾಜ ಒಡೆಯರನ್ನು ನೋಡಿದ ರೀತಿಯೇ ಆ ವಿಚಿತ್ರಪುರುಷನು ದೊರೆಗಳ ಪೂರ್ಣ ಕೃಪೆಗೆ ಪಾತ್ರನಾಗುವಂತೆ ಮಾಡಿತು. ಶೀನಪ್ಪನ ಮನೆತನಕ್ಕೆ ಹಿಂದಿನಿಂದಲೂ ಬಂದ ಅವರ ತೋಟದಲ್ಲಿ ಒಂದು ಹುಣಿಸೆಮರ ಇದೆ. ಅದರಲ್ಲಿ ಒಂದು ಗೇಣಿಗಿಂತ ಉದ್ದವಾದ ಹುಳಿಯಾದ ರಸವತ್ತಾದ ದಪ್ಪನಾದ ಹುಣಿಸೇಕಾಯಿ ಗೊಂಚಲು ಗೊಂಚಲಾಗಿ ಬಿಡುತ್ತದೆ. ಶೀನಪ್ಪನ ಚಿಕ್ಕ ಅಜ್ಜಂದಿರು ಒಂದು ಸಲ ದೊರೆಗಳನ್ನು ನೋಡಬೇಕೆಂದು ನಡೆದುಕೊಂಡೇ ಮೈಸೂರಿಗೆ ಹೋದರು. ಹೋಗುವಾಗ, ತಮ್ಮ ತೋಟದ ಹುಣಿಸೆಯ ಮರದಿಂದ ಬಹಳ ರಸವತ್ತಾದ ಉದ್ದವಾದ ಹತ್ತು ಕಾಯಿಗಳನ್ನು ತಮ್ಮ ಮಡಿ ಚೀಲದಲ್ಲಿ ಕಟ್ಟಿಕೊಂಡು ಹೋಗಿದ್ದರು. ಮೈಸೂರನ್ನು ಮುಟ್ಟಿದ ಮೂರು ದಿವಸದ ಮೇಲೆ ಸರ್ವಸುಲಭರಾದ ಮಹಾರಾಜರನ್ನು ನೋಡುವ ಅವಕಾಶವುಂಟಾಯಿತು. ಮಹಾರಾಜರು ಅರಮನೆಯಲ್ಲಿ ಆಪ್ತಮಿತ್ರರೊಬ್ಬರೊಂದಿಗೆ ಮಾತನಾಡುತ್ತ ಕುಳಿತಿದ್ದರು. ಶೀನಪ್ಪನ ಚಿಕ್ಕ

ಅಜ್ಜಂದಿರು ಮಹಾರಾಜರನ್ನು ಕಂಡು ಆಶೀರ್ವಾದ ಮಾಡಿ ಪಂಚೆಯಲ್ಲಿ ಸುತ್ತಿದ್ದ ಹುಣಿಸೆಗೊನೆಯನ್ನು ತೆಗೆದು ಮಹಾರಾಜರ ಕಡೆಗೆ ನೀಡಿದರು. ಮಹಾರಾಜರ ಸ್ನೇಹಿತರ ಮುಖದ ಮೇಲೆ ಸ್ವಲ್ಪ ಅಸಮಾಧಾನದ ಚಿಹ್ನೆ ತೋರಿತು. ಮಹಾರಾಜರು ಮಾತ್ರ ಆಶ್ಚರ್ಯದಿಂದ ಹುಣಿಸೆಗೊನೆಯನ್ನು ತೆಗೆದುಕೊಂಡು "ಏನಯ್ಯ, ನಿಂಬೆಹಣ್ಣು ಹೂವು ಮುಂತಾದುವನ್ನು ನಮಗೆ ನಮ್ಮ ಪ್ರಜೆಗಳು ತಂದುಕೊಡುತ್ತಿರುವುದು ಪದ್ಧತಿಯಾಗಿದೆ. ಆದರೆ ನೀನೇನಯ್ಯ ಹುಣಿಸೇಗೊನೆಯನ್ನು ತಂದಿದ್ದಿ?" ಎಂದರು. ಶೀನಪ್ಪನ ಚಿಕ್ಕ ಅಜ್ಜಂದಿರು ಸ್ವಲ್ಪವೂ ತಡವರಿಸದೆ "ಈ ಕಾಣಿಕೆಯು ಮಹಾರಾಜರ ಸ್ವೀಕಾರಕ್ಕೆ ಎಲ್ಲಾ ವಿಧದಿಂದಲೂ ಅರ್ಹವಾಗಿದೆ. ಇದಕ್ಕೂ ನಿಂಬೆಹಣ್ಣಿಗೂ ಏನೂ ವ್ಯತ್ಯಾಸವಿಲ್ಲ. ಅದು ದುಂಡಾಗಿದೆ. ಇದು ನೀಳವಾಗಿದೆ. ಹುಳಿಯಲ್ಲಿಯೋ ಇದು ಅದರ ಅಪ್ಪ." ಎಂದು ಹೇಳಿದರು. ಮಹಾರಾಜರಿಗೆ ಅವರ ಮಾತನ್ನು ಕೇಳಿ ಸಂತೋಷವಾಯಿತು. ಶೀನಪ್ಪನ ಚಿಕ್ಕ ಅಜ್ಜಂದಿರನ್ನು ಅವರು ದೃಷ್ಟಿಸಿ ನೋಡಿದರು. ಆಗ ಈತನಿಗೆ ವಯಸ್ಸು ಮೂವತ್ತು ಆಗಿತ್ತು. ಅರೋಗದೃಢಕಾಯವಾದ ದೇಹ. ಕಂಬಿಯ ಪಂಚೆಯನ್ನು ಪಂಚೆಕಚ್ಚೆಯಾಗಿ ಉಟ್ಟಿದ್ದ ರೀವಿ. ಲಕ್ಷ್ಮಣವಾಗಿ ಏರಿಸಿದ ಹನ್ನೆರಡು ನಾಮ. ಮುಖದಲ್ಲಿ ತೋರುತ್ತಿದ್ದ ವೈದಿಕತೆಯ ತೇಜಸ್ಸು. ಎಲೆ ಅಡಿಕೆ ಅಗಿದು ಕೆಂಪಾದ ತುಟಿಗಳು. ತಲೆಜುಟ್ಟಿನಲ್ಲಿ ಘಮಘಮಿಸುತ್ತಿದ್ದ ಹೂವು. ದೇವರ ಪೂಜೆ ಮಾಡುವಾಗ ತೊಡೆದುಕೊಂಡ, ಎದೆಯ ಮೇಲೆ ತೋರುತ್ತಿದ್ದ ಗಂಧ. ಈ ಬಗೆಯ ತೇಜಸ್ಸಿನಿಂದ ಕೂಡಿದ ಆ ವ್ಯಕ್ತಿಯನ್ನೂ ಅವನ ಧೈರ್ಯವನ್ನೂ ಕಂಡು ಮಹಾರಾಜರಿಗೆ ಒಂದು ವಿಧವಾದ ಕುತೂಹಲವುಂಟಾಯಿತು.

ಮಹಾರಾಜರ ಮನಸ್ಸಿಗೆ ಕುತೂಹಲವೂ ಒಳ್ಳೆಯ ಅಭಿಪ್ರಾಯವೂ ಉಂಟಾಗುವುದಕ್ಕೆ ಸಹಾಯವಾಗತಕ್ಕ ಉಡುಪನ್ನು ಶೀನಪ್ಪನ ಚಿಕ್ಕ ಅಜ್ಜಂದಿರು ಧರಿಸುವುದಕ್ಕೆ ಒಂದು ಕಾರಣವಿತ್ತು. ಅವರೇನೋ ಸಾಧಾರಣವಾಗಿ ಲಕ್ಷಣವಾಗಿಯೇ ಉಡುಪನ್ನು ಧರಿಸತಕ್ಕವರು. ಮೈಸೂರನ್ನು ತಲುಪಿದ ಮರುದಿವಸವೇ ಅವರು ತಮ್ಮ ಗುರುಗಳಾದ ಪರಕಾಲಸ್ವಾಮಿಗಳನ್ನು ಕಂಡು ಅವರಿಗೆ ಪ್ರಣಾಮಮೂಾಡಿ ಬರಬೇಕೆಂದು ಪರಕಾಲ ಮಠಕ್ಕೆ ಹೋಗಿದ್ದರು. ಹೋಗುವಾಗ ಮಡಿಯಾದ ಬಟ್ಟೆಯನ್ನು ಉಟ್ಟುಕೊಂಡು ಬರಿ ಹೊಟ್ಟೆಯಲ್ಲಿ ಹೋದರು. ಬಹಳ ನಿಷ್ಠರಾದ ಸ್ವಾಮಿಗಳು ದೇವರ ಪೂಜೆ ಮಾಡಿ ಮುಗಿಸುವ ವೇಳೆಗೆ ಮಧ್ಯಾಹ್ನ ಎರಡು ಗಂಟೆಯಾಯಿತು. ಆ ವೇಳೆಗೆ ಶೀನಪ್ಪನ ಚಿಕ್ಕ ಅಜ್ಜಂದಿರ ಮುಖ ಹಸಿವಿನಿಂದ ಬಳಲಿ ಕಂದಿ ಸುಟ್ಟ ಬದನೆಕಾಯಿಯಂತೆ ಆಗಿತ್ತು. ಮುಖದ ಮೇಲಿನ ನಿರುತ್ಸಾಹವು ಹೊಟ್ಟೆಯಲ್ಲಿ ನಡೆಯುತ್ತಿದ್ದ ಮಹಾಯುದ್ಧವನ್ನು ಹೊರಕ್ಕೆ

ತೋರುತ್ತಿತ್ತು. ಸ್ವಾಮಿಗಳು ವಿಷಯವನ್ನೆಲ್ಲಾ ತಿಳಿದನಂತರ “ನೀನು ನಾಳೆ ಬರಬೇಕಾದರೆ ಚೆನ್ನಾಗಿ ಊಟ ಮಾಡಿಕೊಂಡು ಎಲೆ ಅಡಕೆ ಹಾಕಿಕೊಂಡು ಬಾ. ಅದೇ ಗೃಹಸ್ಥಾಶ್ರಮದ ಧರ್ಮ” ಎಂದು ಅಪ್ಪಣೆಕೊಡಿಸಿದರು. ಮರುದಿವಸ ಶೀನಪ್ಪನ ಚಿಕ್ಕ ಅಜ್ಜಂದಿರು ಈಗ ಮಹಾರಾಜರೆದುರಿಗೆ ಬಂದ ರೀತಿಯಲ್ಲಿ ಉಡುಪನ್ನು ಧರಿಸಲು ಪ್ರಾರಂಭಿಸಿದರು. ರಸಿಕರಾದ ಮಹಾರಾಜರಿಗೆ ಅವರ ಮಾತನ್ನು ಕೇಳಿ ಅವರಲ್ಲಿ ವಿಶ್ವಾಸವುಂಟಾಯಿತು. ಅವರು “ನಮ್ಮ ಆಸ್ಥಾನದಲ್ಲಿ ನೀನು ಕೆಲವು ದಿವಸಗಳು ಇರಯ್ಯ” ಎಂದು ಹೇಳಿ ಶೀನಪ್ಪನ ಚಿಕ್ಕ ಅಜ್ಜಂದಿರನ್ನು ತಮ್ಮ ಬಳಿ ನಿಲ್ಲಿಸಿಕೊಂಡರು.

ಶೀನಪ್ಪನ ಚಿಕ್ಕ ಅಜ್ಜಂದಿರು ನಿತ್ಯವೂ ಅರಮನೆಗೆ ಹೋಗಿ ಬರುತ್ತಿದ್ದರು. ನಮ್ಮ ಊರಿನಲ್ಲಿ ಇದ್ದಾಗ ಅವರಿಗೆ ಕೋವಿಯನ್ನು ಹಿಡಿಯುವುದು ಅಲ್ಪಸ್ವಲ್ಪ ಬರುತ್ತಿದ್ದಿತು. ಆದರೆ ಮೈಸೂರಿಗೆ ಹೋದ ಕೂಡಲೆ ಅವರು ಅರಮನೆಯ ಕೆಲವು ಶಿಪಾಯಿಗಳ ಸ್ನೇಹಮಾಡಿಕೊಂಡು ಕೋವಿ ಹಿಡಿಯುವುದನ್ನು ಚೆನ್ನಾಗಿ ಅಭ್ಯಾಸಮಾಡಿದರು. ಆಗ ಹೆಗ್ಗಡದೇವನ ಕೋಟೆ ತಾಲ್ಲೂಕಿನ ಕಾಡಿನಲ್ಲಿ ಒಂದು ಹುಲಿಯು ದನಗಳಿಗೂ ಜನಗಳಿಗೂ ಬಹಳ ಹಿಂಸೆಯನ್ನು ಕೊಡುತ್ತಿದ್ದಿತು. ಮಹಾರಾಜರ ಅನೇಕ ಶಿಪಾಯಿಗಳು ಅದನ್ನು ಹೊಡೆಯಲಾರದೆ ಹಿಂದಿರುಗಿದ್ದರು. ಶೀನಪ್ಪನ ಚಿಕ್ಕ ಅಜ್ಜಂದಿರು ಬಂದೂಕವನ್ನು ತೆಗೆದುಕೊಂಡು ತಾವೂ ಹುಲಿಯನ್ನು ಹೊಡೆಯುವುದಕ್ಕೆ ಹೋದರು. ಕಾಡಿನ ಒಂದು ಗುತ್ತಿಯ ಮರೆಯಲ್ಲಿ ಹುಲಿಯು ಅವರ ಕಣ್ಣಿಗೆ ಬಿದ್ದಿತು. ಕೂಡಲೇ ಅವರು ಗುರಿಯಿಟ್ಟು ಬಂದೂಕದಿಂದ ಅದಕ್ಕೆ ಹೊಡೆದರು. ಆದರೆ ಹುಲಿಯು ಆಕೂಡಲೆ ಸ್ವಲ್ಪ ಮಗ್ಗುಲಾದುದರಿಂದ ಅದಕ್ಕೆ ಏಟು ಬೀಳಲಿಲ್ಲ. ಆಗ ಅವರು ಉಪಯೋಗಿಸುತ್ತಿದ್ದುದು ಪೂರ್ವ ಕಾಲದ ಬಂದೂಕ. ಒಂದು ಗುರಿ ಹೊಡೆದ ಮೇಲೆ ಮತ್ತೆ ಅದಕ್ಕೆ ಮದ್ದಿನ ಪುಡಿಯನ್ನು ತುಂಬಿ ಬಂದೂಕದ ಕೋಲಿನಿಂದ ಜಡಿದು ಮತ್ತೆ ಹೊಡೆಯಬೇಕಾಗಿದ್ದಿತು. ಏಟು ತಪ್ಪಿದ ಕೂಡಲೆ ಹುಲಿಯು ಕೋಪದಿಂದ ಅವರ ಮೇಲೆ ಏರಿಬಂದಿತು. ಮೃತ್ಯುವಿನಂತೆ ಎದುರಿಗೆ ಬರುತ್ತಿದ್ದ ಹುಲಿಯನ್ನು ಕಂಡು ಶೀನಪ್ಪನ ಚಿಕ್ಕ ಅಜ್ಜಂದಿರಿಗೆ ಬಹಳ ಗಾಬರಿಯಾಯಿತು. ಅಂದಿಗೆ ತಮ್ಮ ಆಯುಸ್ಸು ಮುಗಿಯುತೆಂದು ಅವರು ಹೆದರಿದರು. ಆದರೆ ಹುಲಿಯ ಕೈಯಲ್ಲಿ ಸುಲಭವಾಗಿ ಸಾಯಲು ಅವರಿಗೆ ಇಷ್ಟವಿರಲಿಲ್ಲ. ಹೇಗಾದರೂ ಆಗಲಿ, ಇನ್ನೊಂದು ಪ್ರಯತ್ನ ನೋಡೋಣವೆಂದು ಅವರು ಉಪಾಯವಾಗಿ ಎದುರಿಗೆ ಬರುತ್ತಿದ್ದ ಹುಲಿಯ ಹಿಂದಕ್ಕೆ ಸರಿದರು. ಹುಲಿಯು ಸರ್‍ರನೆ ಅವರ ಕಡೆ ತಿರುಗಿತು. ಅವರು ಮತ್ತೆ ಅದರ ಬಾಲದ ಕಡೆಗೆ ಬಂದರು. ಈ ಅವಕಾಶದಲ್ಲಿ ಅವರು ಸೊಂಟದಲ್ಲಿದ್ದ ಮದ್ದಿನ ಪುಡಿಯನ್ನು ಬಂದೂಕಿಗೆ ತುಂಬಿ ಅದನ್ನು

ಕೋಲಿನಿಂದ ಜಡಿದರು. ಅನಂತರ ಎರಡನೆಯ ಸಾರಿ ಹುಲಿಯನ್ನು ಬಂದೂಕದಿಂದ ಹೊಡೆದರು. ಹುಲಿಯು ನೆಲಕ್ಕೆ ಬಿದ್ದು ಪ್ರಾಣಬಿಟ್ಟಿತು.

ಪುಳ್ಳಾರಿನ ಬ್ರಾಹ್ಮಣನ ಈ ಸಾಹಸವನ್ನು ಕೇಳಿ ಮಹಾರಾಜರಿಗೆ ಬಹಳ ಆನಂದವಾಯಿತು. ಅವರು ಶೀನಪ್ಪನ ಚಿಕ್ಕ ಅಜ್ಜಂದಿರನ್ನು ಬಹಳ ಪ್ರಶಂಸಿಸಿ ತಮ್ಮ ಮೆಚ್ಚಿಗೆಯನ್ನು ಸೂಚಿಸಿ ಅವರಿಗೆ ಚಿನ್ನದ ಹಿಡಿ ಹಾಕಿದ ಬಾಕೊಂದನ್ನು ಬಹುಮಾನವಾಗಿ ಕೊಟ್ಟರು. ಶೀನಪ್ಪನ ಚಿಕ್ಕ ಅಜ್ಜಂದಿರು ಅದನ್ನು ತಂದು ನಮ್ಮೂರಿನ ದೇವರಿಗೆ ಕಾಣಿಕೆಯಾಗಿ ಅರ್ಪಿಸಿದರು. ಈಗಲೂ ಆ ಬಾಕು ನಮ್ಮ ಬೆಟ್ಟದ ದೇವರ ಸೊಂಟದಲ್ಲಿ ಆಭರಣವಾಗಿ ವಿರಾಜಿಸುತ್ತಿದೆ.

ಶೀನಪ್ಪನ ಚಿಕ್ಕ ಅಜ್ಜಂದಿರ ಮೇಲೆ ಮಹಾರಾಜರ ವಿಶ್ವಾಸವೂ ದಯೆಯೂ ಹೆಚ್ಚಾದುದರಿಂದ ಅವರಿಗೆ ಆಸ್ಥಾನದಲ್ಲಿ ಪ್ರತಿಷ್ಠೆಯು ಬೆಳೆಯಿತು. ಮಹಾರಾಜರ ಪರಿವಾರವೂ ಉಳಿದ ವಿದ್ವಾಂಸರೂ ಅವರನ್ನು ಹೆಚ್ಚು ಗೌರವದಿಂದ ಕಾಣತೊಡಗಿದರು. ಮಹಾರಾಜರ ಆಸ್ಥಾನಕ್ಕೆ ಒಬ್ಬ ಹಕೀಮನು ಬರುತ್ತಿದ್ದನು. ಅವನು ಯುನಾನಿ ವೈದ್ಯಭಾಗದಲ್ಲಿ ಪಾರಂಗತನಾಗಿದ್ದುದಲ್ಲದೆ ಹಾವುಗಳನ್ನು ಸ್ವಾಧೀನಪಡಿಸಿಕೊಳ್ಳುವುದರಲ್ಲಿ ಬಹಳ ಹೆಸರುವಾಸಿಯಾಗಿದ್ದನು. ಹಾವುಗಳನ್ನು ಸ್ವಾಧೀನಪಡಿಸಿಕೊಳ್ಳುವ ವಿದ್ಯೆಯ ಮೇಲೆ ಶೀನಪ್ಪನ ಚಿಕ್ಕ ಅಜ್ಜಂದಿರಿಗೆ ಹುಚ್ಚು ಪ್ರೀತಿಯುಂಟಾಯಿತು. ಅದರಲ್ಲಿದ್ದ ಒಂದು ವಿಧವಾದ ಅಪಾಯವೇ ಆ ವಿದ್ಯೆಗೆ ಅವರ ಮನಸ್ಸನ್ನು ಎಳೆಯಿತು. ಅಲ್ಲದೆ ಆ ವಿದ್ಯೆಯಿಂದ ಹಾವು ಕಡಿದವರನ್ನು ಗುಣಪಡಿಸಬಹುದೆಂಬುದನ್ನು ಕೇಳಿಯಂತೂ ಲೋಕಕ್ಕೆ ತಾವು ಆ ಒಂದು ಉಪಕಾರವನ್ನಾದರೂ ಮಾಡಬೇಕೆಂದು ಅವರು ಕಾತರರಾದರು. ಆದರೆ ಹಕೀಮನು ಅವರಿಗೆ ಆ ವಿದ್ಯೆಯನ್ನು ಸುಲಭವಾಗಿ ಹೇಳಿಕೊಡುವವನಾಗಿರಲಿಲ್ಲ. ಮೊದಲು ಮೊದಲು, 'ನನಗೆ ಹಾವಿನ ವಿದ್ಯೆಯೇ ಬಾರದು' ಎಂಬುದಾಗಿ ಅವನು ಹೇಳತೊಡಗಿದನು. ಆದರೆ ಶೀನಪ್ಪನ ಚಿಕ್ಕ ಅಜ್ಜಂದಿರಿಗೆ ಇದರಿಂದ ನಿರುತ್ಸಾಹವಾಗಲಿಲ್ಲ. ಅವರು ಎರಡು ವರ್ಷಕಾಲ ಅವನನ್ನು ಆಶ್ರಯಿಸಿ, ಪ್ರತಿನಿತ್ಯವೂ ಅವನ ಮನೆಗೆ ಹೋಗಿ ಎರಡು ಮೂರು ಗಂಟೆಗಳ ಕಾಲ ಅವನ ಹತ್ತಿರ ಮಾತನಾಡುತ್ತಾ ಇದ್ದು ಹಿಂದಿರುಗುತ್ತಿದ್ದರು. ಹಾವನ್ನು ಸ್ವಾಧೀನಪಡಿಸಿಕೊಳ್ಳುವ ವಿದ್ಯೆಯ ಹುಚ್ಚಿನಲ್ಲಿ ಅವರಿಗೆ ನಿದ್ರೆ ಊಟ ಒಂದರ ಕಡೆಗೂ ಲಕ್ಷ್ಯವಿರಲಿಲ್ಲ. ಹಕೀಮನ ಮನೆಯಲ್ಲಿ ಹೋಗಿ ಕುಳಿತರೆ ಒಂದೊಂದು ದಿವಸ ಮಹಾರಾಜರ ಆಸ್ಥಾನಕ್ಕೆ ಬರುವುದು ಸಹ ಮರೆತುಹೋಗುತ್ತಿತ್ತು. ಕ್ರಮೇಣ ಮಹಾರಾಜರಿಗೆ,

ತಮ್ಮ ವಿಶ್ವಾಸದ ಬೇಟೆಗಾರನಿಗೆ ಹಾವಿನ ವಿದ್ಯದ ಹುಚ್ಚು ಹಿಡಿದಿರುವುದು ತಿಳಿಯಿತು. ಅವರು, ಹಕೀಮನಿಗೆ ಒಂದು ಮಾತು ಅಪ್ಪಣೆಮಾಡಿದರು. ಹಕೀಮನು ತನಗೆ ತಿಳಿದಿದ್ದ ವಿದ್ಯೆಯನ್ನು ಶೀನಪ್ಪನ ಚಿಕ್ಕ ಅಜ್ಜಂದಿರಿಗೆ ಕಲಿಸಲು ಸಮ್ಮತಿಸಿದನು.

ಶೀನಪ್ಪನ ಚಿಕ್ಕ ಅಜ್ಜಂದಿರು ಯಾವ ಕೆಲಸವನ್ನು ಹಿಡಿದರೂ ಅದನ್ನು ಚೆನ್ನಾಗಿ ಮಾಡುವ ಸ್ವಭಾವದವರು. ಹಾವಿನ ವಿದ್ಯೆಯನ್ನೂ ಬಹಳ ಚೆನ್ನಾಗಿ ಬೇಗನೆ ಕಲಿತರು. ಅದರಲ್ಲೂ ಹಾವು ಕಡಿದವರಿಗೆ ಔಷಧಿ ಕೊಡುವ ವಿದ್ಯೆಯಲ್ಲಿ ಅವರು ಗುರುವನ್ನೂ ಮೀರಿಸಿಬಿಟ್ಟರು. ಮಹಾರಾಜರೂ ಜನರೂ ಅವರನ್ನು 'ಹಾವಿನ ಅಯ್ಯ'ನೆಂದು ಕರೆಯುತ್ತಿದ್ದರು. ಅವರು ಮೈಸೂರಿನ ಗರಡಿಮನೆಗಳಿಗೆ ಹೋಗಿ ಚೆನ್ನಾಗಿ ಸಾಧನೆಮಾಡಿ ಕುಸ್ತಿ ದೊಣ್ಣೆವರಸೆ ಮುಂತಾದುವುಗಳಲ್ಲೂ ಚೆನ್ನಾಗಿ ತಯಾರಾದರು. ಮಹಾರಾಜರಿಗೆ ಇದನ್ನೆಲ್ಲಾ ಕಂಡು ಬಹಳ ಸಂತೋಷವಾಯಿತು.

ಅವರು ಯಾವ ಹಾವನ್ನಾದರೂ ಮುಟ್ಟಿ ಆಡಿಸುತ್ತಿದ್ದರು. ಹಾವು ಕಡಿದ ಅನೇಕರಿಗೆ ಔಷಧಿ ಕೊಟ್ಟು ಗುಣಪಡಿಸಿದರು. ಒಂದು ದಿವಸ ಅವರು ಮೈಸೂರಿನಿಂದ ಹೊರಟು ತಮ್ಮ ಸ್ನೇಹಿತರಿದ್ದ ಹೊನ್ನಳ್ಳಿಯ ಕಡೆಗೆ ನಡೆದುಕೊಂಡು ಹೋಗುತ್ತಿದ್ದರು. ಆಗ ದಾರಿಯಲ್ಲಿ ಒಂದು ಹಳ್ಳಿಯ ಬಳಿ ಒಂದು ಹೆಣವನ್ನು ಶ್ಮಶಾನಕ್ಕೆ ಎತ್ತಿಕೊಂಡು ಹೋಗುತ್ತಿರುವುದನ್ನು ಕಂಡರು. ಅದನ್ನು ಕಂಡಕೂಡಲೆ, ಶೀನಪ್ಪನ ಚಿಕ್ಕ ಅಜ್ಜಂದಿರಿಗೆ ಏನೋ ಒಂದು ವಿಧವಾದ ಕುತೂಹಲವುಂಟಾಯಿತು. ಹೆಣದ ಹಿಂದೆ ಹೋಗುತ್ತಿದ್ದ ಒಬ್ಬನನ್ನು "ಸತ್ತವನಿಗೆ ಏನಾಗಿತ್ತು?" ಎಂದು ಕೇಳಿದರು. ಅವನು "ಈ ದಿವಸ ಬೆಳಿಗ್ಗೆ ಹೊಲದ ಬೇಲಿಯ ಬಳಿ ಒಂದು ನಾಗರಹಾವು ಕಡಿಯಿತು. ಯಾವ ಔಷಧಿ ಕೊಟ್ಟರೂ ಗುಣವಾಗಲಿಲ್ಲ. ಸತ್ತುಹೋದನು." ಎಂಬುದಾಗಿ ಹೇಳಿದನು. ಅವರು ಆದಿಕರ್ಣಾಟಕರೆಂದೂ ಗೊತ್ತಾಯಿತು. ಶೀನಪ್ಪನ ಚಿಕ್ಕ ಅಜ್ಜಂದಿರು "ಹೆಣವನ್ನು ಕೆಳಕ್ಕೆ ಇಡಿ" ಎಂದು ಹೇಳಿದರು. ಅವರ ಧ್ವನಿಯಲ್ಲಿ ಅಧಿಕಾರದ ದರ್ಪವೂ ಆಜ್ಞೆಯೂ ಇದ್ದುವು. ಆದರೆ ತೆಗೆದುಕೊಂಡು ಹೋಗುತ್ತಿರುವ ಹೆಣವನ್ನು ಈ ಹಾರುವನ ಮಾತಿಗೆ ಕೆಳಗೆ ಇಟ್ಟಾರೆ? ಅವರು "ನಿಮ್ಮ ದಾರಿ ಹಿಡ್ಕೊಂಡೋಗಿ ಬುದ್ಧಿ" ಎಂದು ಮುಂದುವರಿದರು. ಶೀನಪ್ಪನ ಅಜ್ಜಂದಿರು ಕೈಯಲ್ಲಿದ್ದ ಹಣೆಮಟ್ಟದ ದೊಣ್ಣೆಯನ್ನು ಅಲ್ಲಾಡಿಸಿ "ಕೆಳಗೆ ಇಡುತ್ತೀರೋ, ಅಥವಾ ಇಲ್ಲವೋ?" ಎಂದು ಗದರಿಸಿದರು. ಸಾಕ್ಷಾತ್ ಯಮನಂತೆ ಇದ್ದ ಅವರನ್ನು ಕಂಡು ಆದಿಕರ್ಣಾಟಕರಿಗೆ ಭಯವೂ ಭಕ್ತಿಯೂ ಉಂಟಾದುವು. ಅವರು ವಿಧಿಯಿಲ್ಲದೆ ಹೆಣವನ್ನು ನೆಲದ ಮೇಲಿಟ್ಟು ನಾಲ್ಕು ಹೆಜ್ಜೆ ದೂರ ಸರಿದರು. ಶೀನಪ್ಪನ ಚಿಕ್ಕ ಅಜ್ಜಂದಿರು ಹತ್ತಿರಕ್ಕೆ ಬಂದು ಆ

ಹೆಣದ ಕಟ್ಟುಗಳನ್ನೆಲ್ಲಾ ಬಿಡಿಸಿ, ಏನೇನೋ ಮಂತ್ರವನ್ನು ಹಾಕಿ, ಸೊಂಟದಿಂದ ಎರಡು ಗುಳಿಗೆಗಳನ್ನು ತೆಗೆದು ಸಮೀಪದಲ್ಲಿದ್ದವನ ಕೈಗೆ ಕೊಟ್ಟು, ಅದನ್ನು ಬಲಾತ್ಕಾರವಾಗಿ ಸತ್ತವನ ಬಾಯಿಗೆ ಬಿಡಿಸಿದರು. ಬೀಗದ ಕೈಗಳಿಂದಲೂ ಆದಿಕರ್ಣಾಟಕರ ಬಳಿ ಇದ್ದ ಚಾಕುವಿನಿಂದಲೂ ಸತ್ತವನ ಹಲ್ಲುಗಳನ್ನು ಬಿಡಿಸಿ ಹುಯಿದ ಔಷಧಿಯು ಮೊದಲು ಮೊದಲು ಹೊರಕ್ಕೆ ಬಂದರೂ, ಅನಂತರ ಒಳಕ್ಕೆ ಹೋಯಿತು. ಶೀನಪ್ಪನ ಚಿಕ್ಕ ಅಜ್ಜಂದಿರೂ ಆದಿಕರ್ಣಾಟಕರೂ ಬಹಳ ಕಾತರರಾಗಿ ಹೆಣದ ಕಡೆಯೇ ನೋಡುತ್ತಿದ್ದರು. 'ಹಾವಿನ ಅಯ್ಯ' ಹೆಣದ ಮೇಲೆ ಕೈಯಿಟ್ಟು ನೋಡಿದರು. ಹೃದಯವು ಬಡಿಯುವುದು ಗೊತ್ತಾಗುತ್ತಿದ್ದಿತು. ಸ್ವಲ್ಪ ಹೊತ್ತಿನೊಳಗೆ, ಸತ್ತವನು ಕಣ್ಣುಗಳನ್ನು ಸುತ್ತ ತಿರುಗಿಸಿ ನೋಡಿದನು. ಆಮೇಲೆ ಎದ್ದು ಕುಳಿತನು.

ಶೀನಪ್ಪನ ಚಿಕ್ಕ ಅಜ್ಜಂದಿರಲ್ಲಿ ಆದಿಕರ್ಣಾಟಕರಿಗೆ ಬಹಳ ಭಕ್ತಿ ಉಂಟಾಯಿತು. ಅವರೇ ದೇವರೆಂದು ಅವರು ಹೇಳತೊಡಗಿದರು. ಈಗಲೂ ಶೀನಪ್ಪನ ಮನೆಯವರನ್ನು ಅವರು ತಮ್ಮ ಗುರುಗಳ ಮನೆತನವೆಂದು ಗೌರವಿಸುತ್ತಾರೆ.

ಹಾವಿನ ಅಯ್ಯ ಬಹಳ ವಿನೋದಪ್ರಿಯರೂ ರಸಿಕರೂ ಆಗಿದ್ದರು. ಒಂದು ದಿವಸ ಮನೆಯಲ್ಲಿ ತರಕಾರಿ ಏನೂ ಇರಲಿಲ್ಲವಂತೆ. ಅವರ ಹೆಂಡತಿ "ಏನಾದರೂ ತರಕಾರಿ ತರಬಾರದೆ? ನಿನ್ನೆಯಿಂದ ಬರೀ ಸಾರಿನಲ್ಲಿ ಊಟ ಮಾಡಿ ಬಾಯಿ ಕೆಟ್ಟುಹೋಗಿದೆ" ಎಂದರು. ಹಾವಿನ ಅಯ್ಯ "ಆಗಲಿ, ಅದಕ್ಕೇನು" ಎಂದುಕೊಂಡು ಹೊರಕ್ಕೆ ಹೋದರು. ಹೋದ ಕಾಲುಗಂಟೆಯೊಳಗಾಗಿ ಹೊದೆದುಕೊಂಡಿದ್ದ ಉತ್ತರೀಯದ ಒಂದು ಸೆರಗಿನಲ್ಲಿ ಏನನ್ನೋ ಕಟ್ಟಿಕೊಂಡು ಕೋಣೆಗೆ ಹಿಂದಿರುಗಿದರು. ಗಂಡನು ಏನೋ ತರಕಾರಿ ತಂದನೆಂದು ಹೆಂಡತಿಯು ಸಂಭ್ರಮದಿಂದಿದ್ದಳು. ಹಾವಿನ ಅಯ್ಯ "ಇದೋ, ತರಕಾರಿಗೆ ಏಕೆ ಹೀಗಾಡ್ತಿ. ಬೇಕಾದಷ್ಟು ತಂದಿದ್ದೇನೆ. ತೆಗೆದುಕೋ" ಎಂಬುದಾಗಿ ಹೇಳಿ ಪಂಚೆಯ ಸೆರಗಿನಲ್ಲಿದ್ದುದನ್ನು ನೆಲದಮೇಲೆ ಸುರಿದರು. ಹತ್ತಿಪ್ಪತ್ತು ಬಗೆಬಗೆಯ ಹಾವಿನ ಮರಿಗಳನ್ನು ಕಂಡು ಅವರ ಹೆಂಡತಿಯು ಚಿಟ್ಟನೆ ಚೀರಿದಳು. ಅವು ಕಣ್ಣನ್ನು ಹೊಳೆಸುತ್ತಾ ನಾಲಗೆಯನ್ನು ತೋರುತ್ತಾ ಯಾವ ಕಡೆಗೆ ನೋಡಿದರೂ ತಾವೇ ತಾವಾಗಿ ಕೋಣೆಯಲ್ಲಿ ನಲಿದಾಡುತ್ತಿದ್ದುವು. ಹಾವಿನ ಅಯ್ಯನ ಹೆಂಡತಿಯ ಹಿಂದೆ ಮುಂದೆ, ಮಗ್ಗುಲಲ್ಲಿ ಎಲ್ಲಿ ನೋಡಿದರೂ ಅವುಗಳೇ ಇದ್ದುದರಿಂದ ಆಕೆ ಯಾವ ಕಡೆಗೂ ಚಲಿಸಲಾರದೆ ನಿಂತಲ್ಲಿಯೇ ನಿಂತಿದ್ದಳು. ಅವಳ ಭಯವನ್ನು ನೋಡಿ ಹಾವಿನ ಅಯ್ಯ ಒಂದೊಂದು ಹಾವನ್ನು ಕೈಯಿಂದ ಮುಟ್ಟಿ "ಈ ಹಾವು ಗೋದಿನಾಗರದ ಮರಿ. ಮುಂಡೆದು ಏನು ಚೆನ್ನಾಗಿದೆ! ಕಣ್ಣು ಎಷ್ಟು ಪ್ರಕಾಶವಾಗಿ

ಹೊಳೆಯುತ್ತೆ! ಮೈ ಎಷ್ಟು ನುಣುಪು! ಆ ಕೆರೆಹಾವಿನ ಬಾಲ ಎನ್ನು ಚೆನ್ನಾಗಿದೆ!" ಎಂದು ಮುಂತಾಗಿ ಹೇಳುವುದಕ್ಕೆ ಪ್ರಾರಂಭಿಸಿದರು. ಗಂಡನು ಹಾವುಗಳನ್ನು ಆಳುತ್ತಿರುವುದು ಅವಳಿಗೆ ತಿಳಿದಿದ್ದಿತು. ಆದುದರಿಂದ ಅವಳಿಗೆ ಅಪಾಯದ ಭಯವೇನೂ ಇರಲಿಲ್ಲ. ಆದರೂ 'ಹಾವು ಎಂದರೆ ಹರ ನಡುಗಿದ' ಎಂಬಂತೆ ಅವಳು—"ನಿಮ್ಮ ದಮ್ಮಯ್ಯ ಅಂದ್ರೆ. ಸದ್ಯ ಆಚೆಗೆ ಕರೆದುಕೊಳ್ಳಿ" ಎಂದು ಬೇಡಿಕೊಂಡಳು. ಹಾವಿನ ಅಯ್ಯ ನಗುತ್ತಾ ನೆಲದ ಮೇಲೆ ಮತ್ತೆ ಪಂಚೆಯನ್ನು ಹಾಸಿ ಒಂದು ಸಲ ಚಿಟಕೆ ಹೊಡೆದರು. ಕೂಡಲೇ ಹಾವಿನ ಮರಿಗಳೆಲ್ಲಾ ಅದರ ಮೇಲಕ್ಕೆ ಬಂದು ಸುರುಳಿ ಸುತ್ತಿಕೊಂಡವು. ಹಾವಿನ ಅಯ್ಯ ಅವುಗಳನ್ನೆಲ್ಲಾ ಕಟ್ಟಿಕೊಂಡು ಹೊರಕ್ಕೆ ಹೋದರು.

ಹಾವಿನ ಅಯ್ಯ ನಮ್ಮ ಊರಿನಲ್ಲಿ ತೋರಿಸಿದ ಒಂದು ವಿಚಿತ್ರ ಸಂಗತಿಯನ್ನು ನಮ್ಮೂರಿನವರು ಯಾರೂ ಮರೆಯುವಂತಿಲ್ಲ. ಒಂದು ಸಲ ನಮ್ಮ ಹಳ್ಳಿಯ ನದಿಯ ತೀರದ ದೇವಸ್ಥಾನದಲ್ಲಿ ಊರಿನ ಕೆಲವು ಯುವಕರೂ ಹಾವಿನ ಅಯ್ಯನೂ ಕುಳಿತು ಮಾತನಾಡುತ್ತಿದ್ದರು. ಆ ಮಾತು ಈ ಮಾತು ಆದನಂತರ ಹಾವಿನ ಅಯ್ಯ "ಈಗ ನಿಮಗೆ ಒಂದು ತಮಾಷೆ ತೋರಿಸುತ್ತೇನೆ." ಎಂದು ಅವರನ್ನು ದೇವಸ್ಥಾನದ ಗರ್ಭಗುಡಿಯ ಹಿಂಭಾಗಕ್ಕೆ ಕರೆದುಕೊಂಡು ಹೋಗಿ ಮೂರುನಾಲ್ಕು ಚಿಟಿಕೆಗಳನ್ನು ಹಾಕಿ, ಏನೇನೋ ಮಂತ್ರವನ್ನು ಜಪಿಸಿದರಂತೆ. ತಕ್ಷಣ ಬಿರುಗಾಳಿಯಂತೆ ಸದ್ದುಮಾಡುತ್ತಾ ದೊಡ್ಡದಾದ ಹೆಬ್ಬಾವೊಂದು ಹರಿದುಕೊಂಡು ಬಂದು ಅವರ ಮುಂದೆ ಸುರುಳಿ ಸುತ್ತಿಕೊಂಡು ಬಿದ್ದಿತಂತೆ. ಹಾವಿನ ಅಯ್ಯ ಜೊತೆಯಲ್ಲಿದ್ದವರನ್ನು ಕುರಿತು "ನೋಡೋಣ, ಇದನ್ನು ನೀವು ಹೊರಿ. ಎಷ್ಟು ಜನ ಸೇರಿದರೆ ಇದನ್ನು ಹೊತ್ತೀರಿ?" ಎಂದರು. ಆದರೆ ಹೊರುವವರು ಯಾರು? ಅಯ್ಯ ಹಾವನ್ನು ಅದರ ಸ್ಥಾನಕ್ಕೆ ಕಳುಹಿಸಿದರು.

ಹಾವಿನ ಆಯ್ಯ ಮಹಾರಾಜರ ಕೃಪೆಗೆ ಪಾತ್ರರಾಗಿ ಮೈಸೂರಿನಲ್ಲಿಯೇ ಮನೆಮಾಡಿಕೊಂಡು ಇರುತ್ತಿದ್ದರೆಂದು ಹೇಳಿದೆನಷ್ಟೆ, ನಮ್ಮೂರಿನಿಂದ ಅನೇಕರು ಅವರ ಬಳಿಗೆ ಸಹಾಯಕ್ಕಾಗಿ ಹೋಗುತ್ತಿದ್ದರು. ಆದರೆ ಅವರ ದಾನದ ಕ್ರಮವು ಅವರ ಉಳಿದ ವಿಷಯಗಳಂತೆಯೇ ವಿಚಿತ್ರವಾಗಿತ್ತು. ಮನೆಗೆ ಬಂದವರಾರಿಗೂ ಅವರು ದುಡ್ಡು ಕೊಡುತ್ತಿರಲಿಲ್ಲ. 'ಯಾಚಕರು' ಬಂದ ದಿವಸವೇ ಅವರಿಗೆ ಏನು ಬೇಕೆಂದು ವಿಚಾರಿಸುತ್ತಿದ್ದರು. ಅನಂತರ ಎಷ್ಟು ದಿವಸ ಇರುತ್ತೀರೆಂದು ವಿಚಾರಿಸುತ್ತಿದ್ದರು. ಆಮೇಲೆ ಅವರು ಹೇಳಿದ ದಿವಸ ಅವರನ್ನು ಪೇಟೆಗೆ ಕರೆದುಕೊಂಡು ಹೋಗಿ ಬೇಕಾದ ಸಾಮಾನುಗಳನ್ನೆಲ್ಲಾ ತೆಗೆದುಕೊಟ್ಟು ಹಾಗೆಯೇ ಗಾಡಿ ಹತ್ತಿಸಿ ಪ್ರಯಾಣ ಮಾಡಿಸಿ ಊರಿಗೆ ಕಳುಹಿಸಿಬಿಡುತ್ತಿದ್ದರು. ಅವರಿಗೆ ಬೇಕಾದ ವಸ್ತುಗಳನ್ನು

ತೆಗೆದುಕೊಟ್ಟಮೇಲೆ ಅವರನ್ನು ಒಂದು ದಿವಸವೂ ತಮ್ಮ ಮನೆಯಲ್ಲಿ ಇಟ್ಟುಕೊಳ್ಳುತ್ತಿರಲಿಲ್ಲ. ದಾನಿಗಳ ಸ್ವಭಾವ ಒಂದೊಂದು ತರವಾಗಿರುತ್ತದೆ. ಹಾವಿನ ಅಯ್ಯನ ಸ್ವಭಾವ ಈ ರೀತಿಯಾಗಿತ್ತು.

ಹಾವಿನ ಅಯ್ಯನ ವಿಚಾರದಲ್ಲಿ ಶೀನಪ್ಪನಿಂದ ತಿಳಿದ ಮತ್ತೊಂದು ಸಂಗತಿ ಹೇಳುವುದು ಸೂಕ್ತವೋ ಇಲ್ಲವೋ ಕಾಣೆ. ಅಂತೂ ಹೇಳುತ್ತೇನೆ. ಏನೋ ಕಾರಣದಿಂದ ಒಂದು ದಿವಸ ಹಾವಿನ ಅಯ್ಯನಿಗೆ ಕೋಪವೂ ಜುಗುಪ್ಸೆಯೂ ಉಂಟಾಯಿತು. ಆ ದಿವಸ ಅವರು ಮೈಸೂರಿನಲ್ಲಿದ್ದ ಪ್ರಸಿದ್ಧಳಾದ ನಂಜಾಸಾನಿ ಎಂಬ ವೇಶ್ಯೆಯ ಮನೆಗೆ ಹೋಗಬೇಕೆಂದು ಗೊತ್ತು ಮಾಡಿಕೊಂಡರು. ಸಾಯಂಕಾಲ ನಂಜಾಸಾನಿಯ ಮನೆಗೆ ಹೋಗಿ ತಮ್ಮ ಇಷ್ಟವನ್ನು ಅವಳಿಗೆ ಸೂಚಿಸಲು ವೇಶ್ಯೆಗೆ ಆಶ್ಚರ್ಯವಾಯಿತು. ಯಾತಕ್ಕೆಂದರೆ ಹಾವಿನ ಅಯ್ಯನಲ್ಲಿ ಅವಳಿಗೆ ಅಪಾರವಾದ ಗೌರವವೂ ಭಕ್ತಿಯೂ ಮತ್ತು ಭಯವೂ ಇದ್ದುವು. ಅಲ್ಲದೆ ಹಾವಿನ ಅಯ್ಯನ ಜೀವನವು ಅತ್ಯಂತ ಪರಿಶುದ್ಧವಾದುದೆಂದೂ, ಸ್ವಲ್ಪ ಕಡಿಮೆಯಾದ ನೀತಿಯುಳ್ಳ ಆಗಿನ ಕಾಲದಲ್ಲಿ ಕೂಡ ಅವರನ್ನು ಕಣ್ಣೆತ್ತಿ ನೋಡಲು ಯಾವ ಹೆಂಗಸಿಗೂ ಧೈರ್ಯವಿರಲಿಲ್ಲವೆಂದೂ ಅವಳು ಕೇಳಿ ತಿಳಿದಿದ್ದಳು. ಹಾವಿನ ಅಯ್ಯನೆಂದರೆ, ಸಾಧಾರಣ ಮನುಷ್ಯನಲ್ಲವೆಂದು ಅವಳಿಗೆ ಅವರಲ್ಲಿ ದೇವತೆಗಳಲ್ಲಿದ್ದಷ್ಟು ಪೂಜ್ಯತೆ ಇದ್ದಿತು. ತನ್ನ ದೇವರು ಈ ರೀತಿಯಾಗಿ ಕೆಳಕ್ಕೆ ಬಂದುದನ್ನು ಕಂಡು ಅವಳಿಗೆ ದುಃಖವೂ ಆ ದೇವರಲ್ಲಿ ಅಸಮಾಧಾನವೂ ಉಂಟಾದುವು. ಆದರೆ ಆ ದಿವಸ ಹಾವಿನ ಅಯ್ಯ ತನ್ನ ಬಲೆಯಿಂದ ಪಾರಾಗುವರೆಂದು ಅವಳಿಗೆ ಮನಸ್ಸಿನಲ್ಲಿ ಒಂದು ವಿಧವಾದ ನಂಬಿಕೆಯುಂಟಾಗಿತ್ತು. ಪದೇ ಪದೇ ಯೋಚಿಸಿ ಆ ನಂಬಿಕೆಯು, ಹಾಗೆ ಆಗಲೇಬೇಕು ಎಂಬ ಮನೋಭಾವವಾಗಿ ಮಾರ್ಪಟ್ಟಿತ್ತು. ಅವಳು ಪೇಟೆಗೆ ಹೋಗಿ ಎರಡು ಕುಕ್ಕೆ ಮಲ್ಲಿಗೆ ಮೊಗ್ಗನ್ನು ತಂದು ಅದನ್ನು ಹಾಸಿಗೆಯ ಮೇಲೆ ಹಾನಿ ಕೊಠಡಿಯನ್ನೆಲ್ಲಾ ಸಿಂಗರಿಸಿದಳು. ಆಗ ಹೂವು ಬಹಳ ತಗ್ಗಾಗಿದ್ದುದರಿಂದ ಒಂದೊಂದು ಮೊಗ್ಗಿಗೇ ನಾಲ್ಕು ಕಾಸು ಕ್ರಯವಾಯಿತು. ಹಾವಿನ ಅಯ್ಯ ಸಾಯಂಕಾಲ ಬಂದಿದ್ದಾಗಲೇ ಐವತ್ತು ರೂಪಾಯಿಗಳನ್ನು ನಂಜಾಸಾನಿಗೆ ಕೊಟ್ಟು ಹೋಗಿದ್ದರು. ಆದುದರಿಂದ ಅವಳು ಬೇಕಾದಂತೆ ಖರ್ಚನ್ನು ಹೆಚ್ಚಿಸಲು ಹಿಂದೆಗೆಯಲಿಲ್ಲ.

ನಂಜಾಸಾನಿಯು ಕೊಠಡಿಯನ್ನು ಬಹು ಚೆನ್ನಾಗಿ ಸಿಂಗರಿಸಿ, ಹಾಲನ್ನು ಕಾಯಿಸಲು ದಾಸಿಗೆ ಅಪ್ಪಣೆ ಮಾಡಿ, ತಟ್ಟೆಯಲ್ಲಿ ಎಲೆ ಅಡಕೆಯನ್ನೂ ಗಂಧವನ್ನೂ ಇಟ್ಟುಕೊಂಡು ಯೋಚಿಸುತ್ತಾ, ಕುಳಿತಿದ್ದಳು. ಆ ದಿವಸ ನಂಜಾಸಾನಿಯ ಮನೋಭಾವವೇ ಬದಲಾಯಿಸಿತು. ತಾನಾವುದೋ ಒಂದು ಅಮೂಲ್ಯವಾದ ನಷ್ಟವನ್ನು ಅನುಭವಿಸಿದಂತೆ ಅವಳು

ತಿಳಿದುಕೊಂಡಳು. ಹಾವಿನ ಅಯ್ಯನ ಆಚರಣೆಯು ಅವಳಿಗೆ ದೊಡ್ಡ ಸಮಸ್ಯೆಯಾಗಿ ಅವಳ ಮನಸ್ಸಿಗೆ ಬಹಳ ಬೇಸರಿಕೆಯನ್ನು ಉಂಟುಮಾಡಿದ್ದಿತು. ಹಾವಿನ ಅಯ್ಯನನ್ನು ಕಂಡರೆ ಅವಳಿಗೆ ತನ್ನ ತಂದೆಯಲ್ಲಿದ್ದಷ್ಟು ಗೌರವವಿದ್ದಿತು. ಅಯ್ಯನೇನಾದರೂ ತನ್ನನ್ನು ಪರೀಕ್ಷಿಸುತ್ತಿರುವರೋ ಎಂಬುದಾಗಿ ಅವಳು ಒಂದು ಸಲ ಯೋಚಿಸಿದಳು. ಕಡೆಗೆ ಏನೂ ಬಗೆಹರಿಯದೆ ದೇವರು ಮಾಡಿದಂತೆ ಆಗಲೆಂದು ಸುಮ್ಮನೆ ಕುಳಿತುಬಿಟ್ಟಳು.

ರಾತ್ರಿ, ಸಕಾಲದಲ್ಲಿ ಹಾವಿನ ಅಯ್ಯ ಅಲ್ಲಿಗೆ ಬಂದರು. ನಂಜಾಸಾನಿಯು ಮನಸ್ಸಿನಲ್ಲಿ ನಡೆಯುತ್ತಿದ್ದ ಕಲಹದ ಚಿಹ್ನೆಯೊಂದನ್ನೂ ಮೇಲೆ ತೋರಿಸದೆ ಅವರನ್ನು ಸ್ವೀಕರಿಸಿದಳು. ಹಾವಿನ ಅಯ್ಯ ಹಾಸಿಗೆಯ ಮೇಲೆ ಕುಳಿತುಕೊಂಡರು. ಕೊಠಡಿಯು ದೇವಲೋಕದ ವೈಭವದಿಂದ ಅಲಂಕೃತವಾಗಿತ್ತು. ಕೊಠಡಿಯಲ್ಲಿ ನಡೆದ ವಿಷಯವನ್ನು ಹಾವಿನ ಅಯ್ಯ ತಮ್ಮ ಸ್ನೇಹಿತರೊಬ್ಬರಿಗೆ ಹೇಳಿದ ಮಾತುಗಳಲ್ಲಿಯೇ ನಿಮಗೆ ಹೇಳುತ್ತೇನೆ:

“ನಂಜಾಸಾನಿಯು ಅಲಂಕರಿಸಿದ್ದ ಕೊಠಡಿಯಲ್ಲಿ ಹೋಗಿ ಕುಳಿತುಕೊಂಡೆ. ಗೋಡೆಯ ತುಂಬ ಬಗೆಬಗೆಯ ಚಿತ್ರಗಳಿದ್ದವು. ಅವುಗಳೆಲ್ಲಾ ಗಾಜಿನ ಮೇಲೆ ಕೈಯಲ್ಲಿ ಬರೆದ ಚಿತ್ರಗಳು. ಕೃಷ್ಣನ ರಾಸಕ್ರೀಡೆಯ ಬೇರೆ ಬೇರೆ ಚಿತ್ರಗಳೇ ಅವುಗಳಲ್ಲಿ ವಿಶೇಷವಾಗಿದ್ದುವು. ನಾಲ್ಕು ಕಡೆಗಳಲ್ಲಿಯೂ ನನ್ನಷ್ಟೇ ಎತ್ತರವಾದ ಸ್ವಚ್ಛವಾದ ಕನ್ನಡಿಗಳಿದ್ದುವು. ಎಲ್ಲಾ ಪಟಗಳಿಗೂ ಘಮಘಮಿಸುವ ಮಲ್ಲಿಗೆ ಹಾರಗಳನ್ನು ಹಾಕಿದ್ದಿತು. ಆ ಊದಕಡ್ಡಿಯ ಘಮವನ್ನಂತೂ ಹೇಳತೀರದು. ಕೊಠಡಿಯ ಮಧ್ಯದಲ್ಲಿ ಮಂಚದ ಮೇಲೆ ಹಾಸಿಗೆ ಹಾಸಿದ್ದಿತು. ಹಾಸಿಗೆ ಬೆಳದಿಂಗಳಿಗಿಂತಲೂ ಬಿಳುಪಾಗಿದ್ದಿತು. ಅದರ ಮೇಲೆ ಹೊದ್ದುಕೊಳ್ಳುವುದಕ್ಕೆ ಇಟ್ಟಿದ್ದ ಕಾಶ್ಮೀರದ ಶಾಲುಗಳಂತೂ ನುಣುಪಾಗಿಯೂ ಮೃದುವಾಗಿಯೂ ಕೈಯಿಂದ ಮುಟ್ಟಿದರೆ ಜಾರುವಂತೆ ಇದ್ದುವು. ನಾನು ಹಾಸಿಗೆಯ ಮೇಲೆ ಕುಳಿತುಕೊಂಡೆ. ಅದರ ಮೇಲೆ ಸುಮಾರು ಒಂದು ಬೆರಳಿನ ಗಾತ್ರಕ್ಕೆ ಮಲ್ಲಿಗೆ ಮೊಗ್ಗು ಹರಡಿದ್ದಿತು. ಸಮೀಪದ ಕಾಲುಮಣೆಯ ಮೇಲೆ ತಟ್ಟೆಯಲ್ಲಿ ಬಿಸಿಬಿಸಿಯಾದ ಹಾಲಿತ್ತು. ಚಿಗುರೆಲೆ, ಅಡಕೆ, ಗಂಧ, ಎಲ್ಲಾ ಸಿದ್ಧವಾಗಿದ್ದಿತು. ಇಂತಹ ವೈಭವವನ್ನು ಅನುಭವಿಸುತ್ತಿರುವ ನನ್ನಷ್ಟು ಸುಖಿಯೇ ಪ್ರಪಂಚದಲ್ಲಿ ಮತ್ತಾರೂ ಇಲ್ಲವೆಂದುಕೊಂಡೆ.

“ಅನಂತರ ಯಾವುದೋ ರೀತಿಯಿಂದ ಇದಕ್ಕೆಲ್ಲ ಎಷ್ಟು ಖರ್ಚು ಬಿದ್ದಿರಬಹುದೆಂದು ಯೋಚನೆಯು ಮನಸ್ಸಿಗೆ ಬಂದಿತು. ಆಗಿನ ಹೂವಿನ ಬೆಲೆ ಬಹಳ ಹೆಚ್ಚಾಗಿದ್ದಿತೆಂದು ನನಗೆ ತಿಳಿದಿದ್ದಿತು. ನಂಜಾಸಾನಿಯ ಕೊಠಡಿಯಲ್ಲಿದ್ದ ಪ್ರತಿಯೊಂದು ಸಾಮಾನೂ ಬಹಳ ಬೆಲೆ

ಬಾಳುವುದಾಗಿದ್ದಿತು. ಹೊದೆಯುವ ಆ ಕಾಶ್ಮೀರ ಶಾಲು ಒಂದಕ್ಕೇ ಸಾವಿರ ರೂಪಾಯಿಗಳವರೆಗೆ ಬೆಲೆ ಬಿದ್ದಿರಬೇಕು. ನಂಜಾಸಾನಿಯ ಜೀವನವು ವೈಭವದಿಂದ ಕೂಡಿದುದಾಗಿ ಅವಳು ದೇವತೆಯಂತೆ ತೋರತೊಡಗಿದಳು. ದೇವಿಯೇನು? ಎಲ್ಲರಂತೆ ಅವಳೂ ಮನುಷ್ಯಳೇ. ಆದರೆ ಅವಳಿಗೆ ಇಷ್ಟೊಂದು ದುಡ್ಡು ಇರುವುದರಿಂದ ಅವಳ ಜೀವನವು ಇಷ್ಟು ಸುಖಕರವಾಗಿದೆ. ಈ ಒಂದು ರಾತ್ರಿಯೇ ಅವಳು ಎಷ್ಟು ಖರ್ಚು ಮಾಡಿದ್ದಾಳೆ? ಇಷ್ಟೇ ದುಡ್ಡನ್ನು ನಾವು ಮನೆಯಲ್ಲಿ ಖರ್ಚುಮಾಡಿದರೆ ಇದಕ್ಕಿಂತ ಹೆಚ್ಚು ಸುಖವಾಗಿರಬಹುದಲ್ಲ."

"ಈ ಯೋಚನೆ ಬಂದಕೂಡಲೆ ನನಗೆ ಕವಿದಿದ್ದ ಒಂದು ಮಂಕು ಹರಿದಂತೆ ತೋರಿತು. ಇದೇನು ನಾನು ಇಂತಹ ಕೆಲಸವನ್ನು ಮಾಡಿದೆ; ನನ್ನ ವಿವೇಕವೆಲ್ಲ ಎಲ್ಲಿ ಹೋಯಿತು? ಎಂಬುದಾಗಿ ನನ್ನಲ್ಲಿ ನನಗೇ ತಿರಸ್ಕಾರವುಂಟಾಯಿತು. ನನ್ನ ನೈಜವಾದ ಸ್ವಭಾವಕ್ಕೆ ಹೋಲಿಸಿಕೊಂಡರೆ ನಾನು ಆಗತಾನೆ ಮಾಡಿದ್ದುದು ಸ್ವಪ್ನವೆಂದು ತೋರಿತು. ಆ ವೇಳೆಗೆ ಸರಿಯಾಗಿ ನಂಜಾಸಾನಿಯು ಕಾಯಿಸಿದ ಹಾಲನ್ನು ಅಲ್ಲಿಗೆ ತೆಗೆದುಕೊಂಡು ಬಂದಳು. ಅವಳನ್ನು ನೋಡಿದ ಕೂಡಲೆ ನನಗೆ ನನ್ನ ಮಗಳನ್ನು ಕಂಡಷ್ಟು ಪ್ರೇಮವುಂಟಾಯಿತು. ಹಾಲನ್ನು ತೆಗೆದುಕೊಂಡೆ. ಕುಡಿದೆ. ಅನಂತರ, ನಾನು ಹೋಗಿಬರುತ್ತೇನೆಂದು ಹೊರಟೆ. ನಂಜಾಸಾನಿಯು ನನಗೆ ನಮಸ್ಕಾರ ಮಾಡಿದಳು. ಅವಳಿಗೆ ಆಶೀರ್ವಾದ ಮಾಡಿ ಮನೆಗೆ ಹೋದೆ."

ಹಾವಿನ ಅಯ್ಯ ಯಾವಾಗಲೂ ಬಹಳ ಸರಸಿಯಾಗಿಯೂ ವಿನೋದ ಪ್ರಿಯನಾಗಿಯೂ ಇದ್ದರು. ಆದರೆ ಒಂದೊಂದು ಸಲ ಅವರ ಮುಖದಲ್ಲಿ ಸ್ವಲ್ಪ ಚಿಂತೆಯು ತೋರುತ್ತಿದ್ದಿತು. ತಮಗೆ ಮಕ್ಕಳಿಲ್ಲದುದೇ ಈ ಚಿಂತೆಗೆ ಕಾರಣವಾಗಿತ್ತು. ಎಳೆಯ ಮಕ್ಕಳು ತಾಯಂದಿರ ಮಡಿಗಳ ಮೇಲೆ ನಲಿದಾಡುವುದನ್ನು ಕಂಡಾಗಲೆಲ್ಲಾ ಈ ಚಿಂತೆಯು ಅವರಿಗೆ ಉಂಟಾಗುತ್ತಿದ್ದಿತು. ಆದರೆ ಅವರ ಮನಸ್ಸು ಬಹಳ ದೃಢವಾಗಿದ್ದುದರಿಂದ, ತಮ್ಮ ಹೃದಯವನ್ನು ಕೊರೆಯುತ್ತಿದ್ದ ಈ ದುಃಖವನ್ನು ಅವರು ಹೊರಕ್ಕೆ ತೋರುತ್ತಿರಲಿಲ್ಲ. ಆದರೆ ಒಂದು ಸಲ ಅವರ ಮನಸ್ಸಿನ ದುಃಖವು ಎಷ್ಟು ಆಳವಾಗಿದ್ದಿತೆಂಬುದೂ ಆ ದುಃಖವನ್ನು ಅವರು ಯಾವ ರೀತಿ ಸ್ವಲ್ಪಮಟ್ಟಿಗೆ ಪರಿಹರಿಸಿಕೊಳ್ಳುತ್ತಿದ್ದರೆಂಬುದೂ ಗೊತ್ತಾಯಿತು. ಅದು ಈ ರೀತಿ:

ಹಾವಿನ ಆಯ್ಯ ಹೊನ್ನಳ್ಳಿಗೆ ತನ್ನ ಅತ್ಯಂತ ಆಪ್ತನಾದ ಸ್ನೇಹಿತನೊಬ್ಬನ ಮಗಳ ವಿವಾಹಕ್ಕಾಗಿ ಹೋಗಿದ್ದರು. ಯಾವತ್ತು, ಹೊನ್ನಳ್ಳಿಯಲ್ಲಿ ಮದುವೆಯೋ ಅದೇ ಬೆಳಿಗ್ಗೆ ನಮ್ಮ ಊರಿನಲ್ಲಿ ಸುಬ್ಬಾಶಾಸ್ತ್ರಿಯ ಮಗುವನ್ನು ಒಂದು ನಾಗರಹಾವು ಕಡಿಯಿತು. ಏನೇನು ಔಷಧಿ

ಮಾಡಿದರೂ ಸಾಧ್ಯವಾಗದೆ ಮಗು ಅರ್ಧ ಗಂಟೆಯೊಳಗಾಗಿ ಸತ್ತುಹೋದಂತೆ ತೋರಿತು. ಸುಬ್ಬಾಶಾಸ್ತ್ರಿಯು ನಮ್ಮೂರಿನಿಂದ ಇಪ್ಪತ್ತೈದು ಮೈಲು ದೂರವಿರುವ ಹೊನ್ನಳ್ಳಿಗೆ ಅದೇ ಮಧ್ಯಾಹ್ನ ಬಂದನು. ಹಾವಿನ ಅಯ್ಯನನ್ನು ಕಂಡು, 'ನೀವು ಬರದಿದ್ದರೆ ಆಗುವುದಿಲ್ಲ; ದಯವಿಟ್ಟು ಬರಬೇಕು' ಎಂದು ಬೇಡಿಕೊಂಡನು. ಸ್ನೇಹಿತನು ಊಟ ಮಾಡಿಕೊಂಡು ಹೋಗೆಂದು ಎಷ್ಟು ತಡೆದರೂ ಕೇಳದೆ ಹಾವಿನ ಅಯ್ಯ ತಕ್ಷಣ ಹೊರಟರು. ನಮ್ಮೂರಿಗೆ ಬರುವ ಹೊತ್ತಿಗೆ ನಾಲ್ಕುಗಂಟೆ ಆಯಿತು. ಸುಬ್ಬಾಶಾಸ್ತ್ರಿಯ ಹೆಂಡತಿಯು ದುಃಖದಿಂದ ನೆಲದ ಮೇಲೆ ಬಿದ್ದು ಹೊರಳಾಡುತ್ತಾ ಅಳುತ್ತಿದ್ದಳು. ಅವಳ ಗೋಳು ಕಲ್ಲನಾದರೂ ಕರಗಿಸುವಂತಿತ್ತು. ಊರಿನವರೆಲ್ಲಾ ಅವಳಿಗೆ ಸಮಾಧಾನ ಹೇಳಿ ಪ್ರಯೋಜನವಿಲ್ಲದೆ, ಅತ್ತು ಸುಮ್ಮನಾಗಲೆಂದು ಸುಮ್ಮನಾಗಿದ್ದರು. ಹಾವಿನ ಅಯ್ಯನನ್ನು ಕಂಡ ಕೂಡಲೆ ಸುಬ್ಬಾಶಾಸ್ತ್ರಿಯ ಹೆಂಡತಿಯು ಅವರ ಕಾಲನ್ನು ಹಿಡಿದುಕೊಂಡು "ಏನಾದರೂ ಮಾಡಿ ನನ್ನ ಮಗನನ್ನು ಕೊಡಿ" ಎಂದು ಗೋಳಾಡಿದಳು. ದೃಢಮನಸ್ಸಿನ ಹಾವಿನ ಅಯ್ಯನಿಗೂ ಕೂಡ ಆ ಹುಡುಗಿಯ ದುಃಖವನ್ನು ಕಂಡು ಬಹಳ ವ್ಯಸನವಾಯಿತು. ಆದರೆ ಅವರು ಅದನ್ನು ಹೊರಕ್ಕೆ ತೋರಿಸಿಕೊಳ್ಳದೆ ಮುಂದಲ ಕೆಲಸವನ್ನು ಪ್ರಾರಂಭಿಸಿದರು. ಮಗುವನ್ನು ನೋಡಿದ ಕೂಡಲೆ ಅದಕ್ಕೆ ಪ್ರಾಣ ಹೋಗಿಲ್ಲವೆಂದು ಹಾವಿನ ಅಯ್ಯನಿಗೆ ಗೊತ್ತಾಯಿತು. ಅವರು ಎರಡು ಮೂರು ಔಷಧಿಗಳನ್ನು ಮಗುವಿನ ಬಾಯೊಳಕ್ಕೆ ಹುಯ್ದು ಒಂದು ಗಂಟೆಯೊಳಗಾಗಿ ಅದು ಕೈಕಾಲು ಆಡಿಸಿ ಎದ್ದು ಕುಳಿತುಕೊಳ್ಳುವಂತೆ ಮಾಡಿದರು. ಇನ್ನರ್ಧ ಗಂಟೆಯೊಳಗಾಗಿ ಮಗುವು ಮಾತನಾಡುತ್ತಾ, ಮೊದಲಿನಂತೆ ಆಡುವುದಕ್ಕೆ ಪ್ರಾರಂಭಿಸಿತು. ಸುಬ್ಬಾಶಾಸ್ತ್ರಿಯ ಹೆಂಡತಿಯ ಆನಂದವು, ಅವಳು ಹಾವಿನ ಅಯ್ಯನಿಗೆ ತೋರಿಸಿದ ಕೃತಜ್ಞತೆಗೆ ಮಾತ್ರ ಸಮನಾಗಿತ್ತು. ಅವಳು ಹಾವಿನ ಅಯ್ಯನ ಕಾಲನ್ನು ಹಿಡಿದು "ನೀವೇ ನಮ್ಮ ದೇವರು. ಮಗುವಿಗೆ ಪ್ರಾಣದಾನ ಮಾಡಿದಿರಿ" ಎಂದು ಕೊಂಡಾಡಿದಳು. ಮಗುವಿನಲ್ಲಿದ್ದ ಅವಳ ಆ ನಿಕಟವಾದ ಪ್ರೇಮವನ್ನು ಕಂಡು ಹಾವಿನ ಅಯ್ಯನ ಕಣ್ಣಿನಲ್ಲೂ ಎರಡು ತೊಟ್ಟು ನೀರು ಸುರಿಯಿತು.

ಆಗಲೇ, ತನಗೆ ಮಕ್ಕಳಿಲ್ಲವೆಂಬ ದುಗುಡವು ಅಯ್ಯನ ಮನಸ್ಸನ್ನು ಎಷ್ಟುಮಟ್ಟಿಗೆ ಕೊರೆಯುತ್ತಿದೆ ಎಂಬುದು ನಮಗೆ ಗೊತ್ತಾದುದು. ಅಯ್ಯನಮ್ಮಶ್ಯಾಮಯ್ಯಂಗಾರ್‍ರೊಂದಿಗೆ ಆಗ ಈ ರೀತಿ ಹೇಳಿದರು: "ಸುಬ್ಬಾಶಾಸ್ತ್ರಿಯ ಹೆಂಡತಿಯನ್ನೂ ಅವಳ ಮಗುವನ್ನೂ ನೋಡಿ ನನಗೂ ಮಕ್ಕಳಿಲ್ಲವಲ್ಲಾ ಎಂದು ಒಂದೊಂದು ಸಲ ಯೋಚನೆ ಬರುತ್ತದೆ.... ಆದರೆ ನನ್ನ ಹೊಟ್ಟೆಯಲ್ಲಿ

ಹುಟ್ಟಿದ ಮಕ್ಕಳಿಲ್ಲದಿದ್ದರೇನು? ದೇವರ ದಯದಿಂದ ನಾನು ಹಾವು ಕಡಿದ ಹದಿನಾಲ್ಕು ಮಕ್ಕಳನ್ನು ಉಳಿಸಿದ್ದೇನೆ. ಅವರೇ ನನ್ನ ಮಕ್ಕಳು. ಪ್ರತಿಯೊಂದು ಮಗುವನ್ನು ಉಳಿಸಿದಾಗಲೂ ಕೂಡ, ಇವನೊಬ್ಬ ನನ್ನ ಮಗ ಎಂಬ ಭಾವನೆ ನನ್ನ ಮನಸ್ಸಿನಲ್ಲಿ ದೃಢವಾಗದೆ ಇಲ್ಲ. ನಾನು ಹಾವಿನ ವಿದ್ಯೆ ಕಲಿತುದರಿಂದ ನನಗೆ ಮಕ್ಕಳಿಲ್ಲವೆಂದು ಹೇಳುತ್ತಾರೆ. ಅದು ನಿಜವೊ ಸುಳ್ಳೊ ಗೊತ್ತಿಲ್ಲ. ಆದರೆ ಹಾವಿನ ವಿದ್ಯದಿಂದ ನಾನು ಹದಿನಾಲ್ಕು ಮಕ್ಕಳನ್ನು ಬದುಕಿಸಿದ್ದಂತೂ ನಿಜ. ಲೋಕದಲ್ಲಿ ಒಳ್ಳೆಯ ಕೆಲಸದಿಂದ ಪುಣ್ಯ ಬರುವುದು ನಿಶ್ಚಯವಿದ್ದರೆ, ಈ ಕೆಲಸದಿಂದ ನನಗೂ ಸ್ವಲ್ಪ ಪುಣ್ಯ ಬರಲೇಬೇಕು.”

ಹಾವಿನ ಅಯ್ಯನ ಕೊನೆಯು ಬಹಳ ಶಾಂತವಾಗಿ ಆಯಿತು. ಆಗ ಅವರಿಗೆ ಎಂಭತ್ತುನಾಲ್ಕು ವಯಸ್ಸು ಆಗಿತ್ತು. ಅವರು ಸಾಯುವವರೆಗೆ ಅರೋಗದೃಢಕಾಯರಾಗಿಯೇ ಇದ್ದರೇ ಹೊರತು ಒಂದು ದಿವಸವೂ ರೋಗವನ್ನು ಕಂಡವರಲ್ಲ. ಸಾಯುವುದಕ್ಕೆ ಹತ್ತು ವರುಷ ಮುಂಚಿನಿಂದಲೂ ಅವರು ನಮ್ಮೂರಿನಲ್ಲೇ ಇದ್ದರು. ಪ್ರತಿದಿನವೂ ಪ್ರಾತಃಕಾಲ ನದಿಗೆ ಹೋಗಿ ಸ್ನಾನ ಮಾಡುವುದು; ಮಧ್ಯಾಹ್ನದವರೆಗೆ ಕುಳಿತಿದ್ದು ಆಹ್ನಿಕ ಕರ್ಮಗಳನ್ನೆಲ್ಲಾ ಮಾಡಿ, ಮನೆಗೆ ಬರುವುದು; ಮನೆಯಲ್ಲಿ ಯಾವುದಾದರೂ ಗ್ರಂಥಗಳನ್ನು ವ್ಯಾಸಂಗಮಾಡುವುದು; ಪುರಾಣವನ್ನು ಹೇಳುವುದು; ತಮ್ಮನ್ನು ಕೇಳಿದರೆ ಔಷಧಿ ಮುಂತಾದವುಗಳನ್ನು ಮಾಡಿಕೊಡುವುದು; ಸಾಯಂಕಾಲ ನದಿಗೆ ಹೋಗಿ ಸಂಧ್ಯಾವಂದನೆ ಮಾಡಿ ಮತ್ತೆ ದೇವಸ್ಥಾನಕ್ಕೆ ಹೋಗುವುದು; ಇದೇ ಅವರ ದಿನಚರಿಯಾಗಿತ್ತು. ಸ್ವರ್ಗಸ್ಥರಾಗುವುದಕ್ಕೆ ಹದಿನೈದು ವರ್ಷಗಳು ಮುಂಚಿತವಾಗಿಯೇ ಅವರು ವಿಧುರರಾಗಿದ್ದರು. ಅವರ ಜೀವನವು ಸಂನ್ಯಾಸಿಗಳ ಜೀವನದಂತೆ ಇತ್ತು. ಸ್ವರ್ಗಸ್ಥರಾಗುವ ಪ್ರಾತಃಕಾಲ ಅವರು “ಇವತ್ತು ನಾನು ದೇವರ ಸಮೀಪವನ್ನು ಸೇರುತ್ತೇನೆ” ಎಂದು ಹೇಳಿ ನದಿಗೆ ಹೋಗಿ ಸ್ನಾನಮಾಡಿಕೊಂಡು ಬಂದರು. ಅನಂತರ ತಮ್ಮ ಸ್ನೇಹಿತರನ್ನು ಸುತ್ತ ಕೂರಿಸಿಕೊಂಡು ಅವರಿಂದ ಗೀತೆಯನ್ನೂ ರಾಮಾಯಣವನ್ನೂ ಪಠನಮಾಡಿಸಿ ಕೇಳುತ್ತಾ ಮಗುವು ಮಲಗಿಕೊಳ್ಳುವಂತೆ ಮಲಗಿ ಆಯಾಸವಿಲ್ಲದೆ ಪರಂಧಾಮವನ್ನು ಸೇರಿದರು.

* * * *

ಹಾವಿನ ಅಯ್ಯ ಹಾವಿನ ಮಂತ್ರವನ್ನೂ ಆ ಔಷಧಿಯನ್ನೂ ಮತ್ತಾರಿಗಾದರೂ ಹೇಳಿಕೊಟ್ಟರೋ ಇಲ್ಲವೋ ಅದು ಈ ವರೆಗೆ ಯಾರಿಗೂ ತಿಳಿದಿಲ್ಲ.

# ಗ್ರಾಮಪಂಚಾಯ್ತಿಯ ಅಧ್ಯಕ್ಷ ಗೌಡರು

ನಮ್ಮ ಊರ ಗ್ರಾಮಪಂಚಾಯ್ತಿಯಲ್ಲಿ ಅಧ್ಯಕ್ಷ ಸ್ಥಾನವನ್ನು ಪಡೆಯುವುದು ತಕ್ಕಮಟ್ಟಿಗೆ ಗೌರವದ ಗುರುತು. ಈ ಅಧ್ಯಕ್ಷಸ್ಥಾನವನ್ನು ಪಡೆಯಬೇಕೆಂಬುದು ನಮ್ಮೂರಿನ ಪ್ರತಿಯೊಬ್ಬ ಬ್ರಾಹ್ಮಣನಿಗೂ ಒಕ್ಕಲಿಗನಿಗೂ ಸಾಬಿಗೂ ಇರುವ ಆಸೆಯಾಗಿರುತ್ತೆ. ಗ್ರಾಮಪಂಚಾಯ್ತಿಗಳು ಮೊದಲು ಪ್ರಾರಂಭವಾದಾಗ ಯಾವ ಹಳ್ಳಿಯಲ್ಲಿಯೂ ಯಾರೂ ಅಧ್ಯಕ್ಷರಾಗಲು ಒಪ್ಪಲಿಲ್ಲ. ಆಗ ಸರ್ಕಾರದವರೇ, ಆ ಜೋಲುಮೋರೆಯ, ಗೇಣುದ್ದ ಗಡ್ಡದ, ಕೂರೆಲಪ್ಪಟ್ಟೆಯ ಪಟೇಲರಿಗೆ ಬಲಾತ್ಕಾರವಾಗಿ ಅಧ್ಯಕ ಸ್ಥಾನವನ್ನು ಕಟ್ಟುತ್ತಿದ್ದರು. ಅಧ್ಯಕ್ಷತೆಯನ್ನು ತಪ್ಪಿಸಿಕೊಳ್ಳಲು ಊರು ಬಿಟ್ಟು ನಾಲ್ಕಾರು ತಿಂಗಳು ಹೊರಗಡೆ ವಾಸಿಸಿದ ಪಟೇಲರು ಎಷ್ಟೋ ಜನರುಂಟು.

ಹಳ್ಳಿಗಳಲ್ಲಿ ಈ ಸ್ಥಿತಿಯು ಈಗಲೂ ಹೆಚ್ಚು ಬದಲಾವಣೆಯನ್ನು ಹೊಂದಿಲ್ಲ. ಆದರೆ ನಮ್ಮೂರಿನ ಸಮಾಚಾರ ಹಾಗಲ್ಲ. ನಮ್ಮೂರಿನಲ್ಲಿ ಮನೆಗಂದಾಯ ವಸೂಲ್ಮಾಡುವುದು ಇತರ ಊರುಗಳಲ್ಲಿಯಂತೆ ಅಷ್ಟು ಕಷ್ಟವಿಲ್ಲ. ಪ್ರಾರಂಭದಲ್ಲಿ ವಸೂಲಿ ಕೆಲಸ ಕಷ್ಟವಾಗಿ ನಾಲ್ಕಾರು ತಿಂಗಳು ಬ್ರಾಹ್ಮಣರೇ ಅವರವರ ಬೀದಿ ಬಾಗಿಲುಗಳನ್ನು ಗುಡಿಸಿಕೊಳ್ಳುತ್ತಿದ್ದರು. ಆದರೆ ಈಚೆಗೆ ಗ್ರಾಮಪಂಚಾಯ್ತಿಯ ಕಾರ್ಯದರ್ಶಿಗಳೂ ಅಧ್ಯಕ್ಷರೂ ಬಹಳ ಮುತವರ್ಜಿಯಿಂದ ಕೆಲಸ ನಡೆಸಿ ಕಂದಾಯದ ವಸೂಲಿ ಬಹಳ ಸಲೀಸಾಗಿದೆ. ಗ್ರಾಮವು ಮಾದರಿಗ್ರಾಮದಂತೆ ಪರಿಶುದ್ಧವಾಗಿದೆ. ನಮ್ಮೂರ ಗ್ರಾಮಪಂಚಾಯ್ತಿಯನ್ನು ಮಹಾರಾಜರೂ ಕೂಡ ಒಪ್ಪಿದ್ದಾರೆ. ಪಂಚಾಯ್ತಿಯ ಅಧ್ಯಕ್ಷನಾಗುವುದು ಬಹಳ ದೊಡ್ಡ ಗೌರವವೆಂದೂ ಎಣಿಸಲ್ಪಟ್ಟಿದೆ.

ಗ್ರಾಮಪಂಚಾಯ್ತಿಯ ಅಧ್ಯಕ್ಷಸ್ಥಾನವನ್ನು ಸಂಪಾದಿಸಿ ತನ್ನ ಗೌರವವನ್ನು ಹೆಚ್ಚಿಸಿಕೊಂಡು, ಎಲ್ಲರಿಗಿಂತಲೂ ಮೇಲ್ಪಟ್ಟವನಾಗಬೇಕೆಂದು ಬಹಳ ದಿವಸಗಳಿಂದ ಹಾತೊರೆಯುತ್ತಿದ್ದವನು ನಮ್ಮೂರ ಪೇಟೆ ದಾಸೇಗೌಡ. ನಮ್ಮೂರ ಪೇಟೆ ದಾಸೇಗೌಡನು ಮೊದಲು ಬರಿಯ ದಾಸನೇ ಆಗಿದ್ದನು. ಆಗ ಅವನಿಗೆ ನಮ್ಮ ಊರು ಜೋಡಿದಾರರಲ್ಲಿ ತುಂಬ ಸಾಲವಿತ್ತು. ಆ ಸಾಲಕ್ಕಾಗಿ ಮನೆ, ಹೊಲ, ಗದ್ದೆ ಎಲ್ಲವನ್ನೂ ಅವರಿಗೆ ಆಧಾರಮಾಡಿದ್ದನು. ಜಮೀನುಗಳನ್ನು ಜೋಡಿದಾರರಿಗೆ ಆಧಾರಮಾಡಿದ್ದರೂ ಕೂಡ ಅವರನ್ನು ಮೋಸಪಡಿಸಲು ಯಾವುದಾದರೂ ಒಂದು ದಾರಿ ದೊರೆತೀತೆ ಎಂಬುದಾಗಿ ನಿರೀಕ್ಷಿಸುತ್ತಿದ್ದನು. ಅಲ್ಲದೆ ದಾಸನು ಒಳ್ಳೆ 'ಬರಾವು' ಕಂಡವನಾಗಿದ್ದನು. ಜೋಡಿದಾರರ ಹಿಂದುಗಡೆ "ಬಿಳಿ ಕಾಜಿಗದ ಮೇಲೆ ಕಪ್ಪು

ಹಚ್ಚೋದು ಅಯ್ಯನ್ಗೆ ಮಾತ್ರ ಬರ್ತಯ್ತೊ. ನಂಗೂ ಬರ್ತದೆ. ಈ ಕಾಜಿಗ ಕಡ್ಡಿಗೆ ಹೆದಕರೋಕೆ ನಾನೇನೂ ಎಡ್ಡನಲ್ಲ" ಅನ್ನುತ್ತಿದ್ದನು. ಇದು ಜೋಡಿದಾರರಿಗೆ ತಿಳಿಯದೆ ಇರಲಿಲ್ಲ. ಅವರು ದಾಸನ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದ ಇರುತ್ತಿದ್ದರು.

ಜೋಡಿದಾರರು ಸ್ವರ್ಗಸ್ಥರಾದನಂತರ ಅವರ ಮಕ್ಕಳು ಅವರ ಆಡಳಿತಗಳನ್ನೆಲ್ಲಾ ವಹಿಸಿಕೊಂಡರು. ಅವರ ಮಕ್ಕಳು ಇಂಗ್ಲಿಷ್ ವಿದ್ಯಾಭ್ಯಾಸವನ್ನು ಚೆನ್ನಾಗಿ ಮಾಡಿದ್ದರು. ಮನುಷ್ಯ, ಸ್ವಭಾವದಿಂದ ಬಹಳಯೋಗ್ಯ. ಎಲ್ಲರೂ ತನ್ನಂತೆಯೇ ಸಾಚಾ ಮನುಷ್ಯರು ಎಂಬುದೇ ಅವರ ಅಭಿಪ್ರಾಯವಾಗಿತ್ತು. ಅವರು ಆಗತಾನೆ ಕಾಲೇಜಿನಿಂದ ಹೊಸದಾಗಿ ಹೊರಬಿದ್ದು ತಮ್ಮ ಗ್ರಾಮವನ್ನು ಉತ್ತಮಸ್ಥಿತಿಗೆ ತರಬೇಕೆಂಬ ಆಸೆಯನ್ನು ಇಟ್ಟುಕೊಂಡಿದ್ದರು. ಪೇಟೆ ದಾಸನು ಅವರನ್ನು ಉಪಾಯವಾಗಿ ಆಶ್ರಯಿಸತೊಡಗಿದನು. "ನಿಮ್ಮ ತಂದೆಯವರು ನಮ್ಮನ್ನು ಮುಳುಗಿಸಿದರು. ನೀನು ಮಾಸ್ವಾಮಿ ಒಳ್ಳೆ ದಣಿ. ನೀನು ನಮ್ಮೂರಲ್ಲಿ ನಿಂತದ್ದು ದೇವರು ನಿಂತಂಗೆ ಆಯ್ತು. ದೊಡ್ಡ ದಣಿಗ್ಳು ನಮಗೆ ಬಾರಿ ಸಂಕಟ ಕೊಟ್ರು" ಎಂದನು. ಜೋಡಿದಾರರು 'ಅಯ್ಯೋ ಪಾಪ!' ಎಂದುಕೊಂಡು 'ನಿನಗೆ ದೊಡ್ಡ ದಣಿಗಳು ಸಂಕಟ ಕೊಟ್ಟದ್ದು ಹೇಗೆ?' ಎಂದರು. ದಾಸನು "ನನ್ನೊಡೆಯ ನಿನ್ಗೆ ಅದು ತಿಳಿಯೋಕಿಲ್ಲ. ನೀನು ದೇವರಂತಹ ಮನಸ. ನಿನ್ನ ಮನಸ್ಸು ಹಾಲಿನಂಗೆ ಒಳ್ಳೇದು" ಎಂದನು. ಜೋಡಿದಾರರು "ಹೇಳು ನೋಡೋಣ" ಎಂದರು. ದಾಸನು "ಬುದ್ಧಿ, ಈಗ ನಾನು ಒಂದು ಸಾವಿರದ ಇನ್ನೂರು ರೂಪಾಯಿಗೆ ಪತ್ರ ಬರಕೊಟ್ಟು ಜಮೀನು ಮನೆ ಎಲ್ಲಾ ಆದಾರನಡಾಡಿದೇನೆ. ಆದರೆ ನಾನು ದೊಡ್ಡ ದಣಿಗ್ಳಿಂದ ತಕ್ಕೊಂಡದ್ದು ನೂರೈವತ್ತೆ ರೂಪಾಯಿ" ಎಂದನು. ಜೋಡಿದಾರರಿಗೆ ಆಶ್ಚರ್ಯವಾಯಿತು. ಅವರು "ಹಂಗಾದರೆ ನಿನಗೆ ಬಾಕಿ ದುಡ್ಡು ದೊಡ್ಡ ದಣಿಗ್ಳು ಕೊಡಲೆ ಇಲ್ಲವೆ? ಮೋಸ ಮಾಡಿದರೆ?" ಎಂಬುದಾಗಿ ಸಿಟ್ಟಿನಿಂದ ಕೇಳಿದರು. ದಾಸನು "ಹಂಗಲ್ಲ ಬುದ್ಧಿ. ಆವರು ಮೋಸ ಮಾಡ್ಲಿಲ್ಲ. ಸುಳ್ಳು ಹೇಳಿದ್ರೆ ನನ್ನ ನಾಲಿಗೆ ಬಿದ್ದುಹೋಗ್ಲಿ. ಲೇವಾದೇವೀಲಿ ಹಿಂಗೆ ನಡೀತದೆ. ಅದು ಯಾರ್ದೂ ಅಲ್ಲ ತಪ್ಪು. ಮೊದ್ಲು ದೊಡ್ಡ ದಣಿಗ್ಳು ನನಗೆ ನೂರೈವತ್ತು ರೂಪಾಯಿ ಕೊಟ್ರು, ಆಗ ತಾವು ಇನ್ನೂ ಹುಟ್ಟಿಯೇ ಇರಲಿಲ್ಲ. ಅದ್ಕೆ ಬಡ್ಡಿ ಬೇಳೀತು. ಬಡ್ಡಿ ಕೊಡೋಕೆ ನನ್ನ ಕೈಲಿ ಕಾಸೇ ಇರಲಿಲ್ಲ. ಕುಡಿಯೋಕೆ ಗಂಜಿ ಇಲ್ದೆ ನನ್ನ ಹೆಂಡತಿ ಮಕ್ಕಳು ಸಾಯ್ತ ಇದ್ರು. ಆಗ ನಿಮ್ಮ ಮನ್ಲೆ ನಾನು ಜೀತ ಮಾಡ್ತಾ ಇದ್ದೆ. ಬಡ್ಡಿ ನೂರೈವತ್ತು ರೂಪಾಯ ಸೇರಿಸಿ ಮುನ್ನೂರು ರೂಪಾಯಿಗೆ ಮತ್ತೆ ಪತ್ರ ಬರ್ಕೊಟ್ಟೆ. ಅದ್ಕೆ ಮತ್ತೆ ಮುನ್ನೂರು ಬಡ್ಡಿ ಬೆಳೀತು. ಆಗ ಮತ್ತೆ ಆರುನೂರು ರೂಪಾಯಿಗಳಿಗೆ ಪತ್ರ ಬರಕೊಟ್ಟೆ. ದಣಿಗ್ಳು ಕೈಲಾಸ ಸೇರೋಕೆ

೩ ವರ್ಷ ಮುಂಚೆ ಮತ್ತೆ ಹಣಕೆ ಹಣ ಬಡ್ಡಿ ಬೆಳ್ಕೊತು. ೧೨೦೦ ರೂಪಾಯಿಗೆ ಪತ್ರ ಬರ್ಕೊಟ್ಟೆ, ದಣಿಗಳದೇನೂ ಇದ್ರಲ್ಲಿ ತಪ್ಪಿಲ್ಲ. ಲೇವಾದೇವಿ ನಡೆಯೋದೆ ಹಿಂಗೆ" ಎಂದನು. ಜೋಡಿದಾರರು ಸಾಚಾ ಮನುಷ್ಯರಾದುದರಿಂದ ಅವರಿಗೆ ದಾಸನ ಮಾತುಗಳನ್ನು ಕೇಳಿ ಮನಸ್ಸಿಗೆ ಕೊರತೆಯುಂಟಾಯಿತು. ಲೇವಾದೇವಿ ಎನ್ನುವುದೇ ಹೀಗಾದ ಮೇಲೆ ಲೋಕದಲ್ಲಿ ಲೇವಾದೇವಿಯನ್ನು ಮಾಡುವ ಉದ್ದೇಶವಾದರೂ ಏನು? ದೇವರ ದಯದಿಂದ ಒಬ್ಬ ಮನುಷ್ಯನಲ್ಲಿ ಕೆಲವು ಹಣ ಹೆಚ್ಚಾಗಿ ಸೇರಬಹುದು. ಅದನ್ನು ತನ್ನ ಜನರ ಉಪಯೋಗಕ್ಕಾಗಿ ಅವರ ಕಷ್ಟಕಾಲದಲ್ಲಿ ಕೊಡದೆ ಇದ್ದರೆ ಆ ಹಣದ ಪ್ರಯೋಜನವೇನು? ಈ ಲೇವಾದೇವಿ ಅನ್ನುವುದು ಬಡವರ ರಕ್ತವನ್ನು ಹೀರುವುದಾಗಿರುವುದಲ್ಲ. ನನ್ನ ಮನೆಯಲ್ಲಿರುವ ಪ್ರತಿಯೊಂದು ಬಿಡಿಗಾಸೂ, ಯಾವನೊ ಒಬ್ಬ ಬಡವನ ಮನೆಯವರ ಹಸಿವಿನ ನಿಟ್ಟುಸಿರಲ್ಲವೇ? ನಾನು ಮಾಡುವ ಸವಿಯೂಟವು ಅವನ ಹಸಿವಲ್ಲವೆ? ನಮ್ಮ ಮನೆಯ ಮಗುವಿನ ಮುಗುಳುನಗೆಯೂ ಆಟಪಾಟಗಳೂ, ಆ ಬಡವರ ಮಕ್ಕಳ ಹಸಿವಿನ ಮತ್ತು ರೋದನದ ದೀನ ಧ್ವನಿಗಳಲ್ಲವೇ?" ಎಂದುಕೊಂಡರು. ಹಾಗೆಯೇ ಜೋಡಿದಾರರಿಗೆ ಮತ್ತೊಂದು ಯೋಚನೆ ಹೊಳೆಯುತು. "ಲೇವಾದೇವಿಗಾಗಿ ಕೊಡುವ ಯಾವ ಹಣವೂ ಬಡವನ ಹಣವನ್ನು ವೃದ್ಧಿ ಮಾಡುವುದಕ್ಕಾಗಲಿ, ಅವನ ತಾಪತ್ರಯವನ್ನು ನೀಗುವುದಕ್ಕಾಗಲಿ ಉಪಯೋಗವಾಗುತ್ತಿಲ್ಲ. ರೈತರು ಈ ಲೇವಾದೇವಿಯ ಸಾಲದ ಹಣವನ್ನೆಲ್ಲಾ ಪ್ರತಿಫಲವಿಲ್ಲದ ವೆಚ್ಚಕ್ಕೆ ಉಪಯೋಗಿಸುತ್ತಾರೆ. ಸಾಲದಿಂದ ರೈತನಾವನೂ ತನ್ನ ಸಂಪತ್ತನ್ನು ಹೆಚ್ಚಿಸಿಕೊಂಡಿಲ್ಲ. ಮದುವೆಗೆ ವೆಚ್ಚಮಾಡಿರಬಹುದು. ಊರೊಟ್ಟಿಗೆ ಊಟ ಕೊಡಲು ವೆಚ್ಚಮಾಡಿರಬಹುದು. ಅಂತೂ ಲೇವಾದೇವಿಯಿಂದ ಬಡವರಿಗೆ ಏನೂ ಅನುಕೂಲವಿಲ್ಲ."

ಆಗತಾನೆ ಪಾಠಶಾಲೆಯಿಂದ ಅರ್ಥಶಾಸ್ತ್ರ, ಹಿಂದೂದೇಶದ ಸಾಲ ಮುಂತಾದ ವಿಷಯಗಳ ಮೇಲೆ ವ್ಯಾಸಂಗ ಮಾಡಿ ಬಂದಿದ್ದ ಆ ತರುಣರಿಗೆ ಲೇವಾದೇವಿಯೆಂಬುದೇ ಅನ್ಯಾಯವಾಗಿ ತೋರಿತು. ತನ್ನ ಮಾತನ್ನು ಕೇಳಿ ಇವರು ಮಂಕಾಗಿ ಕುಳಿತುದನ್ನು ಕಂಡು ದಾಸನು "ಈ ಚಿಕ್ಕ ದಣಿ ಇನ್ನೂ ಹುಡುಗ. ಒಳ್ಳೆಯವನು. ಇವನನ್ನ ಹ್ಯಾಗಾದರೂ ಮಾಡಿ ಗುಂಡೀಗೆ ಕೆಡವ್ತೀನಿ" ಎಂದುಕೊಂಡನು.

ಇದಾದ ನಾಲ್ಕು ದಿವಸಗಳನಂತರ ತರುಣ ಜೋಡಿದಾರನು ನಮ್ಮ ಗ್ರಾಮದಲ್ಲಿ ಚಿಕ್ಕದೊಂದು ಸಭೆಯನ್ನು ಸೇರಿಸಿ "ನೀವೆಲ್ಲಾ ಲೇವಾದೇವಿ ಮಾಡಿ ಹೆಚ್ಚು ಬಡ್ಡಿಯನ್ನು

ಸಂಪಾದಿಸುವುದು ತಪ್ಪು. ನಿಮ್ಮ ಹಣವು ಇತರರಿಗೆ ಉಪಯೋಗವಾಗುವಂತೆ ನೀವು ವರ್ತಿಸಬೇಕು. ಹಾಗೆ ಹೀಗೆ" ಎಂಬುದಾಗಿ ಉತ್ಸಾಹದಿಂದ ಉಪನ್ಯಾಸಮಾಡಿದನು. ಅದನ್ನು ಕೇಳಿದ ಒಬ್ಬಿಬ್ಬರು "ಇವನಿನ್ನೂ ಹುಡುಗ. ಲೋಕನೆಲ್ಲಾ ತಿದ್ದಬೇಕು ಅಂತ ಹೊರಟಿದಾನೆ. ಇವರಪ್ಪ ಲೇವಾದೇವಿ ಮೂಡಿ ದುಡ್ಡು ಗಳಿಸದೆ ಇದ್ದಿದ್ರೆ, ಇವನಿಗೆ ಬೆಂಗಳೂರಲ್ಲಿ ತಿಂಗಳಿಗೆ ೪೦-೫೦ ಕೊಟ್ಟು ವಿದ್ಯಾ ಕಲಿಸೋದಕ್ಕೆ ಹಣ ಎಲ್ಲಿ ಇರ್ತಿತ್ತು." ಎಂಬುದಾಗಿ ಹೇಳಿಕೊಂಡರು. ಇನ್ನು ಕೆಲವರು "ಬಾಯಲ್ಲಿ ಹೇಳೋದು ಸುಲಭ. ಸುಖವಾಗಿ ಕೂತು ತಿಂದರೂ ಮುಗಿಯದಂತೆ ಇವರಪ್ಪ ಸಂಪಾದಿಸಿರೋ ಹೊತ್ತಿಗೆ ಈಗ ಇವ ಹಾರಾಡ್ತಾನೆ. ಹಾಗಾದ್ರೆ ಈಗ ಇರೋ ಲೇವಾದೇವಿನೆಲ್ಲಾ ಬಿಟ್ಟುಬಿಡಲಿ. ಪತ್ರಗಳನ್ನೆಲ್ಲಾ ರೈತರಿಗೇ ವಾಪಸ ಕೊಟ್ಟುಬಿಡಲಿ. ನೋಡೋಣ. ಮೊದಲು ಆಚರಿಸಿ ಆಮೇಲೆ ಇತರರಿಗೆ ಹೇಳೋದನ್ನ ನಮ್ಮ ಹುಡುಗರು ಕಲಿಯಬೇಕು" ಎಂದರು. ಜೋಡಿದಾರನಿಗೆ ಇದೆಲ್ಲಾ ತಿಳಿಯಿತು. ಅವನು ಮನಸ್ಸಿನಲ್ಲಿ "ಇರಲಿ. ನಾನು ಪಳ್ಳು ಹರಟೆಯವನಲ್ಲವೆಂಬುದನ್ನೂ ಬಾಯಲ್ಲಿ ಹೇಳಿದುದನ್ನು ಕೈಯಲ್ಲಿ ಮಾಡಿ ತೋರಿಸುವೆನೆಂಬುದನ್ನೂ ಈ ಜನರಿಗೆ ಮನವರಿಕೆ ಮಾಡಿಕೊಡುತ್ತೇನೆ" ಎಂದುಕೊಂಡನು.

ಮರುದಿವಸ ಜೋಡಿದಾರನು ದಾಸನನ್ನು ಕರೆಸಿ 'ಎಲೊ ದಾಸ, ನೀನು ಹೇಳಿದ ಮಾತನ್ನು ಆವತ್ತಿನಿಂದ ಯೋಚಿಸಿದ್ದೇನೆ. ನೀನು ನಮ್ಮ ಯಜಮಾನರಿಂದ ನೂರೈವತ್ತು ರೂಪಾಯಿ ಮಾತ್ರ ತೆಗೆದುಕೊಂಡೆ. ಅದು ಸಾವಿರದ ಇನ್ನೂರ ಐವತ್ತು ರೂಪಾಯಿ ಆಗಿರುವುದು ಬಹಳ ಹಾಸ್ಯಾಸ್ಪದ. ಅಲ್ಲದೆ ನೀನು ಅಷ್ಟು ದಿವಸಗಳಿಂದ ನಮ್ಮ ಮನೆಯಲ್ಲಿ ದುಡಿದು ನಮಗೆ ಆಪ್ತನೂ ಆಗಿದ್ದೀಯೆ. ಆದುದರಿಂದ ನಿನಗೆ ನಾನು ಒಂದು ಉಪಕಾರವನ್ನು ಮಾಡಬೇಕೆಂದಿದ್ದೇನೆ. ನೀನು ನಮ್ಮ ಯಜವರಾನರಿಂದ ತೆಗೆದುಕೊಂಡುದು ೧೫೦/-ರೂಪಾಯಿ. ಅದರ ಬಡ್ಡಿ ೫೦ ರೂಪಾಯಿ ಒಟ್ಟು ೨೦೦ ರೂಪಾಯಿಗಳನ್ನು ನನಗೆ ತಂದುಕೊಡು. ನಿನ್ನ ಪತ್ರಕ್ಕೆ ವಸೂಲ್ ಬರೆದು ವಾಪಸ್ ಕೊಡುತ್ತೇನೆ" ಎಂದರು. ದಾಸನು ಜೋಡಿದಾರರು ತನಗೆ ಏನಾದರೂ ರಿಯಾಯತಿ ಮಾಡಬಹುದೆಂದು ತಿಳಿದಿದ್ದನು. ಆದರೆ ಅವರು ಇಷ್ಟರಮಟ್ಟಿಗೆ ತನಗೆ ಸಹಾಯಮಾಡುವರೆಂದು ಅವನು ತಿಳಿದಿರಲಿಲ್ಲ. ಅವನಿಗೆ ಸ್ವರ್ಗವೇ ಕೈಗೆ ದೊರಕಿದಂತಾಯಿತು. ಅವನು ಸಂತೋಷದಿಂದ ಜೋಡಿದಾರರಿಗೆ ದಣ್ಣಿಕ್ಕಿ "ನನ್ನಪ್ಪ, ನನ್ಸಾಮಿ, ನನ್ನ ಧಣಿ, ನಿನ ಸಂತಾನ ಸಾವಿರ್ವಾಗಲಿ. ನಿನ್ಹೆಸ್ರೇಳಿ ಮನೇಲಿ ದೀಪಾ ಹಚ್ಚತೀವಿ" ಎಂದನು.

ಸಾವಕಾಶ ವರಾಡಿದರೆ ಎಲ್ಲಿ ಜೋಡಿದಾರನು ಇತರರ ಮಾತು ಕೇಳಿ ಮನಸ್ಸು ಬದಲಾಯಿಸಿಬಿಡುತ್ತಾನೊ ಎಂದು ಹೆದರಿ, ದಾಸನು ಮರುದಿವಸವೇ, ತನ್ನ ಹೆಂಡತಿಯ, ಮಗಳ ಮತ್ತು ಸೊಸೆಯ ಮೈಮೇಲಿದ್ದ ಸಣ್ಣ ಪಣ್ಣ ಬೆಳ್ಳಿ-ಚಿನ್ನದ ಆಭರಣಗಳನ್ನೆಲ್ಲಾ ನಮ್ಮೂರ ಸಾಹುಕಾರರ ಮನೆಯಲ್ಲಿ ಆಡವಿಟ್ಟು ೧೯೦/-ರೂಪಾಯಿಗಳನ್ನು ತಂದು ಜೋಡಿದಾರರಿಗೆ ಕೊಟ್ಟನು. ಉಳಿದ ಹತ್ತು ರೂಪಾಯಿಗಳನ್ನು ೩-೪ ದಿವಸಗಳಲ್ಲಿ ತಂದುಕೊಡುತ್ತೇನೆಂದು ಹೇಳಿದನು. ಜೋಡಿದಾರರು ಹಾಗೇ ಆಗಬಹುದೆಂದು ಹೇಳಿ ಅಸಲು, ಬಡ್ಡಿ ಪೂರ್ಣವಾಗಿ ವಸೂಲಾಗಿದೆಯೆಂದೂ ಪತ್ರಕ್ಕಾಗಿ ಮತ್ತೇನೂ ಬರಬೇಕಾದುದಿಲ್ಲವೆಂದೂ ಬರೆದು ಪತ್ರವನ್ನು ಅವನಿಗೆ ಹಿಂದಕ್ಕೆಕೊಟ್ಟುಬಿಟ್ಟರು.

**(೨)**

ಒಂದು ವಾರದೊಳಗೆ, ಜೋಡಿದಾರರು ದಾಸನಿಗೆ ಒಂದು ಸಾವಿರ ರೂಪಾಯಿಗಳನ್ನು ಸೋಡಿಬಿಟ್ಟುದು ಊರಿನಲ್ಲಿ ಎಲ್ಲರಿಗೂ ಗೊತ್ತಾಯಿತು. ನಮ್ಮ ಊರಿನವರೆಲ್ಲರೂ ಜೋಡಿದಾರರನ್ನು ಚೆನ್ನಾಗಿ ಬೈದರು. ಜೋಡಿದಾರರು ಇದಾವುದನ್ನೂ ಲಕ್ಷ್ಯಕ್ಕೆ ತರಲಿಲ್ಲ. ಅವರು ಈ ವಿಧವಾದ ಲೇವಾದೇವಿ ತಪ್ಪು ಎಂದು ಮಾತ್ರ ಹೇಳಿ ಸುಮ್ಮನಾದರು.

ದಾಸನು ಅಲ್ಲಿಯವರೆಗೆ ದಿವಸಕ್ಕೆ ಒಂದು ಸಲ, ಅಥವ ಎರಡು ಮೂರು ದಿವಸಗಳಿಗೆ ಒಂದು ಸಲದಂತೆಯಾದರೂ ತಪ್ಪದೆ ಜೋಡಿದಾರರ ಮನೆಗೆ ಬರುತ್ತಿದ್ದನು. ಪತ್ರವು ಕೈಗೆ ಬಂದ ಮೇಲೆ ೧೫-೨೦ ದಿವಸಗಳಾದರೂ ಅವನು ಒಂದು ದಿವಸವೂ ಮನೆಗೆ ಬರಲಿಲ್ಲ. ಜೋಡಿದಾರರು ಒಂದು ದಿನ ಅವನನ್ನು ಮನೆಗೆ ಕರೆಸಿದರು. ದಾಸನು ಒಂದು ಗಂಟೆ ಬಿಟ್ಟು ನಿಧಾನವಾಗಿ ಜೋಡಿದಾರರ ಮನೆಗೆ ಬಂದನು. ಆಗಿನ ಅವನ ಠೀವಿ, ಮುಖದ ಜರ್ಬು, ಅಹಂಕಾರ, ನಡಿಗೆಯಲ್ಲಿ ತೋರುತ್ತಿದ್ದ ಒಂದುಬಗೆಯ ಧೈರ್ಯ, ಇವುಗಳನ್ನು ನೋಡಿ ಜೋಡಿದಾರರು "ಮನುಷ್ಯನಿಗೆ ಸ್ವಾತಂತ್ರ್ಯಕ್ಕಿಂತ ದೊಡ್ಡದು ಯಾವುದೂ ಇಲ್ಲ. ಇವನಿಗೆ ನಾನು ಸ್ವಾತಂತ್ರ್ಯವನ್ನು ಕೊಟ್ಟೆ, ಈಗ ಇವನ ಧೈರ್ಯವೇನು? ಉತ್ಸಾಹವೇನು? ಕಾರ್ಯಾವಲಂಬನ ಶಕ್ತಿಯೇನು? ಮುಂದಕ್ಕೆ ಬರಬೇಕೆಂಬ ಆಸೆಯೇನು? ಸಾಲದ ಪ್ರವಾಹದಲ್ಲಿ ಮುಳುಗಿ ತೇಲಿಹೋಗುತ್ತಿದ್ದ ಇವನನ್ನು ನಾನು ಉಳಿಸಿದ್ದೇನೆ" ಎಂದುಕೊಂಡನು. ಜೋಡಿದಾರನು ದಾಸನನ್ನು ಕುರಿತು "ಲೋ ದಾಸ, ಎಲ್ಲೊ ಈ ಕಡೆ ನಿನ್ನನ್ನ ಕಾಣಲೇ ಇಲ್ಲವಲ್ಲಾ? ಆ ಹತ್ತು

ರೂಪಾಯಿ ಯಾಕೆ ತಂದು ಕೊಡಲಿಲ್ಲ?" ಎಂದನು. ದಾಸನು ಔದಾಸೀನ್ಯದಿಂದ "ಬರೋಕೆ ಪುರಸತ್ತಿರಲಿಲ್ಲ. ಕಂಡೋರ ಮನೆ ಬಾಗಿಲ ಕಾಯೋಕೆ ನಂಗೇನು ಜಮ್ರ ಇಲ್ವ?" ಎಂದನು. ಜೋಡಿದಾರನು "ಆ ಹತ್ತು ರುಪಾಯಿ ಎಲ್ಲಿ?" ಎಂದನು. ದಾಸನು ಸಿಡಿಮಿಡಿಗೊಳ್ಳುತ್ತಾ "ಹತ್ತು ರೂಪಾಯಿಗೆ ಯಾಕೆ ಹಿಂಗೆ ಪರಾಣ ಬಿಡ್ತೀರಿ. ನಾನೇನು ನಿಮ್ಮ ಹತ್ತು ರೂಪಾಯಿ ತಿಂದ್ಕೊಂಡು ಹೋಗ್ತೇನ?" ಎಂದನು. ಜೋಡಿದಾರನಿಗೆ ಅವನ ಧ್ವನಿಯನ್ನು ಕೇಳಿ ಆಶ್ಚರ್ಯವಾಯಿತು. ದಾಸನು ಉದ್ಧತನಾಗಿ ಮಾತನಾಡುತ್ತಿದ್ದನು. ಜೋಡಿದಾರನಿಗೆ ಬಹಳ ಕೋಪ ಬಂತು. ಅವನು "ಲೋ ದಾಸ, ನಿನಗೆ ಕೃತಜ್ಞತೆ ಅನ್ನೋದು ಇಲ್ಲ. "ಶೂದ್ರಸ್ಯ ಶುಭಂ ನಾಸ್ತಿ" ಎಂಬುದಾಗಿ ನಮ್ಮ ಯಜಮಾನರು ಹೇಳುತ್ತಿದ್ದ ಮಾತು ಈಗ ನಿಜವೆಂದೇ ತೋರುತ್ತದೆ" ಎಂದನು. ದಾಸನು "ಸ್ವಾಮಿ, ನನ್ನ ನೀವು ಇನ್ಮೇಲೆ ದಾಸ ಅಂತ ಕರೀಬೇಡಿ. ನನ್ನ ವಯಸ ಎಷ್ಟು, ನಿಮ್ಮ ವಯಸ ಎಷ್ಟು. ದಾಸೇಗೌಡ ಅಂತ ಕರೀರಿ. ದಾಸ ಅಂತ ಕರದ್ರೆ ನಾನು ಹೂಂ ಕೊಡೋಕಿಲ್ಲ" ಎಂದನು.

ಅಲ್ಲಿಂದ ಮುಂದೆ ಅದುವರೆಗೆ ದಾಸನಾಗಿದ್ದ ದಾಸೇಗೌಡನು ನಮ್ಮ ಊರಿನಲ್ಲಿ ಬಹಳ ಪ್ರಬಲನಾದನು. ಅವನ ಮನೆಯಲ್ಲಿ ದನಕರಗಳೂ ಹಂದಿ ಕುರಿ ಕೋಳಿಗಳೂ ಹೆಚ್ಚಾದವು. ಅವನ ಆರಂಬವು ವೃದ್ಧಿಯಾಯಿತು. ಅವನ ಮಕ್ಕಳು ವ್ಯಾಪಾರ ಮಾಡಲಾರಂಭಿಸಿದರು. ಇದರಿಂದ ಅವನ ಐಶ್ವರ್ಯವು ಹೆಚ್ಚಾಯಿತು. ಅವನನ್ನು ಕಂಡರೆ ಊರಿನವರೆಲ್ಲಾ ಹೆದರುತ್ತಿದ್ದರು. ಅವನು ಬಡಪಾಯಿಗಳಿಂದ ಹಾರುವರನ್ನೂ ಒಕ್ಕಲಿಗರನ್ನೂ ಸದೆಬಡಿಯುತ್ತಿದ್ದನು. ಅವನಿಂದ ಒಕ್ಕಲಿಗರಿಗಾಗಲಿ ಬ್ರಾಹ್ಮಣರಿಗಾಗಲಿ ಯಾವ ಪ್ರಯೋಜನವೂ ಇರಲಿಲ್ಲ. ಹುಲಿಗೆ ತನ್ನ ಕಾಡೇನು, ಪರರ ಕಾಡೇನು ಎಂಬಂತೆ ಅವನು, ತನ್ನ ಬಂಧುಗಳು, ಆಪ್ತರು, ಬೇಕಾದವರು, ಕುಲಸ್ತರು ಎಂಬುದಾವುದನ್ನೂ ನೋಡದೆ ಎಲ್ಲರನ್ನೂ ಬಡಿದು ಬಾಯಲ್ಲಿ ಹಾಕಿಕೊಳ್ಳಹತ್ತಿದನು. ಊರಿಗೆ ಊರೇ ದಾಸೇಗೌಡನನ್ನು ಕಂಡರೆ ಹೆದರುತ್ತಿದ್ದಿತು.

ಆ ಕಾಲದಲ್ಲಿ ನಮ್ಮೂರ ಪಂಚಾಯ್ತಿಯ ಅಧ್ಯಕ್ಷರ ಚುನಾವಣೆ ಬಂತು. ಹಿಂದಿನ ಅಧ್ಯಕ್ಷರೂ ಕಾರ್ಯದರ್ಶಿಗಳೂ ಎಂಟು ಒಂಭತ್ತು ವರ್ಷ ಕಾಲ ಬಹಳ ಕಷ್ಟಪಟ್ಟು ಸ್ವಾರ್ಥತೆಯಿಲ್ಲದೆ ಕೆಲಸ ಮಾಡಿ ಗ್ರಾಮವನ್ನು ಬಹಳ ಅಭಿವೃದ್ಧಿಗೆ ತಂದು ಪ್ರಜೆಗಳ ಮತ್ತು ಅಧಿಕಾರಿಗಳ ಪ್ರೀತಿಗೂ ಮನ್ನಣೆಗೂ ಪಾತ್ರರಾಗಿದ್ದರು. ಗ್ರಾಮಪಂಚಾಯ್ತಿಯಲ್ಲಿ ಅವರಿಗೆ ದೊರೆಯುತ್ತಿದ್ದ ಗೌರವವು ಯಾರಿಗಾದರೂ ಹೊಟ್ಟೆಕಿಚ್ಚನ್ನು ಮಾಡುವಂತಹದಾಗಿದ್ದಿತು. ದಾಸೇಗೌಡನು ಎರಡು ವರ್ಷಗಳಿಂದ ಅಧ್ಯಕ್ಷನಾಗಲು ಪ್ರಯತ್ನಿಸುತ್ತಿದ್ದನು, "ನಂಗೂ ಬರಾವು

ರಿಕಾರ್ಯೋಟು ಮಾಡೋಕೆ ಬರ್ತಯ್ತೆ. ನಂಗೇ ಛೇರ್ಮನ್ ಕೊಡಿ" ಎಂಬುದಾಗಿ ಎಲ್ಲರಿಗೂ ಹೇಳತೊಡಗಿದನು. ಒಕ್ಕಲಿಗರೊಂದಿಗೆ "ನಂಗೆ ಛೇರ್ಮನ್ ಕೊಡಿ. ಊರೊಟ್ಟಿನ ಹಣೀಗೆ ೧೦೦ ರುಪಾಯಿ ಕೊಡ್ತೀನಿ. ಊರ್ಮುಂದ್ಲ ಮಾರಿಗುಡಿ ಕಟ್ಟಿಸ್ಕೊಳ್ಳಿ." ಎಂದನು. ಸಾಬರೊಂದಿಗೆ "ನಂಗೆ ಛೇರ್ಮನ್ ಕೊಡಿ. ನಿಮ್ಮ ಈದಿಗ ಸರಿಮಾಡ್ಸೋಕೆ ನೂರು ರೂಪಾಯಿ ಕೊಡ್ತೀನಿ. ನಿಮ್ಮ ಮಸೀದಿ ಜಮೀನ ಇಚಾರ ರಿಕಾರ್ಯೋಟು ಕಂಪ್ರೋಡ್ ಮಾಡಿ ಕೊಡ್ತಿನಿ. ಮೊಹರಂ ಹಬ್ಬದಲ್ಲಿ ಕರ್ನಾಟ್ಕೆ ಜನ್ಕೆಲ್ಲಾ ಹುಲಿ ಏಸಾ ಹಾಕ್ಸಿ ಕುಣಸ್ತೀನಿ" ಎಂದು ಆಸೆ ತೋರಿಸಿದನು. ಬ್ರಾಹ್ಮಣರಲ್ಲಿ ಮುಖಂಡರಾದವರನ್ನೆಲ್ಲಾ ಕಂಡು ಧೂರ್ತ ವಿನಯವನ್ನು ತೋರಿಸಿ ಒಬ್ಬೊಬ್ಬರಿಗೆ ಒಂದೊಂದು ಮಾತನ್ನು ಹೇಳಿ ಎಲ್ಲರೂ ತನಗೆ ಛೇರ್ಮನ್ ಕೊಡುವಂತೆ ಒಪ್ಪಿಸಿದನು. ಇವನ ಉತ್ಸಾಹವನ್ನು ನೋಡಿ ಹಿಂದಲ ಛೇರ್ಮನ್ನರೂ ಕಾರ್ಯದರ್ಶಿಗಳೂ, ಗ್ರಾಮಸೇವೆ ಮಾಡಲು ಇವನಿಗೆ ಪೂರ್ಣವಾಗಿ ಅವಕಾಶ ಕೊಡಬೇಕೆಂದು ತಾವು ಚುನಾವಣೆಗೇ ನಿಲ್ಲದೆ ಇವನಿಗೇ ಛೇರ್ಮನ್ ಕೊಡಬೇಕೆಂದು ನಿಶ್ಚಯಿಸಿದರು.

ಪಂಚಾಯ್ತಿಗೆ ಅಧ್ಯಕ್ಷರನ್ನು ಚುನಾಯಿಸುವ ದಿವಸ ಬಂತು. ಆ ದಿವಸ ಅಮಲ್ದಾರರೂ ನಮ್ಮೂರಿಗೆ ಬಂದಿದ್ದರು. ಆವತ್ತು ದಾಸೇಗೌಡ ಬಹಳ ಜರ್ಬಾಗಿ ಕಾಣ್ತಾ ಇದ್ದ. ಅವನ ಒಬ್ಬಟ್ಟುಗಂಬಿಯ ದೋತ್ರ ಏನು? ಭರ್ ಭರ್ ಎಂದು ಶಬ್ದಮಹಾಡುತ್ತಿದ್ದ ಒಂದು ಗೇಣು ಎತ್ತರವಾದ ಜೋಡೇನು? ತಲೆಗೆ ಕಟ್ಟಿದ್ದ ನಾಲ್ಕುಬೆಟ್ಟಗಲ ಜರಿಯ ರುಮಾಲೇನು? ಕೈಯಲ್ಲಿ ಹಿಡಿದಿದ್ದ ಛತ್ರಿ ಏನು? ಅವನ ಠೀವಿಯನ್ನು ನೋಡಿ ಅಮಲ್ದಾರರಿಗೇ ಆಶ್ಚರ್ಯವಾಯಿತು. ಹಿಂದೆ "ನಿನ್ನನ್ನ ಛೇರ್ಮನ್ ಮಾಡಿದೆ" ಎಂಬುದಾಗಿ ಅಮಲ್ದಾರ ಪಟೇಲನಿಗೆ 'ಇಂಡಾರ್ಸು' ಕೊಟ್ಟಾಗ ಪಟೇಲ ಹೆದರಿ "ದಮ್ಮಯ್ಯ ನನಗೆ ಛೇರ್ಮನ್ ತಪ್ಪಿಸಿಬಿಡಿ. ನಿಮಗೆ ಹತ್ತು ರೂಪಾಯಿ ದಂಡ ಕೊಡ್ತೀನಿ" ಎಂಬುದಾಗಿ ಶ್ಯಾನುಭೋಗರ ಬಳಿಗೆ ಅಲೆಯುತ್ತಿದ್ದುದನ್ನು ಕಂಡಿದ್ದ ಅಮಲ್ದಾರ್ರಿಗೆ, ಛೇರ್ಮನ್ ಆಗಲು ದಾಸೇಗೌಡನಿಗೆ ಇದ್ದ ಉತ್ಸಾಹವನ್ನು ಕಂಡು ಬಹಳ ಸಂತೋಷವಾಯಿತು. ಆ ದಿವಸದ ಚುನಾವಣೆಯಲ್ಲಿ ದಾಸೇಗೌಡನೇ ನಮ್ಮ ಪಂಚಾಯ್ತಿಗೆ ಆಧ್ಯಕ್ಷನಾಗಿ ಆರಿಸಲ್ಪಟ್ಟನು.

ನಮ್ಮ ಊರು ಪಂಚಾಯ್ತಿಗೆ ಸ್ವತಃ ಕಟ್ಟಡವಿಲ್ಲ. ಬಾಡಿಗೆಮನೆಯಲ್ಲಿ ಪಂಚಾಯ್ತಿ "ಆಫೀಶು" ನಡೆಯುತ್ತಾ ಇದೆ. ಹಿಂದೆ ಅಧ್ಯಕ್ಷರು ಚುನಾವಣೆಯನ್ನು ಹೊಂದಿದ ಮೇಲೆ ಆ ಆಫೀಸಿಗೆ ಹೋಗಿ ತಮ್ಮ ಕೆಲಸವನ್ನು ವಹಿಸಿಕೊಂಡು ಯಾವದೊಂದು ಹೆಚ್ಚು ಆಡಂಬರವೂ ಇಲ್ಲದೆ ಅಧ್ಯಕ್ಷಗಿರಿಯನ್ನು ಮಾಡುತ್ತಿದ್ದರು. ದಾಸೇಗೌಡ ಅಧ್ಯಕ್ಷನಾದ ಕೂಡಲೆ ಅವನು

ಪದ್ಧತಿಯಂತೆ ಪಂಚಾಯ್ತಿ ಆಫೀಶಿಗೆ ಹೋಗಲಿಲ್ಲ. ಅವನು "ನಾನು ಹೋಗೋ ದಿವಸ ಆಫೀಶು ಕಿಲೀನ್ ಆಗಿರಬೇಕು. ಸುಣ್ಣ ಹೊಡೆದು ಅದಕ್ಕೆ ಚಪ್ರ ಹಾಕಬೇಕು. ಜಗಲಿ ಮುಂದೆ ಇರೊ ಕಟಕಟಿ ಚೆನ್ನಾಗಿಲ್ಲ. ಅದ ಕಿತ್ತುಹಾಕಿ. ಜಗಲಿ ಮೇಲೆ ಒಂದು ತುದಿಗೆ ಇರೋ ಕೋಣೆ ಒಡೀರಿ" ಎಂದೂ ಮುಂತಾಗಿ 'ಆಂಡ್ರು' ಮಾಡಿದನು. 'ಆಫೀಶ್' ಕಟ್ಟಡವನ್ನು ಬಾಡಿಗೆಗೆ ಕೊಟ್ಟಿದ್ದ ಮನೆಯ ಯಜಮಾನನು "ನೀವು ಜಗಲಿ ಮೇಲಿನ ಕಟಕಟಿ ಕೀಳೋಕೆ ನಾನು ಅವಕಾಶ ಕೊಡೋಲ್ಲ. ಕೋಣೆ ಕೆಡವಬೇಡಿ. ನಿಮ್ಮ ಬಾಡಿಗೇನೆ ಬೇಡ. ನಿಮ್ಮ ರಿಕಾರೊಟು ಹೊರಕ್ಕೆ ಎಸೀತೀನಿ" ಎಂದು ಕೂಗಾಡಿದ. ದಾಸೇಗೌಡನು "ಎಸೆದ್ರೆ ನಿನ್ನ ತಲೆ ಒಡಿಸ್ತೀನಿ. ರಿಕಾರೋಟು ಮಾಡಿ ನಿನಗೆ ಹಾತ್‌ಬೇಡಿ ಹಾಕಿಸ್ತೀನಿ. ನಾನೇನು ಪುಳ್ಚಾರು ಛೇರ್ಮನ್ ಅಂತ ತಿಳ್ಕೊಂಡ್ಯೊ. ಹೈದ್ರಾಲಿ ನವಾಬರ್ ದವಲತ್ತು ಜ್ಞಾಪ್ತಿಗೆ ತಂದ್ಕೊ. ದಾಸೇಗೌಡ್ನ ಛೇರ್ಮನ್ ಅಂದ್ರೆ ಊರೆಲ್ಲಾ ಗಡಗುಟ್ಟಬೇಕು. ಎದುರು ಮಾತಾಡಿದ್ರೆ ತೊಡೆದ್ಹಾಕ್ತೀನಿ" ಎಂದು ಗರ್ಜಿಸಿದನು. ಮನೆಯ ಯಜಮಾನನು ಹೆದರಿ ಸುಮ್ಮನಾದನು. ದಾಸೇಗೌಡನ ಅಪ್ಪಣೆಮೇಲೆ ಆಳುಗಳು ಪಂಚಾಯ್ತಿ ಮನೆಯನ್ನು ಬದಲಾಯಿಸಿದರು. ಚಪ್ರ ತೋರಣ ಎಲ್ಲಾ ಬಹಳ ಜರ್ಬಿನಿಂದ ಏರ್ಪಾಡಾಯಿತು.

ದಾಸೇಗೌಡನಿಗೆ ತಾನು ದವಲತ್ತು ಮಾಡಬೇಕೆಂಬ ಆಸೆ ಬಲವಾಯಿತು. ಅವನು ಬರಾವು ಕಂಡವನಾದುದರಿಂದ ಬೆಂಗಳೂರು ಮೈಸೂರಿನಲ್ಲಿ ಮುನಸಿಪಾಲಿಟಿ ಅಧ್ಯಕ್ಷರ ಮೆರವಣಿಗೆ ಸಮಾಚಾರವನ್ನು ವೃತ್ತಾಂತ ಪತ್ರಿಕೆಯಲ್ಲಿ ಓದಿ ತಿಳಿದಿದ್ದನು. ಈಗ ಮೊದಲ ದಿವಸ ತಾನು ಪಂಚಾಯ್ತಿ ಆಫೀಶಿಗೆ ಛೇರ್ಮನ್ ಮಾಡಲು ಹೋಗುವಾಗ ಮೆರವಣಿಗೆಯಲ್ಲಿ ಹೋಗಬೇಕೆಂದು ನಿಶ್ಚಯಿಸಿದನು. ಮೆರವಣಿಗೆಯು ಹೆಚ್ಚು ಜರ್ಬಾಗಿ ಕಾಣಬೇಕೆಂದು ಅದನ್ನು ರಾತ್ರಿ ಏರ್ಪಡಿಸಿದನು. ನಮ್ಮ ಊರಿನಲ್ಲಿ ಅದುವರೆಗೆ ಯಾವ ಪಂಚಾಯ್ತಿ ಅಧ್ಯಕ್ಷರೂ ಈ ರೀತಿ ಮೆರವಣಿಗೆ ಮಾಡಿಸಿಕೊಂಡಿರಲಿಲ್ಲ. ದಾಸೇಗೌಡನ ಈ ಏರ್ಪಾಡು ನಮ್ಮವರಿಗೆಲ್ಲಾ ಹೊಸದಾಗಿ ಕಂಡಿತು. ಆದರೂ ಸ್ವಾಭಾವಿಕವಾಗಿ ವಿನೋದಪ್ರಿಯರಾದ ನಮ್ಮ ಜನರು ಅದನೆಲ್ಲಾ ಕುತೂಹಲದಿಂದ ನೋಡುತ್ತಾ ತಮ್ಮಿಂದ ಸಾಧ್ಯವಾದ ಸಹಾಯವನ್ನು ದಾಸೇಗೌಡನಿಗೆ ಮಾಡಲು ಸಿದ್ಧರಾಗಿದ್ದರು. ಅದರೆ ಪಂಚಾಯ್ತಿಯ ಅಧ್ಯಕ್ಷನು ತನಗೆ ಮಾಡಿದ ಹಿಂಸೆಯಿಂದ ನೊಂದ ಪಂಚಾಯ್ತಿ ಆಫೀಸಿನ ಮನೆಯ ಯಜಮಾನನು ನಾಣಿಯ ಹತ್ತಿರ ಬಂದು ಗೋಳಾಡಿದನು. ನಾಣಿಯು ದಾಸೇಗೌಡನೊಂದಿಗೆ "ಅವನ ಮನೆ ನೀನು ಅನ್ಯಾಯವಾಗಿ ಕೆಡವಿಸಿದೆ. ಅವ ಬಡವ. ಪಂಚಾಯ್ತಿಯಿಂದ ಏನಾದ್ರೂ ಹಣ ಕೊಡಿಸು" ಎಂದನು. ದಾಸೇಗೌಡನು "ನನ್ಮಾತ್ಗೆ ಎದ್ರಾಗಿ

ಬಂದೋರ್ಗೆಲ್ಲ ಹಿಂಗೇ ಆಗೋದು. ನಾಳೆ ನೀವು ಎದ್ರಾಗಿ ಬಂದ್ರೂ ನಿಮ್ಗೂ ಹಿಂಗೆಯ. ಬಿಳಿ ಕಾಗದ್ಮೇಲೆ ಕಪ್ಪಹಚ್ಚೋ ನಿಮ್ಮ ವಿದ್ಯಾನಂತಾವ ನಡ್ಯೋಕಿಲ್ಲ" ಎಂದು ಆರ್ಭಟಿಸಿದನು. ನಾಣಿಯು 'ಎಲಾ ಪಾಪಿ! ಇವನು ಬಹಳ ಕೊಬ್ಬಿದ್ದಾನೆ' ಎಂದುಕೊಂಡನು.

ಮೊದಲೇ ಏರ್ಪಾಡಾಗಿದ್ದಂತೆ ಒಂದು ರಾತ್ರಿ ಪಟೇಲ ದಾಸೇಗೌಡನು ತನ್ನ ಮನೆಯಿಂದ ಪಂಚಾಯ್ತಿ ಆಫೀಶಿಗೆ ಮೆರವಣಿಗೆ ಹೊರಟನು. ದಾಸೇಗೌಡನು ಓಲಗವನ್ನೂ ನಮ್ಮ ಊರ ಹೊಲೆಯರ ಓಲಗ ತಮಟೆಯನ್ನೂ ತರಿಸಿದನು. ಪಂಚಾಯ್ತಿ ಬಾಗಿಲಿಗೆ ಬಂದ ಕೂಡಲೆ ತನಗೆ ವಾದ್ಯಮಾಡಿ ಸ್ವಾಗತವನ್ನು ಮಾಡಬೇಕೆಂದು ಅಲ್ಲಿ ಒಂದು ಗುಂಪು ಓಲಗದವರನ್ನು ಕೂರಿಸಿದ್ದನು. ಮೆರವಣಿಗೆ ಪ್ರಾರಂಭವಾದುದು ಪೇಟೆಯಲ್ಲಿ (ದಾಸೇಗೌಡನ ಮನೆ ಇರುವುದು ಪೇಟೆಯಲ್ಲಿ) ಪಂಚಾಯ್ತಿ ಆಫೀಸು ಇರುವುದು ಕೋಟೆಯಲ್ಲಿ ಬ್ರಾಹ್ಮಣರ ಬೀದಿಯಲ್ಲಿ. ದಾರಿಯುದ್ದಕ್ಕೂ ಪಂಜು, ಅದಕ್ಕೆ ಆಗಾಗ ಎಸೆಯುತ್ತಿದ್ದ ರಾಳು, ಓಲಗ ಇವುಗಳೆಲ್ಲಾ ಮೆರವಣಿಗೆಯನ್ನು ಬಹಳ ಜರ್ಬಾಗಿ ಮಾಡಿದುವು.

ಮೆರವಣಿಗೆಯು ಪಂಚಾಯ್ತಿಯ ಆಫಿಸೀನ ಬಾಗಿಲಿಗೆ ಬಂದಿತು. ಅಲ್ಲಿದ್ದ ಓಲಗದವರು ಅವನಿಗೆ ಸ್ವಾಗತವನ್ನೇ ಬಯಸಲಿಲ್ಲ. ಅವರು ಮಂಕಾಗಿ ಸುಮ್ಮನೆ ನೋಡುತ್ತಾ ನಿಂತುಬಿಟ್ಟರು. ದಾಸೇಗೌಡನೂ ಅವನ ಮಕ್ಕಳೂ ಓಲಗದವರ ಮೇಲೆ ಗರ್ಜಿಸಿ ಕೂಗಾಡಿದರು. ದಾಸೇಗೌಡನು ಮೆರವಣಿಗೆಯ ಮಧ್ಯದಿಂದ ಈಚೆಗೆ ಬಂದು ಕೈಯಲ್ಲಿ ಹಿಡಿದಿದ್ದ ದೊಣ್ಣೆಯಿಂದ ಆ ಓಲಗದವರಿಗೆ ಚೆನ್ನಾಗಿ ಸದೆದನು. ಓಲಗದವರು ಪಶ್ಚಿಮದ ಕಡೆ ಮೋಡವು ಬಿದ್ದಾಗ ನಾಯಿಯು ಅಳುವಂತೆ ಗೊಳೊ ಎಂಬುದಾಗಿ ಅಳಲು ಪ್ರಾರಂಭಿಸಿದರು. ಪಂಚಾಯ್ತಿಯ ಇತರ ಸದಸ್ಯರೂ, ಗ್ರಾಮಸ್ಥರೂ 'ಬೇಡಿ ಬೇಡಿ' ಎಂಬುದಾಗಿ ಹೇಳಿದರು. ದಾಸೇಗೌಡನು "ಕಳ್ಳರಾ, ನಾನು ನಿಮ್ಮನ್ನು ಹಣಕೊಟ್ಟು ಗೊತ್ತುಮಾಡಿದ್ದು ಯಾಕೆ? ಊದಿ ಓಲಗಾನ" ಎಂದು ಗರ್ಜಿಸಿದನು. ಓಲಗದವರು ಏಟನ್ನು ತಿಂದು ತಳಮಳಗುಟ್ಟುತ್ತಿದ್ದರು. ವಿಚಾರವೇನೆಂದರೆ ಓಲಗದವರು ಪಂಚಾಯ್ತಿ ಆಫೀಶಿನ ಬಾಗಿಲಿನಲ್ಲಿ ಓಲಗವನ್ನಿಟ್ಟು ಮೆರವಣಿಗೆಯನ್ನು ನೋಡಲು ಹೋಗಿದ್ದಾಗ, ನಾಣಿಯು ಆ ಓಲಗದ ಮೇಲಿನ ಸಣ್ಣ ಪೀಪಿಯನ್ನು ಕಿತ್ತು ತೊಲೆಯ ಮೇಲೆ ಇಟ್ಟುಬಿಟ್ಟಿದ್ದನು. ಆ ಪೀಪಿ ಇಲ್ಲದೆ ಓಲಗದಲ್ಲಿ ಧ್ವನಿ ಹೊರಡುವುದಿಲ್ಲ. ನೆರೆದಿದ್ದವರೆಲ್ಲಾ ಆಶ್ಚರ್ಯದಿಂದ ಓಲಗಗಳ ಕಡೆ ನೋಡಿದರು. ಅಂತೂ ದಾಸೇಗೌಡನು ಪಂಚಾಯ್ತಿ ಆಫೀಸನ್ನು ಸೇರಿದನು.

ದಾಸೇಗೌಡ ಬರಾವು ಕಂಡವನಾದುದರಿಂದ ಆ ದಿವಸ ಅವನು ಒಂದು 'ಉಫನ್ನಿವೇಸ'ವನ್ನು ಮಾಡಿದನು. ಶಾಲುಶಾಬಿಯು 'ಆರೆ, ನಿನ್ನ ಚಂಚ್ಕ್ಯ್ರತ ಇಲ್ಲ ಊದಬೇಡ, ಕೂತ್ಕೊಳ್ಳೊ. ರಾಗಿ ಕಳಿ ನುಂಗೊ ಮಡ್ಡಿ ಜನ್ಕೆ ಬರಾವಿನ ಮಾತ್ಯಾಕೊ? ಅಐಗೊಳ್ಯಾರೂ ಮಾಡ್ದ ಛೇರ್ಮನ್ನು ನೀನು ಮಾಡ್ತೀಯ. ಗೊಬ್ರ ಹೊರೋಕೆ ಹೋಗೊ. ಒಕ್ಕಲಿಗ್ನ ಓದಾಟ ನಾ ಕಾಣದ್ದೇನೊ' ಎಂದನು. ಉಳಿದ ಜನರೆಲ್ಲಾ ಮಾತನಾಡದೆ ಕುಳಿತು ತೂಕಡಿಸುತ್ತಿದ್ದರು. ನಾಣಿ ಒಬ್ಬ ಮಾತ್ರ ಹೊಸ ಛೇರ್ಮನ್ನರ ಮಾತುಗಳನ್ನು ಲಕ್ಷ್ಯವಿಟ್ಟು ಕೇಳುತ್ತಿದ್ದನು.

೪-೫ ದಿವಸಗಳು ಕಳೆಯುವುದರೊಳಗಾಗಿ ದಾಸೇಗೌಡ ತನ್ನ ಮೆರವಣಿಗೆಗೂ ಓಲಗಕ್ಕೂ ಆದ ಖರ್ಚನ್ನು ಪಂಚಾಯ್ತಿಯವರು ಕೊಡಬೇಕೆಂದು ಒಂದು ಸಭೆಯಲ್ಲಿ ಹೇಳಿದನು. ಪಂಚಾಯ್ತಿ ಸದಸ್ಯರಾದ ಜೋಡಿದಾರರು "ಆಗೊಲ್ಲ. ಛೇರ್ಮನ್ ಮೆರವಣಿಗೆ ಮಾಡ್ಕೊಬೇಕೂ ಅಂತ ಹೇಳಿದೋರ್ಯಾರು? ಮೆರವಣಿಗೆ ಮಾಡ್ಕೊಳ್ದೆ ಇದ್ದಿದ್ರೆ ಏನು ಉಳ್ಳುದ್ಹೋಗ್ತಿತ್ತು. ನಿನ್ನ ಖರ್ಚು ನೀನೆ ವಹಿಸಿಕೋಬೇಕು" ಎಂದರು. ಪಂಚಾಯ್ತಿಯ ಎಲ್ಲಾ ಸದಸ್ಯರೂ ಹಾಗೆಯೇ ಹೇಳಿದರು. ದಾಸೇಗೌಡನಿಗೆ ಬಹಳ ಸಿಟ್ಟು ಹತ್ತಿತು. ಅವನು "ದಾಸೇಗೌಡಂತಾವ ನಿಮ್ಮ ಪುಂಡೆಲ್ಲಾ ನಡ್ಯೋಕಿಲ್ಲ. ರೆಕಾರೊಡ್ ಕಂಪ್ರೋಡ್‌ಮಾಡಿ ಕಛೇರಿ ಇಂದ್ಲೆ ಆಂಡ್ರು ತರಸ್ತೀನಿ" ಎಂದನು. ದಾಸೇಗೌಡ ಮೆರವಣಿಗೆ ಹಣಕ್ಕಾಗಿ ಮಾಡಿದ ರಿಕಾರೋಟು ಕಛೇರಿಗೆ ಮುಟ್ಟಿದ ಕೂಡಲೆ ಅಮಲ್ದಾರ್ರು 'ಇದಕ್ಕೆ ಪಂಚಾಯ್ತಿ ಹಣ ಉಪಯೋಗಿಸಕೂಡದು' ಎಂಬುದಾಗಿ ಇಂಡಾರ್ಸು ಕೊಟ್ಟರು. ಮೆರವಣಿಗೆ ವೆಚ್ಚವಾದ ಹಣವೆಲ್ಲಾ ದಾಸೇಗೌಡ್ನ ಕೈಯಿಂದಲೇ ಬಿದ್ದಿತು.

ಈ ಕೈಯಿಂದ ಬಿದ್ದ ಹಣ ಹೆಂಗಾದರೂ ಮಾಡಿ ಸಂಪಾದಿಸಬೇಕು ಅನ್ನುವುದೆ ದಾಸೇಗೌಡನ ಯೋಚನೆಯಾಯಿತು. ಅವನು ರೈತರಿಂದ ಸಾಧ್ಯವಾದಷ್ಟು ಹೆಚ್ಚು ದಂಡವನ್ನು ತೆರಿಸಲು ಪ್ರಾರಂಭಿಸಿದನು. ರೈತರ ಹುಲ್ಲುಗಾವಲುಗಳಲ್ಲಿ ತನ್ನ ದನಗಳನ್ನು ಮೆಯಿಸುವುದು, ಅವರಿಂದ ತಾನು ಅಧ್ಯಕ್ಷನೆಂಬ ಜರ್ಬಿನ ಮೇಲೆ ಎತ್ತುಗಳಿಗೆ ಹುರುಳಿ ವಸೂಲ್ಮಾಡುವುದು, ಹುಲ್ಲು, ಸೌದೆ ಇವುಗಳನ್ನು ವಸೂಲ್ಮಾಡುವುದು—ಹೀಗೆ ಚೇರ್ಮಾನಿನ ವಸೂಲ ಕೆಲಸ ಬಹಳ ಜೋರಾಯಿತು. ರೈತ ಸಾಧಾರಣವಾಗಿ ಬಿಟ್ಟಿ ಸಾಮಾನುಗಳನ್ನೆ ಕೊಟ್ಟೇ ಸಣ್ಣಗಾಗುತ್ತಾನೆ. ಅವನು ಸುಗ್ಗಿ ಕಾಲದಲ್ಲಿ ಜಮೀನ್‌ದಾರನಿಗೆ, ಜೋಡಿದಾರನಿಗೆ, ಸಾಹುಕಾರನಿಗೆ, ಅಗಸನಿಗೆ, ಅಕ್ಕಸಾಲಿಗೆ, ಪೂಜಾರಿಗೆ, ಶೇಕದಾರನಿಗೆ, ಪಟೇಲನಿಗೆ ಇವರಿಗೆಲ್ಲಾ ಒಂದೊಂದು ಹೊರೆ ಹುಲ್ಲು ಸ್ವಲ್ಪ ಹೊಸ ರಾಗಿ ಕೊಡಬೇಕು. ಹೀಗೆ ಅವನು ಕೊಡಬೇಕಾದ ಹೊರೆಗಳ ಸಂಖ್ಯೆಯು ಸುಗ್ಗಿ

ಮುಗಿಯುವವರೆಗೆ ಏರುತ್ತಲೇ ಇರುತ್ತದೆ. ಹೀಗೆಯೇ ಅವರೇಕಾಯಿ ಕಾಲದಲ್ಲಿ ಅವರೇಕಾಯಿ, ತಗರಿಕಾಯಿ ಕಾಲದಲ್ಲಿ ತಗರಿಕಾಯಿ, ಒಕ್ಕಲಿಗನು ಆಲೆ ಕಟ್ಟಿದರೆ ಕಬ್ಬು ಇವುಗಳನ್ನೆಲ್ಲಾ ಅವನು ಗ್ರಾಮದ ಈ ದೇವತೆಗಳಿಗೆಲ್ಲಾ ಕೊಡಬೇಕಾಗುತ್ತದೆ. ಈ ದಂಡ ಒಕ್ಕಲಿಗ ಒಬ್ಬ ಕೊಟ್ಟು ಸಹಿಸಿಯಾನೆ ಹೊರತು ಮತ್ತಾರಿಂದಲೂ ಸಹಿಸಲು ಸಾಧ್ಯವಿಲ್ಲ. ನಮ್ಮ ಊರಿನ ರೈತರಿಗೆ ಈ ದಂಡಗಳ ಜತೆಗೆ ಪಂಚಾಯ್ತಿ ಚೇರ್ಮನ್ನ್‌ರ ದಂಡ ಬೇರೆ ಪ್ರಾರಂಭವಾಯಿತು. ಅಲ್ಲಿಯವರೆಗೆ ಇದ್ದ ಚೇರ್ಮನ್ನು ಬ್ರಾಹ್ಮಣನಾಗಿದ್ದರೂ, ಅವನು ಚೇರ್ಮನ್‌ಗಾಗಿಯೇ ದಂಡವನ್ನು ವಸೂಲ್ಮಾಡುತ್ತಿರಲಿಲ್ಲ. ದಾಸೇಗೌಡ ದಂಡ ವಸೂಲ್ಮಾಡುವುದರಲ್ಲಿ ತಾರತಮ್ಯವನ್ನೇ ಇಟ್ಟಿರಲಿಲ್ಲ. ಒಕ್ಕಲಿಗರಿಂದ ವಸೂಲ್ಮಾಡುವ ಯಾವ ಸಾಮಾನೂ ಅವನಿಗೆ ಅಲ್ಪವಾಗಿ ಕಾಣುತ್ತಿರಲಿಲ್ಲ. ಅವನು, ಒಂದು ವಸ್ತುವು ತನಗೆ ಉಪಯುಕ್ತವಾದುದೇ ಇಲ್ಲವೇ ಎಂಬುದರ ವಿವೇಚನೆಯಿಲ್ಲದೆ ಒಕ್ಕಲಿಗರಿಂದ ಶೇಖರಿಸುತ್ತಿದ್ದನು. ಮುತ್ತಿಗದೆಲೆ, ಹಗ್ಗ, ಶೆಣಬು, ಕಸದ ಮಂಕರಿ, ಹಂಜಿಕಡ್ಡಿ (ಕಸಹೊರುವುದಕ್ಕೆ ಉಪಯೋಗಿಸುವುದು) ಯಾವುದು ಸಿಕ್ಕಿದರೂ ಸರಿ. ಕೊನೆ ಕೊನೆಗೆ ಅವನಿಗೆ ವಸೂಲ್ಮಾಡುವುದೇ ಒಂದು ಸ್ವಭಾವವಾಗಿಹೋಯಿತು. ಬ್ರಾಹ್ಮಣ ಮುತ್ತಿಗದೆಲೆಯನ್ನೂ ಶೆಣಬನ್ನೂ ಮಂಕರಿಯನ್ನೂ ವಸೂಲ್ಮಾಡಿದರೆ ಒಕ್ಕಲಿಗ ಸಹಿಸಿಕೊಳ್ಳುತ್ತಾನೆ. ಅದು ಹಾರುವನ ಹಕ್ಕು. ಆದರೆ ಒಕ್ಕಲಿಗನು ಒಕ್ಕಲಿಗನಿಂದ ಅವುಗಳನ್ನು ವಸೂಲ್ಮಾಡಿದರೆ ಒಕ್ಕಲಿಗನು ಸಹಿಸುವುದಿಲ್ಲ. ತಣಿಗೆಯಲ್ಲಿ ಉಣ್ಣುವ ಒಕ್ಕಲಿಗನಿಗೆ ಮುತ್ತಗದ ಎಲೆ ಯಾಕೆ ? ಹೊರೆಹೊರೆ ಹಗ್ಗ ಉಡಿಯಲು ಶಕ್ತಿಯುಳ್ಳ ರೈತ ಇತರರಿಂದ ಒಂದು ಎರಡು ಹಗ್ಗ ಯಾಕೆ ವಸೂಲ್ಮಾಡಬೇಕು? ತನಗೇ ಮಂಕರಿಗಳನ್ನು ಮಾಡಲು ಬರುತ್ತಿರುವಾಗ ಇತರರಿಂದ ತೆಗೆದುಕೊಳ್ಳುವುದು ವೃಥಾ ಚೇಷ್ಟೆಯಲ್ಲವೆ? ಆದರೆ ದಾಸೇಗೌಡ ಇದ್ಯಾವುದಕ್ಕೂ ಲಕ್ಷ್ಯಮಾಡಲಿಲ್ಲ. ನನ್ನ ಚೇರ್ಮನ್ನಿನಲ್ಲಿ ಎಲ್ಲರನ್ನೂ ಗಡಗಡನೆ ನಡುಗಿಸಬೇಕು ಎಂಬುದೇ ಅವನ ಅಭಿಪ್ರಾಯವಾಗಿತ್ತು.

ಈ ಮಧ್ಯೆ ದಾಸೇಗೌಡನ ಮೇಲೆ ರೈತರಿಗೆ ಅಸಮಾಧಾನ ಹೆಚ್ಚಲು ಮತ್ತೊಂದು ಕಾರಣ ಒದಗಿತು. ಆ ವರುಷ ನಮ್ಮೂರಿನ ಹೆಂಡದ ಕಂಟ್ರಾಕ್ಟು ದಾಸೇಗೌಡನ ಹೆಸರಿಗೆ ನಿಂತಿತು. ದಾಸೇಗೌಡನು ಹೆಂಡಕ್ಕೆ ಹೆಚ್ಚಾಗಿ ನೀರು ಬೆರಸುತ್ತಿದ್ದನು. ಹೆಂಡದಲ್ಲಿ ಖಾರ ಇಲ್ಲ. ಅದು ಬರಿ ನೀರು-ಮಜ್ಜಿಗೆಯ ಹಾಗೆ ಇದೆ ಎಂಬುದೇ ಹೆಂಡಕುಡಕರ ದೂರು ಆಗಿತ್ತು. ದಾಸೇಗೌಡ ಹೆಂಡಕ್ಕೆ ಬೆರಸಲು ಉಪಯೋಗಿಸುತ್ತಿದ್ದ ನೀರಾದರೂ ಬಹಳ ಕೊಚ್ಚೆನೀರಾಗಿತ್ತು. ನಮ್ಮ ಊರು ನದಿ ಮತ್ತು ನಾಲೆಯಲ್ಲಿ ಸ್ವಚ್ಛವಾದ ನೀರಿದ್ದರೂ ದಾಸೇಗೌಡ ಊರ ಮುಂದಲ ಅಗಳಿನ ಬಗ್ಗಡವಾದ

ಕೊಳಕು ನೀರನ್ನೇ ಉಪಯೋಗಿಸುತ್ತಿದ್ದನು. “ಬೀಳೀ ಕಾಜಿಗದ ಮೇಲೆ ಕಪ್ಪನ್ನು ಹಚ್ಚಲು” ಅವನು ಕಂಡವನದಾದುದರಿಂದ ರೈತರು ಇವನು ತಮ್ಮ ಮೇಲೆ ಯಾವ ರಿಕಾರೋಟು ಮಾಡುತ್ತಾನೋ ಎಂಬುದಾಗಿ ಹೆದರಿಕೊಂಡು ಸುಮ್ಮನಿದ್ದರು.

ದಾಸೇಗೌಡ ಒಂದು ದಿವಸ ನಮ್ಮ ಊರು ಬೀದಿಯಲ್ಲಿ ಹೊರಟನು. ಬೀದಿಗಳನ್ನು ಸರಿಯಾಗಿ ಗುಡಿಸಿರಲಿಲ್ಲವಾಗಿ ಊಟ ಮಾಡಿದ ಎಲೆಗಳು ಪಟದಂತೆ ಹಾರಾಡುತ್ತಿದ್ದುವು. ನಮ್ಮೂರು ಶ್ಯಾಮೈಯಂಗಾರ್ರ ಮನೆಬಾಗಿಲಿನಲ್ಲಿ ಅವರ ಮುದುಕಿಯು ಕುಳಿತುಕೊಂಡು ಹತ್ತಿಯ ಬತ್ತಿಗಳನ್ನು ಹೊಸೆಯುತ್ತಿದ್ದಳು. ಅವರ ಮನೆ ಮುಂದೆಯೂ ಊಟದ ಏಲೆಗಳು ಹಾರಾಡುತ್ತಿದ್ದುವು. ಚೇರ್ಮನ್ನು ದಾಸೇಗೌಡನು ಮುದುಕಿಯ ಮುಂದೆ ನಿಂತುಕೊಂಡು “ಉಂಡ ಹಾಳೆ ಹಟ್ಟೀಲೆಲ್ಲಾ ಹಾರಾಡ್ತವೆ. ಹಾರ್ರೂ ಗಂಗಳದಲ್ಲೆ ಯಾಕೆ ಉಣ್ಣೊಕಾಗದು, ಏ ಮುದ್ಕಿ?” ಎಂದನು. ಮುದುಕಿಯು ಜಿಗುಪ್ಸೆಯಿಂದ “ಅಯ್ಯೊ—ಗಂಡು ನಿನ್ನ ಅಧಿಕಾರ ಹಾಳಾಯ್ತು. ತೊಲಗು” ಎಂದಳು. ದಾಸೇಗೌಡನು 'ನಿಮ್ಮೆಲ್ಲಾ ಸಜಾ ಹಾಕಿಸ್ತೀನಿ' ಎಂದುಕೊಂಡು ಮನೆಗೆ ಹೋದನು.

ದಾಸೇಗೌಡನನ್ನು ಯಾರೂ ಏನು ಮಾಡಲು ಸಮರ್ಥರಾಗಲಿಲ್ಲ. ಅವನು ರೈತರನ್ನೆಲ್ಲಾ ಒಂದು ಕಡೆಯಿಂದ ಸದೆಬಡಿಯತೊಡಗಿದನು. ಅವನ ವಸೂಲಿಯ ಕೆಲಸವೂ ಅತಿಕ್ರೂರವಾಯಿತು. ರೈತರು ಬಂದು ಎಲ್ಲರಿಗೂ ಮಿತ್ರನಾದ ನಾಣಿಯೊಂದಿಗೆ ದೂರು ಹೇಳಿಕೊಂಡರು. ನಾಣಿಯು “ನೋಡೋಣ ಹೋಗಿ” ಎಂಬುದಾಗಿ ಹೇಳಿ ರೈತರನ್ನೆಲ್ಲಾ ಸಮಾಧಾನಪಡಿಸಿ ಕಳುಹಿಸಿದನು.

ನಮ್ಮ ಊರು ಪೇಟೆಯಲ್ಲಿ ಭೂತಯ್ಯ ಎಂಬ ಒಬ್ಬ ತಿರುಪೆಯವನಿದ್ದಾನೆ. ಅವನು ಪ್ರತಿರಾತ್ರಿಯೂ ಊರ ಸುತ್ತ ತಿರುಗಿ ಕವಳವನ್ನು ಎತ್ತಿಕೊಂಡು ಜೀವನ ಮಾಡುತ್ತಾನೆ. ಆ ಕವಳವನ್ನು ಎತ್ತುವುದಕ್ಕೆ ಅವನು ಪ್ರತಿರಾತ್ರಿಯೂ ಒಂದು ಕುಕ್ಕೆಯನ್ನು ಉಪಯೋಗಿಸುತ್ತಾನೆ. ಬಹಳ ದಿವಸಗಳಿಂದ ಒಂದೇ ಕುಕ್ಕೆಯನ್ನೆ ಉಪಯೋಗಿಸಿರುವುದರಿಂದ ಅದರ ತಳವು ಸ್ವಲ್ಪ ಹರಿದಿದೆ. ಆ ಹರಕನ್ನು ಮುಚ್ಚಲು ಅವನು ಅದಕ್ಕೆ ಒಂಡು ಅಡಕೆಯ ಪಟ್ಟೆಯನ್ನು ಹಾಕಿದ್ದಾನೆ. ಈ ಭೂತಯ್ಯರಿಗೆ ಸರಿಯಾದ ಮನೆಯಿಲ್ಲ. ಒಂದು ಹುಲ್ಲಿನ ಗುಡಿಸಲಿದೆ. ಆ ಹುಲ್ಲಿನ ಗುಡಿಸಲಿಗೆ ಮನೆಗಂದಾಯ ಹಾಕಿಲ್ಲ.

ನಾಣಿಯು ಒಂದು ದಿವಸ ಭೂತಯ್ಯನನ್ನು ಕಂಡು "ಏ ಭೂತಯ್ಯ, ಹೊಸ ಚೇರ್ಮನ್ರು ನಿನ್ಮೇಗೆ ಕಂದಾಯ ಹಾಕ್ತಾರೆ. ಇಲ್ದಿದ್ರೆ ಮನೆಬಿಟ್ಟು ಓಡಸ್ತಾರೆ. ದುಡ್ಡುಕಾಸು ಹೊಂಚ್ಕೊ" ಎಂದನು. ಆ ಮಾತನ್ನು ಕೇಳಿ ಭೂತಯ್ಯನಿಗೆ ಬಹಳ ಭಯವಾಯಿತು. ಕಂದಾಯ ಕೊಡಲು ಅವನಿಗೆ ತ್ರಾಣವೇ ಇರಲಿಲ್ಲ. ಕಂದಾಯ ಹಾಕಿದ್ದರೆ ಅವನು ಮನೆ ಬಿಟ್ಟುಹೋಗಬೇಕಾಗಿತ್ತು. ಆದುದರಿಂದ ಅವನು "ನಿಮ್ದಮ್ಮಯ್ಯ ಬುದ್ದಿ. ಹೆಂಗಾರೂ ಈ ಕಂದಾಯ ತಪ್ಸಿ ನಿಮ್ಮ ಕಾಲಿಗೆ ಬೀಳ್ತೀನಿ. ಈವತ್ತಿನವರ್ಗೆ ಇಲ್ದ ಹೊಸ ನೂತ್ನ ಈಗ್ಯಾಕೆ ಮಾಡೀರಿ" ಎಂದನು. ನಾಣಿಯು "ಹೊಸ ಛೇರ್ಮನ್ರು ಬಂದವ್ರೆ. ಅವರು ಹಳೆ ಚೇರ್ಮನ್ರ ಹಂಗಲ್ಲ. ನಿನ್ಮೇಲೆ ಸಿಟ್ಟುಗೊಂಡವ್ರೆ. ಕಂದಾಯ ಹಾಕ್ಬಿಡ್ತಾರೆ" ಎಂದನು. ಭೂತಯ್ಯನು "ನಾನು ಹೊಸ ಚೇರ್ಮನ್ರ ಕಾಲನೆ ಹಿಡ್ಕೋತೀನಿ. ಹೆಂಗಾರು ಮಾಡಿ ನನಗೆ ಕಂದಾಯ ತಪ್ಪಿಸಿಬಿಡಿ" ಎಂದನು. ನಾಣಿಯು "ಹೊಸ ಚೇರ್ಮನರಿಗೆ ಏನಾದರೂ ಕಾಣಿಕೆ ಕೊಡಬೇಕು. ನಾವೂ ಕೊಡ್ತಾ ಇದೇವೆ. ಇಲ್ದಿದ್ರೆ ಸದೆಬಡೀತಾರೆ. ನೀನೂ ಏನಾದರೂ ಕೊಡು" ಎಂದನು. ದಾಸಯ್ಯನು "ನಾನು ತಿರುಪೆ ಮುಂಡೇದು ಏನು ಕೊಡಲಪ್ಪ. ನನ್ನ ತಾವ ಏನದೆ" ಎಂದನು. ನಾಣಿಯು "ನಿನ್ನ ತಿರುಪೆ ಕುಕ್ಕೆ ಇದೆಯಲ್ಲ, ಅದನ್ನೆ ಕೊಡು. ಚೇರ್ಮನ್ನರಿಗೆ ನೀನು ಏನೂ ಕೊಡ್ಲಿಲ್ಲ ಅಂತ ನಿನ್ಮೇಲೆ ಕಣ್ಣು ಬಿದ್ದಯ್ತೆ" ಎಂದನು. ದಾಸಯ್ಯನು ಮೊದಮೊದಲು ಒಪ್ಪಲಿಲ್ಲ. "ಬಿಡ್ರಪ್ಪ ನೀವು, ಹೈಲಾಟ ಮಾಡ್ತೀರಿ" ಎಂದನು. ಬಹಳ ಹೊತ್ತು ಮಾತನಾಡಿ ನಾಣಿಯು ಅವನನ್ನು ಒಪ್ಪಿಸಿದನು. ದಾಸಯ್ಯನು ತನ್ನ ಹಳೆ ಕುಕ್ಕೆಯನ್ನು ಚೇರ್ಮಾನರಿಗೆ ಕೊಡಲು ಒಪ್ಪಿಕೊಂಡನು. ನಾಣಿಯು ಅವನಿಗೆ ಸಂತೆಯಿಂದ ಬೇರೆ ಕುಕ್ಕೆ ತರಿಸಿಕೊಳ್ಳಲು ಒಂದೂವರೆ ಆಣೆಯನ್ನು ಕೊಟ್ಟನು.

ಮರುದಿವಸ ನಮ್ಮ ಊರು ಪಂಚಾಯ್ತಿಯಲ್ಲಿ ಮಾಮೂಲಿನಂತೆ ಮೀಟಿಂಗ್ ಇತ್ತು. ಒಳಗೆ "ನೆಂಬರುದಾರರು" ಸೇರಿಕೊಂಡು ಚರ್ಚೆಮಾಡುತ್ತಿದ್ದರು. ಅಪರೂಪವಾಗಿ ಆ ದಿವಸ ಪಂಚಾಯ್ತಿ ಚಾವಡಿಯ ಬಾಗಿಲಿನಲ್ಲಿ ನಮ್ಮ ಊರಿನವರೆಲ್ಲಾ ನೆರೆದು ಮಾತುಕತೆ ಆಡುತ್ತಿದ್ದರು. ಚೇರ್ಮನ್ ದಾಸೇಗೌಡನು "ಇವರೇನೊ ಹೇಳ್ಕೊಳ್ಳೋಕೆ ಬಂದವ್ರೆ. ಏನಾದ್ರು ಮಾಡಿ ಬಂದಷ್ಟು ಕಾಸು ಕೀಳ್ಬೇಕು" ಎಂದುಕೊಂಡನು. ಅರ್ಧಗಂಟೆ ಕಳೆಯುವುದರೊಳಗಾಗಿ ಭೂತಯ್ಯನು ಕೈಯಲ್ಲಿ ತನ್ನ ಹರಕಲು ಕುಕ್ಕೆಯನ್ನು ಹಿಡಿದುಕೊಂಡು ಪಂಚಾಯ್ತಿ ಆಫೀಸಿನ ಬಾಗಿಲಿಗೆ ಬಂದನು. ಅಷ್ಟು ಹೊತ್ತಿಗೆ ಪಂಚಾಯ್ತಿ ಮೀಟಿಂಗ್ ಮುಗಿದು ಅಧ್ಯಕ್ಷರೂ 'ನಂಬರ್‌ದಾರರೂ' ಹೊರಕ್ಕೆ ಬಂದರು, ಭೂತಯ್ಯನು ಚೇರ್ಮನ್ ದಾಸೇಗೌಡನಿಗೆ ಕುಕ್ಕೆಯನ್ನು ಕೊಟ್ಟು "ನನ್ನೊಡೆಯಾ,

ನನ್ಕಂದಾಯ ಮಾಫ್ ಮಾಡ್ಬೇಕು" ಎಂದನು. ದಾಸೇಗೌಡನು ಅವನ ಕುಕ್ಕೆಯನ್ನು ರೊಯ್ಯೆಂದು ದೂರಕ್ಕೆ ಎಸೆದನು. ಶೀನಪ್ಪನು "ಚೇರ್ಮನ್ರು ತಿರುಪಕ್ಕೆ ಹೋಗ್ತಾರೇನೊ. ಅವಗ್ಯಾಕೊ ನಿನ್ನ ತಿರುಪೆ ಕುಕ್ಕೆ" ಎಂದು ಗದರಿಸಿದನು. ನೆರೆದಿದ್ದವರೆಲ್ಲಾ 'ಚೇರ್ಮನ್ ತಿರ್ಪಕ್ಕೆ ಹೋಗ್ತಾರ್ಯೆ- ಚೇರ್ಮನ್ರು ತಿರುಪಕ್ಕೆ ಹೋಗ್ತಾರ್ಯೆ' ಎಂದುಕೊಳ್ಳತೊಡಗಿದರು. ದಾಸೇಗೌಡನಿಗೆ ಮುಖಕ್ಕೆ ಮಂಗಳಾರತಿಯಾಯಿತು. ಅವನು ಕೋಪದಿಂದ ದುರದುರನೆ ಮನೆಗೆ ಹೋದನು.

ಬರಾವು ಕಂಡವನಾಗಿ ಬುದ್ಧಿವಂತನಾಗಿದ್ದ ಚೇರ್ಮನ್‌ಗೆ ಜನರು ತನಗೆ ಅವಮಾನ ಮಾಡುವುದಕ್ಕಾಗಿ ಹೀಗೆ ಮಾಡಿದರೆಂದು ತಿಳಿಯುವುದು ಹೆಚ್ಚು ಕಷ್ಟವಾಗಲಿಲ್ಲ. "ಹಾ ಇವರನ್ನ ಏನ್ಮಾಡಲಿ. ಅರೆದು ಹಾಕ್ಬೇಕು. ಹುರಿದು ಹಾಕ್ಬೇಕು. ಸುಟ್ಟು ಬೂದಿ ಮಾಡಬೇಕು. ಚೇರ್ಮನ್ ಅಂದರೆ ಏನು ಅನ್ನೋದ ಇವರಿಗೆ ತೋರಿಸಬೇಕು?" ವಂದು ಅವನು ಪರಿತಪಿಸತೊಡಗಿದನು. ಅವನ ಕ್ರೌರ್ಯವು ಹೆಚ್ಚಾಯಿತು. ಊರಿಗೆ ಊರೆ ಅವನ ವಿಷಯದಲ್ಲಿ ಅಸಮನಾಧಾನಗೊಂಡಿತ್ತು. ಆದರೆ ಏನೂ ಮಾಡಲಾರದೆ ಹೆದರಿ ತಲ್ಲಣಿಸಿಹೋಗಿತ್ತು.

ಈ ಮಧ್ಯೆ ನಮ್ಮೂರಿಗೆ ಒಂದು ದಿವಸ ಇಬ್ಬರು ಮಂತ್ರವಾದಿಗಳು ಬಂದರು. ಪ್ರತಿಮನೆಯಲ್ಲಿಯೂ ಹುದುಗಿರುವ ನಿಧಿಯನ್ನು ತೆಗೆದು ಕೊಡುತ್ತೇವೆಂಬುದೇ ಅವರ ಮಂತ್ರದ ಗುಟ್ಟಾಗಿತ್ತು. ಅವರು ಮೊದಲು ಚೇರ್ಮನ್ ದಾಸೇಗೌಡನ ಮನೆಗೆ ಹೋದರು. ಅವನಿಗೆ "ನಿನ್ನ ಹಿತ್ತಲಿನಲ್ಲಿ ಒಂದು ಕೊಡ ಹೊನ್ನು ಅಡಗಿದೆ. ತೆಗೆದುಕೊಡುತ್ತೇವೆ" ಎಂಬುದಾಗಿ ಹೇಳಿದರು. ಚೇರ್ಮನ್ ದಾಸೇಗೌಡನಿಗೆ ತನ್ನ ಇಷ್ಟ ಬಂದಷ್ಟು ಜನರನ್ನು ತುಳಿಯಲು ಅವಕಾಶವಿಲ್ಲದುದು ದುಡ್ಡಿನ ಅಭಾವದಿಂದಲೆ. ಅವನು ಪದೇ ಪದೇ "ದುಡ್ಡೊಂದಿದ್ದರೆ ಇವರನ್ನೆಲ್ಲಾ ಏನು ಮಾಡಿಬಡುತ್ತಿದ್ದೆನೊ. ಹುಟ್ಟಿಡಗಿಸಿಬಿಡುತ್ತಿದ್ದೆ" ಎಂಬುದಾಗಿ ಹಲ್ಲು ಹಲ್ಲು ಕಡಿಯುತ್ತಿದ್ದನು. ಮಂತ್ರವಾದಿಯು ಹೇಳಿದ ಮಾತನ್ನು ಕೇಳಿ ಅವನಿಗೆ ಅದರಲ್ಲಿ ಬಹಳ ನಂಬಿಕೆಯುಂಟಾಯಿತು. ಅವನು ಮಂತ್ರವಾದಿಯ ಹತ್ತಿರ ಬಹಳ ಗುಟ್ಟಾಗಿ ಮಾತುಕತೆಗಳನ್ನು ಆಡಿಕೊಂಡು ತನ್ನ ಮನೆಯ ಹಿತ್ತಲಲ್ಲಿ ಹುದುಗಿರುವ ಒಂದು ಕೊಡ ನಿಧಿಯನ್ನು ಅವನು ತೆಗೆದುಕೊಡಬೇಕೆಂದು ಗೊತ್ತುಮಾಡಿಕೊಂಡನು. ಈ ವಿಚಾರ ಶೀನಪ್ಪ, ನಾಣಿ ಇವರಿಬ್ಬರಿಗೆ ಹೊರತು ಮತ್ತಾರಿಗೂ ತಿಳಿದಿರಲಿಲ್ಲ.

ಮರುದಿವಸ ಸಂಜೆ ಸುಮರು ಆರುಗಂಟೆ ಹೊತ್ತಿಗೆ ಮಂತ್ರವಾದಿಗಳಿಬ್ಬರೂ ದಾಸೇಗೌಡನ ಮನೆಗೆ ಬಂದರು. ಅನಂತರ ನದಿಗೆ ಹೋಗಿ ಸ್ನಾನಮಾಡಿಕೊಂಡು ಒದ್ದೆ

ಬಟ್ಟೆಯನ್ನೆ ಉಟ್ಟುಕೊಂಡು ಮನೆಗೆ ಬಂದರು. ಅವರ ಮಡಿ ಅಸಾಧ್ಯವಾಗಿತ್ತು. ಚೊಂಬಿನಲ್ಲಿ ನದಿಯಿಂದ ನೀರನ್ನು ತಂದು ದಾಸೇಗೌಡನ ಮನೆಯಲ್ಲಿ ತಾವು ಕಾಲಿಡುವ ಜಾಗದಲ್ಲೆಲ್ಲಾ ಮೊದಲು ನೀರನ್ನು ಸುರಿದು ಅದರ ಮೇಲೆ ಕಾಲಿಡುತ್ತಿದ್ದರು. ದಾಸೇಗೌಡನ ಆನಂದಕ್ಕಂತೂ ಪಾರವೇ ಇರಲಿಲ್ಲ. ಹಿರಿಯವನಾದ ಮಂತ್ರವಾದಿಯು ಗುದ್ದಲಿಯನ್ನು ತೆಗೆದುಕೊಂಡು ಹಿತ್ತಲಿಗೆ ಹೋದನು. ದಾಸೇಗೌಡನೂ ಅವನ ಮನೆಯವರೂ ಅವನ ಸುತ್ತಾ ನೆರೆದರು. ಮಂತ್ರವಾದಿಯು ನೀರನ್ನು ಪ್ರೋಕ್ಷಿಸುತ್ತಾ, ಹಿತ್ತಲನ್ನೆಲ್ಲಾ ಮೂರು ನಾಲ್ಕು ಸಲ ಅಲೆದು ಕೊನೆಗೆ ಒಂದು ಕಡೆ ನಿಂತನು. “ನಿಧಿ ಇಲ್ಲಿದೆ” ಎಂಬುದಾಗಿ ಹೇಳಿ ಅಗೆಯುವುದಕ್ಕೆ ಪ್ರಾರಂಭಿಸಿದನು. ಸುಮಾರು ೨ ಅಡಿ ಅಗೆದ ಮೇಲೆ ಅಲ್ಲಿ ಒಂದು ದಪ್ಪ ಬಿಂದಿಗೆ ಕಾಣಿಸಿತು. ಅದರ ಬಾಯಿಗೆ ಅರಿಸಿನದ ಬಟ್ಟೆಯನ್ನು ಕಟ್ಟಿತ್ತು. ಅದನ್ನು ಕಂಡಕೂಡಲೆ ಮಂತ್ರವಾದಿಯು ಹಿಂದಕ್ಕೆ ಬೆಚ್ಚಿಬಿದ್ದು “ರಾವು ಹೊಡೀತದೆ. ಹತ್ತಿರಕ್ಕೆ ಹೋಗಬೇಡಿ” ಎಂದುಕೊಂಡು ಹಿಂದಕ್ಕೆ ಸರಿದನು. ಅನಂತರ ದಾಸೇಗೌಡನಿಗೆ “ಆ ಬಿಂದಿಗೆ ಮೇಲಕ್ಕೆ ಎತ್ತಿಕೊ” ಎಂದನು. ದಾಸೇಗೌಡನು ಹೆದರಿ “ನಾನೊಲ್ಲೆ. ರಾವು ಬಡೀತದೆ. ನೀವೆ ಎತ್ಕೊಳಿ” ಎಂದನು. ಮಂತ್ರವಾದಿಯು ಮಂತ್ರವನ್ನು ಪಟಕಿಸುತ್ತಾ ಬಹಳ ಭಾರವಾಗಿದ್ದ ಆ ಬಿಂದಿಗೆಯನ್ನು ಕಷ್ಟದಿಂದ ಮೇಲಕ್ಕೆ ಎತ್ತಿದನು. ಬಿಂದಿಗೆಯ ಆಕೃತಿಯನ್ನು ನೋಡಿಯೇ ದಾಸೇಗೌಡನಿಗೆ ಮಹದಾನಂದವಾಯಿತು. ಅದರಲ್ಲಿ ಎಷ್ಟು ಕಮ್ಮಿ ಎಂದರೂ ೫-೬ ಬಳ್ಳ ನಾಣ್ಯಗಳಿರಬೇಕೆಂದು ಅವನು ಊಹಿಸಿದನು.

ಮಂತ್ರವಾದಿಯು “ಇದ್ಕೆ ಸಾಂತಿ ಮಾಡಬೇಕು. ಇಲ್ದಿದ್ರೆ ಲಕ್ಷ್ಮಿ ಸಿಟ್ಕೊಂಡು ಮನೆ ಉರಿಸಿಬಿಟ್ಟಾಳು” ಎಂಬುದಾಗಿ ಹೇಳಿಕೊಂಡು ಆ ಕೊಡವನ್ನು ಎತ್ತಿಕೊಂಡು ದಾಸೇಗೌಡನ ಮನೆಯ ಕೂಠಡಿಗೆ ಹೋದನು. ಅಲ್ಲಿ ನಾಲ್ಕು ಕಡೆಗೂ ನಾಲ್ಕು ಕಲಶಗಳು, ತೆಂಗಿನಕಾಯಿ, ಬಾಳೆ ಹಣ್ಣು, ನಿಂಬೆಹಣ್ಣು ಕೆಂಪು ಅನ್ನದ ರಾಶಿ ದೀಪಗಳು ಇವುಗಳನ್ನೆಲ್ಲಾ ಇಟ್ಟು ಆಟಾಟೋಪದ ಅವಾಂತರವನ್ನು ಹತ್ತಿಸಿದನು. ಅನಂತರ ದಾಸೇಗೌಡನಿಗೆ “ಮನ್ಲಿ ಒಂದು ಗುಲಗಂಜಿ ತೂಕ ಚಿನ್ನ ಇರೋಕಾಗದು. ಎಲ್ಲಾನೂ ತಂದು ಇಲ್ಲಿ ಪೂಜೆಗೆ ಇಡಬೇಕು. ಚಿನ್ನ ಇಟ್ಕೊಂಡ್ರೆ ಲಕ್ಷ್ಮಿ ನಿನ್ನ ಮನೆ ತಳೋತಾಳೆ” ಎಂದು ಹೇಳಿ ದಾಸೇಗೌಡನ ಮನೆಯಲ್ಲಿ ಅವನ ಹೆಂಡತಿಯ ಮೈಮೇಲೂ ಮಗಳ ಮೈಮೇಲೂ ಇದ್ದ ಸುಮಾರು ಸಾವಿರ ರೂಪಾಯಿ ಬೆಲೆಬಾಳುವ ಚಿನ್ನದ ನಗಗಳನ್ನೆಲ್ಲಾ ತರಿಸಿ ಬಿಂದಿಗೆಯ ಸುತ್ತಾ ಇಟ್ಟು ಪೂಜೆ ಮಾಡತೊಡಗಿದನು. ಅನಂತರ ದಾಸೇಗೌಡನಿಗೆ “ಇದರ ಪೂಜೆಗೆ ನಾಲ್ಕುದಿಕ್ಕಿಗೂ ನಾಲ್ಕು ಕುರಿಯ ಕಾಲುಗಳು ಬೇಕು ತೆಗೆದುಕೊಂಡು ಬಾ” ಎಂಬುದಾಗಿ

ಹೇಳಿದನು. ದಾಸೇಗೌಡನು ಹಿತ್ತಲಲ್ಲಿ ಕುರಿಯನ್ನು ಕಡಿದು ಅದರ ಕಾಲನ್ನು ತರುವುದಕ್ಕೆ ಹೋದನು.

ಮಂತ್ರವಾದಿಯ ಕೊಠಡಿಯಲ್ಲಿ ಒಂದೇ ಒಂದು ದೀಪ ಮಂಕಾಗಿ ಉರಿಯುತ್ತಿತ್ತು. ಅವನು ಬಿಂದಿಗೆಗೆ ಪೂಜೆಗಾಗಿ ಇಟ್ಟಿದ್ದ ಒಡವೆಗಳನ್ನೆಲ್ಲಾ ಒಂದೊಂದಾಗಿ ತೆಗೆದು ಒಂದು ಚೀಲಕ್ಕೆ ಹಾಕಿ ತನ್ನ ಜತೆಯವನ ಕೈಗೆ ಕೊಟ್ಟು ಯಾವುದೋ ಬೀಳ್ಳು (ಲತೆ) ತೆಗೆದುಕೊಂಡು ಬಾ ಎಂಬುದಾಗಿ ಹೇಳಿ ಅವನನ್ನು ಕಳುಹಿಸಿಬಿಟ್ಟಿನು. ಅನಂತರ ದಾಸೇಗೌಡನನ್ನು ಕರೆದು "ಹೊಳೆಗೆ ಹೋಗಿ ನಿರ್ವಾಣದಲ್ಲಿ ತಾನ ಮಾಡ್ಕೊಂಡು ಬರ್ಬೇಕು. ಯಾರೊಂದಿಗೂ ಇನ್ನು ನಾನು ಮಾತಾಡಬಾರದು. ಯಾರೂ ನನ್ನ ನೋಡಬಾರದು. ತಾನ ಮಾಡ್ಕೊಂಡು ಬಂದ್ಬಿಡ್ಕೀನಿ. ಆಮೇಲೆ ಲೋಕಾನೆ ನಿನ್ಪಾದಕ್ಕೆ ಬಿದ್ಬಿಡ್ತದೆ. ಆ ಕೋಣೆಗೆ ಬೀಗ ಹಾಕಿ ಅದರ ಎಸಳು ನನ್ನ ಕೈಗೆ ತಾ. ಯಾರೂ ಒಳೀಕೆ ಹೋಗಬೇಡಿ" ಎಂದನು. ದಾಸೇಗೌಡನು ಬಾಗಿಲಿಗೆ ಬೀಗವನ್ನು ಹಾಕಿ ಎಸಳನ್ನು ಮಂತ್ರವಾದಿಯ ಕೈಗೆ ಕೊಟ್ಟನು.

ಮಂತ್ರವಾದಿಯು ನದಿಗೆ ಹೋದನು. ದಾಸೇಗೌಡನ ಆನಂದಕ್ಕೆ ಪಾರವೇ ಇರಲಿಲ್ಲ. ಅವನು "ನಾನು ಮೊದಲು ದಾಸ ಆಗಿದ್ದೆ. ಈಚೆಗೆ ದಾಸೇಗೌಡನಾದೆ. ಇನ್ನುಮೇಲೆ ನಾಳೆಯಿಂದ ಎಲ್ಲರೂ ನನ್ನನ್ನು ದಾಸೇಗೌಡರೆ ಎಂಬುದಾಗಿ ಕರೀಬೇಕು. ನನ್ನ ಇನ್ಮೇಲೆ ದಾಸೇಗೌಡ ಅನ್ನೋರ್ನ ನಡು ಬೀದಿಲಿ ಹಿಡಿಸಿ ಚಾವಟೀಲಿ ಹೊಡೆಸ್ತೀನಿ. ಸಾಹುಕಾರ್ರು, ಜೋಡಿದಾರ್ರು ಎಲ್ಲರನ್ನೂ ಇನ್ನು ಬಾರೋ ಹೋಗೊ ಅನ್ನಬೇಕು. ನನಗಿಂತ ಅವರದೇನು ಹೆಚ್ಚು? ಸದ್ಯ ಈ ಮಂತ್ರವಾದಿ ಬಂದು ನಾನು ಬದುಕಿದೆ. ಅವನೇ ನನ್ಭಾಗದ ದೇವರು" ಎಂದುಕೊಂಡನು.

ಮಂತ್ರವಾದಿಯು ನದಿಗೆ ಹೊರಟು ಹೋಗಿ ಸುಮಾರು ಒಂದು ಗಂಟೆಯಾದರೂ ಹಿಂದಿರುಗಲಿಲ್ಲ. ದಾಸೇಗೌಡನಿಗೆ ಸ್ವಲ್ಪ ಗಾಬರಿಯಾಯಿತು. ಅವನು ನದಿಯ ತೀರಕ್ಕೆ ಹೋಗಿ ನೋಡಿದನು. ಅಲ್ಲಿ ಮಂತ್ರವಾದಿಯ ಸುದ್ದಿ ಇರಲಿಲ್ಲ. ದಾಸೇಗೌಡನಿಗೆ ಮೈಬೆವೆತುಕೊಂಡಿತು. ಕಣ್ಣು ಮಂಜಾದಂತೆ ಆಯಿತು. ಅವನು ಮನೆಗೆ ಓಡಿದನು. ಮನೆಯಲ್ಲಿ ಮಂತ್ರವಾದಿಯ ಕೊಠಡಿಯ ಬೀಗವನ್ನು ಒಡೆದನು. ಒಳಗೆ ಒಡವೆಗಳೊಂದೂ ಇರಲಿಲ್ಲ. ಅವನ ಹೆಂಡತಿ ಮಕ್ಕಳು ಎಲ್ಲರೂ ಕೊಠಡಿಗೆ ಬಂದರು. ಗೊಳೊ ಎಂಬುದಾಗಿ ಎಲ್ಲರೂ ಗಟ್ಟಿಯಾಗಿ ಅಳಲು ಪ್ರಾರಂಭಿಸಿದರು. ಅರ್ಧ ರಾತ್ರಿಯಲ್ಲಿ ದಾಸೇಗೌಡನ ಮನೆಯಲ್ಲಿ ಗೋಳನ್ನು ಕೇಳಿ ನಮ್ಮ ಊರಿನವರೆಲ್ಲಾ ಗಾಬರಿಯಿಂದ ಅವನ ಮನೆ ಕಡೆಗೆ ಓಡಿದರು. ಬಿಂದಿಗೆಯಲ್ಲಿ ಮಣ್ಣು ತುಂಬಿತ್ತು.

ಆ ಬಿಂದಿಗೆಯನ್ನು ಅವನ ಹಿತ್ತಲಿನಲ್ಲಿ ಮಂತ್ರವಾದಿಗಳೇ ಹೂಳಿದ್ದರೆಂಬುದರಲ್ಲಿ ಸಂದೇಹವಿರಲಿಲ್ಲ. ಅಲ್ಲದೆ ಮೊದಲ ರಾತ್ರಿ ಹಿತ್ತಲಲ್ಲಿ ಏನೋ ಆಗೆಯುವ ಸದ್ದೂ ಪಾತ್ರೆಯ ಸದ್ದೂ ಆಯಿತೆಂದು ದಾಸೇಗೌಡನ ಹೆಂಡತಿ ಹೇಳಿದಳು.

ಅಲ್ಲಿಂದ ಮುಂದೆ ದಾಸೇಗೌಡನ ಜೋರು ಬಹಳ ಕಡಮೆಯಾಯಿತು. ಮಾರನೆ ವರುಷ ಗ್ರಾಮಪಂಚಾಯ್ತಿ ಚುನಾವಣಿಯಲ್ಲಿ ಅವನಿಗೆ ಚೇರ್ಮನ್ ದೊರಕಲಿಲ್ಲ. ಹಣಕಾಸಿನ ಮುಗ್ಗಟ್ಟು ಅವನಿಗೆ ಬಹಳ ಹೆಚ್ಚಾಗಿ ಮತ್ತೆ ಮೊದಲಿನಂತೆ ಸಾಲಗಾರನಾದನು. ಸಾಲವನ್ನು ತೀರಿಸುವುದಕ್ಕೆ ಅವಕಾಶವಿಲ್ಲದೆ ಇದ್ದ ಒಂದೆರಡು ಹೊಲಗಳೂ ಗದ್ದೆಗಳೂ ಹೋಗುವ ಕಾಲ ಬಂದಿತು. ಮಕ್ಕಳು ಹೊಟ್ಟೆಗಿಲ್ಲದೆ ತಿರುಪೆ ಮಾಡುವ ಸ್ಥಿತಿ ಬಂದಿತು. ಆಗ ಒಂದು ದಿವಸ ನಾಣಿಯು ದಾಸೇಗೌಡನನ್ನು ಮನೆಗೆ ಕರೆಸಿದನು. ದಾಸೇಗೌಡನು ಹೋದಮೇಲೆ ನಾಣಿಯು ಅವನಿಗೆ ಒಂದು ಚೀಲವನ್ನು ಕೊಟ್ಟನು. ದಾಸೇಗೌಡನು ಅದನ್ನು ಬಿಚ್ಚಿನೋಡಿದನು. ಅದರಲ್ಲಿ ಮಂತ್ರವಾದಿಯು ಎತ್ತಿಕೊಂಡು ಹೋಗಿದ್ದ ಅವನ ಒಡವೆಗಳೆಲ್ಲಾ ಇದ್ದುವು. ದಾಸೇಗೌಡ ತನ್ನ ಕಣ್ಣನ್ನು ತಾನೇ ನಂಬಲಾರದೆ ಹೋದನು. ವಿಷಯವು ನಡೆದಿದ್ದುದು ಈ ರೀತಿ: ಮಂತ್ರವಾದಿಯು ತನ್ನ ಜತೆಯವನ ಕೈಲಿ ಒಡವೆಗಳನ್ನೆಲ್ಲಾ ಕಳುಹಿಸಿಕೊಟ್ಟಾಗ ನಾಣಿಯೂ ಶೀನಪ್ಪನೂ ನಮ್ಮೂರ ನದಿ ಸೇತುವೆಯ ಮೇಲೆ ಕುಳಿತುಕೊಂಡು ಹರಟೆಹೊಡೆಯುತ್ತಿದ್ದರು. ಅವರನ್ನು ನೋಡಿ ಮಂತ್ರವಾದಿಯ ಗೆಳೆಯನು ತಬ್ಬಿಬ್ಬಾದನು. ಅವರಿಗೆ ಅವನಲ್ಲಿ ಅನುಮಾನ ಬಂದಿತು. ಅವನನ್ನು ಹಿಡಿದು ವಿಷಯವನ್ನು ತಿಳಿದುಕೊಂಡು ಅವನಿಂದ ಒಡವೆಗಳನ್ನು ಕಸಿದುಕೊಂಡು ಇಟ್ಟುಕೊಂಡಿದ್ದರು.

* * * *

ಈಗ ನಮ್ಮ ಊರಿನಲ್ಲಿ ದಾಸೇಗೌಡನಂತಹ ಯೋಗ್ಯರೆ ಮತ್ತಾರೂ ಇಲ್ಲ.

# ಪ್ರಸನ್ನವಾದ ಕಲಹ

“ಧೈರ್ಯಗೆಡಬೇಡ, ದತ್ತಮಹನೀಯನೂ ಕೂಡ ಒಂದು ಸಲ ವೇದಗಳ ಕಡೆಗೆ ಕಲ್ಲನ್ನು ಎಸೆದನು” ಎಂಬ ಧೈರ್ಯವನ್ನು ಕೊಡುವ ಗಾದೆ ಜಗತ್ತಿನಲ್ಲಿ ಚೆನ್ನಾಗಿ ಪ್ರಸಿದ್ಧವಾಗಿದೆ. ಈ ಗಾದೆಯು ಪ್ರತಿದಿನವೂ ಯಾರಾದರೂ ಕೆಲವರ ಬಾಯಲ್ಲಿ ಇದ್ದೇ ಇದ್ದರೂ ಈ ದತ್ತಮಹನೀಯನ ವಿಚಾರದಲ್ಲಿ ಅವನು ದಯಾವಂತನೂ ವಿವೇಕಿಯೂ, ಅನೇಕ ಕಾಲ ಐಶ್ವರ್ಯ ಸಂಸಾರ ಸುಗುಣಗಳು ಉಳ್ಳವನೂ ಆಗಿದ್ದನೆಂಬ ಮೇಲೆ ಮೇಲಿನ ಅವನ ಜೀವನದ ಸಂಗತಿಗಳು ಹೊರತು, ಒಬ್ಬನಿಗಾದರೂ ಜಗತ್ತಿನಲ್ಲಿ ಅವನ ಜೀವನದ ಇತರ ಸಂಗತಿಗಳು ಗೊತ್ತಿವೆಯೇ ಎಂಬುದು ಅನುಮಾನಾಸ್ಪದವಾಗಿದೆ. ವೇದಗಳ ಕಡೆಗೆ ಕಲ್ಲನ್ನು ಎಸೆದ ಮೇಲಿನ ಸಂಗತಿಯನ್ನು ಕುರಿತು ಅಂತವರನ್ನು ಇನ್ನೂ ಸ್ಪಷ್ಟವಾಗಿ ಪ್ರಶ್ನೆ ಮಾಡಿದರೆ ಅವರು ಈ ಗಾದೆಯನ್ನು ಅಷ್ಟು ಸುಲಭವಾಗಿ ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ದತ್ತಮಹನೀಯನು ಬಹಳ ಮಹನೀಯನು. ಅವನ ಸ್ವಭಾವ ಉದಾತ್ತವಾದುದು. ಈ ಲೋಕದಲ್ಲಿ ಎಲ್ಲಾ ಸುಖಗಳನ್ನೂ ಅನುಭವಿಸುತ್ತಾ ಮೇಲಿನ ಲೋಕದಲ್ಲಿ ಎಲ್ಲಾ ವೈಭವಗಳೂ ದೊರಕುವುದು ಖಂಡಿತವಾಗಿದ್ದ ದತ್ತಮಹನೀಯನು ಅಂತಕ ನೀಚವಾದ ಕೆಲಸವನ್ನು ಮಾಡಲು ಕಾರಣವೇನು ಎಂಬುದಾಗಿ ಕೋಪದಿಂದಲೇ ಪ್ರತಿಭಟಿಸುತ್ತಾರೆ. ಈ ಕಥೆಯನ್ನು ಹೇಳುವವನಿಗೆ ಈ ವಿವರಗಳಿಂದ ತೃಪ್ತಿಯಾಗಲಿಲ್ಲ. ಆದುದರಿಂದ ಇವನು ಬಹಳ ಶೋಧನೆಗಳನ್ನು ನಡೆಸಿ ದತ್ತಮಹನೀಯನ ಬಾಲ್ಯ ಜೀವನದ ಈ ಕೆಳಗಿನ ಸಂಗತಿಗಳನ್ನು ಕಂಡುಹಿಡಿದಿದ್ದಾನೆ. ಅವನ್ನು ಹೀಗೆ ಹೇಳಬಹುದು:

ಈ ಸಂಗತಿಗಳು ಪ್ರಾರಂಭವಾದ ಕಾಲದಲ್ಲಿ ದತ್ತಮಹನೀಯನು ಪಟ್ಟಣದ ಅತ್ಯಂತ ನಿಕೃಷ್ಟವಾದ ಭಾಗದ ಹಳೆ ಗೋಡೆಗಳ ಸಂದಿಯೊಂದರಲ್ಲಿ ತನ್ನ ತಾಯಿಯೊಡನೆ ವಾಸಿಸುತ್ತಿದ್ದನು. “ಪರೀಕ್ಷೆಗಳಲ್ಲಿ ಮೊದಲನೆಯ ಸ್ಥಾನವನ್ನು ಹೊಂದಿ, ತತ್‌ಕ್ಷಣ ಜವಾಬ್ದಾರಿ ಅಧಿಕಾರಕ್ಕೆ ಏರಬೇಕು. ಯಾವಾಗಲೂ ಉತ್ಸಾಹದಿಂದಲೂ ವಿವೇಕದಿಂದಲೂ ಕೆಲಸಮಾಡಿ ಅಧಿಕಾರದ ಏಣಿಯಲ್ಲಿ ಮೇಲು ಮೇಲಕ್ಕೆ ಏರುತ್ತಾ ಹೋಗಬೇಕು. ತನ್ನ ದೇಶಕ್ಕೆ ಸಂಭವಿಸಬಹುದಾದ ತೀವ್ರವಾದ ಅಪಾಯದಿಂದ ದೇಶವನ್ನು ರಕ್ಷಿಸಿ, ಅದರ ಫಲವಾಗಿ ಅತ್ಯಂತ ಗೌರವಸ್ಥಾನವನ್ನು ಸ್ವೀಕರಿಸಿ, ಅನಂತರ ತನ್ನ ಹಳ್ಳಿಗೆ ಹೋಗಿ ಒಂದು ಸುಂದರವಾದ ಅರಮನೆಯನ್ನು ಕಟ್ಟಿಕೊಂಡು ವಾಸಮಾಡಬೇಕು. ಈ ಅರಮನೆಯನ್ನು ಹೇಗೆ ಹೇಗೆ ಕಟ್ಟಬೇಕೆಂಬ ವಿವರಗಳನ್ನೆಲ್ಲಾ

ದತ್ತಮಹನೀಯನು ಆಗಲೇ ತೀರ್ಮಾನಿಸಿದ್ದನು. ಆ ಅರಮನೆಯಲ್ಲಿ ಒಬ್ಬ ಶಿಕ್ಷಿತಳೂ ಸುಂದರಳೂ ಆದ ರಾಜಕನ್ಯೆಯನ್ನು ವಿವಾಹವಾಗಿ, ಕೃತಜ್ಞನಾದ ಚಕ್ರವರ್ತಿಯ ಕೈಯಿಂದ ಆಗಾಗ್ಗೆ ಕಾಣಿಕೆಗಳ ರೂಪವಾದ ಪಾರಿತೋಷಕವನ್ನು ಸ್ವೀಕರಿಸುತ್ತಾ ನೀತಿ, ಸುಭಾಷಿತಗಳಲ್ಲಿ ನೆಟ್ಟ ಮನಸ್ಸುಳ್ಳವನಾಗಿ ತನ್ನ ಆಯುಷ್ಯದ ಉಳಿದ ಭಾಗವನ್ನು ಕಳೆಯಬೇಕು ಎಂಬುದೇ ಯೌವನದಲ್ಲಿ ದತ್ತಮಹನೀಯನ ಆಸೆಯಾಗಿದ್ದಿತು. ಇಂತಹ ಸುಂದರವಾದ ಭವನದಿಂದ, ಪಟ್ಟಣದ ಹಳೆಗೋಡೆಯ ಶೈತ್ಯವಾದ ಸಂದಿಗೂ, ಆ ಮಹತ್ವವಾದ ಅಧಿಕಾರದಿಂದ, ಕಣ್ಣಿಲ್ಲದ ಕುರುಡರನ್ನು ಪಟ್ಟಣದ ಬೀದಿಗಳಿಂದ ಬೀದಿಗಳಿಗೆ ದಾರಿ ತೋರಿಸುತ್ತಾ ಕರೆದುಕೊಂಡು ಹೋಗುವ ಕೆಲಸಕ್ಕೂ ಇಳಿದುದು ದತ್ತಮಹನೀಯನಿಗೆ ಇಷ್ಟವೂ ಸುಲಭವೂ ಆಗಿರಲಿಲ್ಲ. ಇಷ್ಟು ಕಷ್ಟವಾದರೂ ದತ್ತಮಹನೀಯನು ತನ್ನ ಜೀವನದ ಬೆಳಕುಗಳಾದ ಸುಭಾಷಿತಗಳನ್ನೂ ನೀತಿಮಾರ್ಗಗಳನ್ನೂ ಬಿಡಲಿಲ್ಲ. ಕಷ್ಟಗಳು, ಸುಭಾಷಿತಗಳಲ್ಲಿ ಅವನ ನಂಬಿಕೆಯನ್ನು ಕಡಿಮೆ ಮಾಡಲು ಅವನು ಅವಕಾಶವನ್ನು ಕೊಡಲಿಲ್ಲ. ಅವನು ಆಗಾಗ್ಗೆ ಲಕ್ಷಾಧಿಪತಿಯಾಗುತ್ತೇನೆಂಬ ಉದ್ದೇಶದಿಂದ ಹೊರಟು, ತನ್ನ ಧ್ಯೇಯಗಳನ್ನು ಬಿಡದೆ ಲಕ್ಷಾಧಿಕಾರಿಯಾಗುವುದು ಏನೂ ಹೆಚ್ಚು ವಿಚಾರವಲ್ಲ. ಆದರೆ ಲಕ್ಷಾಧಿಕಾರಿಯಾಗುತ್ತೇನೆಂಬ ಆಸೆಯಿಂದ ಹೊರಟು, ಕುರುಡು ಭಿಕ್ಷುಕರನ್ನು ಪಟ್ಟಣದ ಒಂದು ಕಡೆಯಿಂದ ಒಂದು ಕಡೆಗೆ ದಾರಿ ತೋರಿಸುತ್ತಾ ಕರೆದುಕೊಂಡು ಹೋಗುವ ಸ್ಥಿತಿಗೆ ಬಂದರೂ, ಯೌವನದ ಆಸೆಯನ್ನೂ ನಂಬಿಕೆಯನ್ನೂ ಅಚ್ಚಳಿಯದಂತೆ ಉಳಿಸಿಕೊಂಡಿರುವುದು ಅತ್ಯಂತ ಅಭಿನಂದನೆಗೆ ಅರ್ಹವಾದುದು" ಎಂಬುದಾಗಿ ಹೇಳುತ್ತಿದ್ದನು.

ಈ ಅತ್ಯಂತ ಮಹತ್ತರವಾದ ಮತ್ತು ನೀತಿಪರವಾದ ಅವನ ಆಲೋಚನೆಗಳನ್ನು ಕೇಳಿದಾಗಲೆಲ್ಲಾ ಅವನ ಮುದಿ ತಾಯಿಯು "ಸಂದೇಹವೇನು. ತಾನು ತಿನ್ನುವ ಆಹಾರದಲ್ಲಿ ತಿಳಿಯದೆ ಕಾಲು ಹಾಕುವ ಮೂರ್ಖ ಕರುವೂ ಇದೇ ವಿಧವಾದ ಸಮಾಧಾನವನ್ನು ಹೊಂದುತ್ತದೆ. ನನ್ನ ಮಟ್ಟಿಗೆ ಸ್ವಲ್ಪವೇ ಸ್ವಲ್ಪ ಸುಖಕ್ಕಾಗಿ, ನಶ್ವರವಾದ ಸುಖಕ್ಕಾಗಿ, ಬಡತನದೊಡಗೂಡಿದ ಸಮಸ್ತವಾದ ಉದಾತ್ತವಾದ ನೀತಿಗಳನ್ನೂ ಧರ್ಮಗಳನ್ನೂ ಬದಲಾಯಿಸಲು ಸಿದ್ಧಳಾಗಿದ್ದೇನೆ. ಅಷ್ಟೇ ಅಲ್ಲ. ಜತೆಗೆ ಪೂರ್ವಿಕರ ಮಹದ್ಗ್ರಂಥಗಳಲ್ಲಿ ದೊರಕುವ ಎಲ್ಲಾ ತತ್ವಗಳನ್ನೂ ಸತ್ಯಗಳನ್ನೂ ಎಸೆದು ಬಿಡಲು ಸಿದ್ಧಳಾಗಿದ್ದೇನೆ." ಎನ್ನುತ್ತಿದ್ದಳು.

ದತ್ತಮಹನೀಯನು "ಆದರೆ ಅಮ್ಮಾ ಮೂರು ಸಾವಿರ ವರುಷಗಳ ಕೆಳಗೆ ರಾಜರ್ಷಿಯಾದ 'ನಿನ್ ಹೊ' ಎಂಬುವನು ಹೀಗೆ ಹೇಳಿಲ್ಲವೆ "ನಕ್ಷತ್ರಗಳು ಕಾಣುವ ತೂತು

ಸೂರಿನ ಗವಿಯು, ಅನ್ಯಾಯಗಳ ಫಲವಾದ ಚಿನ್ನದ ಪಲ್ಲಕ್ಕಿಗಿಂತ ಉತ್ತಮವಾದುದು" ಆ ಮಾತಿನ ಸತ್ಯವು ಅಲ್ಲಿಂದ ಇಲ್ಲಿಯವರೆಗೆ ಅಚ್ಚಳಿಯದೆ ನಿಂತಿದೆ.

ಅವನ ತಾಯಿಯು "ಆ ವಿಶಾಲಮತಿಯಾದ ರಾಜನು, ತಾನೇ ಮುದುಕನೂ ರೋಗಿಯೂ ಆಗಿದ್ದಾಗ, ಕೆಲವು ವರುಷಗಳಾದರೂ, ಇತರರಿಗೆ ಮುಂದಾಲೋಚನೆಯಿಂದ ಶಿಫಾರಸು ಮಾಡಿದ ಇಂತಹ ಮನೆಯಲ್ಲಿ ಇದ್ದು ತೋರಿಸಿಕೊಟ್ಟಿದ್ದರೆ ಆ ಮಾತಿನ ಬೆಲೆಯು ಇನ್ನೂ ಹೆಚ್ಚಾಗುತ್ತಿದ್ದಿತು" ಎಂಬುದಾಗಿ ಹೇಳಿ, ದತ್ತಮಹನೀಯನಿಗೆ ತಮ್ಮ ಒಳ್ಳೆಯ ಅದೃಷ್ಟವನ್ನು ಸ್ಥಾಪಿಸಲು ಹೆಚ್ಚು ಮಾತಿಗೆ ಅವಕಾಶ ಕೊಡದೆ ಮೂಲೆಯಲ್ಲಿದ್ದ ಹುಲ್ಲಿನ ಹಾಸಿಗೆಯ ಮೇಲೆ ಹೋಗಿ ಮಲಗಿಕೊಂಡಳು.

ಇಲ್ಲಿಯವರೆಗೆ ದತ್ತಮಹನೀಯನ ಸ್ವಾಭಾವಿಕವಾದ ಗೌರವ ಬುದ್ಧಿ ಮತ್ತು ಸ್ವಭಾವದಿಂದ, ಅವನು ಯಾವ ಕಷ್ಟ ಬಂದರೂ ಅದನ್ನು ಶಾಂತನಾಗಿ ಎದುರಿಸುತ್ತಿದ್ದನು. ಆದರೆ ಈಗ ಅವನ ತಾಯಿಯು ತೋರಿಸುತ್ತಿದ್ದ ಶಾಶ್ವತವಾದ ಅಸಹನೆಯ ಜತೆಗೆ, ಇನ್ನೂ ಕೆಲವು ಸಂಕಟಗಳು ಪ್ರಾಪ್ತವಾದುವು. ದತ್ತಮಹನೀಯನ ಜೀವನವು, ಅನೇಕ ಕುರುಡು ಭಿಕ್ಷುಕರನ್ನು ಅಂಗಡಿಯಿಂದ ಅಂಗಡಿಗೂ ಮನೆಯಿಂದ ಮನೆಗೂ ಕರೆದುಕೊಂಡು ಹೋಗಿ, ಇವರ ಕೈಯಿಂದ ತಪ್ಪಿಸಿಕೊಳ್ಳಲು ಅಂಗಡಿಯವರು ಕೊಡುತ್ತಿದ್ದ ಕಾಸುಗಳನ್ನು ಸಂಗ್ರಹಿಸುವುದರಿಂದ ನಡೆಯುತ್ತಿದ್ದಿತೆಂದು ಮೊದಲೇ ಹೇಳಿದ್ದೇನೆ. ಈ ಚಟವಟಿಕೆಯಲ್ಲಿ, ಸಂಪ್ರದಾಯ ಶರಣನಾದ ದತ್ತಮಹನೀಯನು, ಪ್ರಾಚೀನ ಕಾಲದಿಂದಲೂ ಕುರುಡು ಭಿಕ್ಷುಕರು ಅನುಸರಿಸುತ್ತಿದ್ದ ಪದ್ಧತಿಯನ್ನೇ ಅನುಸರಿಸುತ್ತಿದ್ದನು. ಆದರೆ ಆ ರಾಮಾಯಣ ಭಾರತದ ಕಾಲದ ಪದ್ಧತಿಗಳೂ ಪ್ರಾಚೀನರ ನಿಧಾನವಾದ ಶಾಂತವಾದ ಮಾರ್ಗಗಳೂ ಈಗ ಪ್ರಯೋಜನಕಾರಿಗಳಾಗಲಿಲ್ಲ. ಎಲ್ಲಾ ಕಡೆಯೂ ಇವನೊಂದಿಗೆ ಸ್ಪರ್ಧಿಸುವವರ ಹೊಸ ಹೊಸ ಪೈಪೋಟಿಗಾರರ ಸಂಖ್ಯೆ ಹೆಚ್ಚಾಯಿತು. ಅದರಿಂದ ಅವನ ಉತ್ಪತ್ತಿಯು ದಿನ ದಿನಕ್ಕೂ ಕಡಿಮೆಯಾಗುತ್ತಾ ಬಂದಿತು. ದತ್ತಮಹನೀಯನಂತಹ ಪೂರ್ವಾಚಾರದಲ್ಲಿ ಪೂರ್ಣವಾಗಿ ನಂಬಿಕೆಯುಳ್ಳವನ ಮನಸ್ಸಿನಲ್ಲಿಯೂ ಸಂಶಯಗಳು ಉತ್ಪನ್ನವಾಗತೊಡಗಿದುವು.

ತಪ್ಪುದಾರಿಯನ್ನು ಹಿಡಿದವರೆಂದು ದತ್ತಮಹನೀಯನು ಹೇಳುತ್ತಿದ್ದವರ ಪೈಕಿ "ಹೊ" ಎಂಬುವನು ಮುಖ್ಯನಾದವನು. ಅವನು, ದೂರದಿಂದ ಕೆಲವು ದಿನಗಳ ಮುಂಚೆ ಮಾತ್ರ ಆ ನಗರಕ್ಕೆ ಬಂದಿದ್ದರೂ, ಅವನು ವ್ಯಾಪಾರಿಗಳಿಗೂ ವರ್ತಕರಿಗೂ, ನಗರದ ಉಳಿದ ಎಲ್ಲಾ

ಭಿಕ್ಷುಕರಿಗೂ ಚೆನ್ನಾಗಿ ಪರಿಚಿತನಾಗಿದ್ದನು. ಆ ಭಿಕ್ಷುಕರು, "ಹೋ" ಬರುವುದಕ್ಕೆ ಮುಂಚೆ ಎರಡು ಕೈಗಳಲ್ಲೂ ತಮ್ಮ ಉತ್ಪತ್ತಿಯನ್ನು ಎಣಿಸುತ್ತಿದ್ದವರು ಈಗ ಎರಡು ಬೆರಳುಗಳಲ್ಲಿ ಮಾತ್ರ ಎಣಿಸುತ್ತಿದ್ದರು. "ಹೊ"ವಿನ ನೆರಳನ್ನು ಕಂಡ ಕೂಡಲೇ ವರ್ತಕರೂ ಭಿಕ್ಷುಕರ ನಡುಗುತ್ತಿದ್ದರು. ಈ ತನ್ನ ಚಟುವಟಿಕೆಯಿಂದಲೇ ಬೇಸರಿಕೆಯನ್ನು ಉಂಟುಮಾಡುತ್ತಿದ್ದ ಮನುಷ್ಯನು, ತನ್ನ ಉದ್ದೇಶ ಮತ್ತು ಮಾರ್ಗವನ್ನು ಮುಚ್ಚಿ ಇಡುತ್ತಿರಲಿಲ್ಲ. ಅಂಗಡಿ ಅಥವ ಮನೆಯ ಮುಂದೆ ಬಂದ ಕೂಡಲೆ ಅವನು "ನನ್ನ ಉದ್ದೇಶ, ವೀಣೆಯ ಅನೇಕ ತಂತಿಗಳಲ್ಲಿ ನಾದ ಹೊರಡುವಂತೆ, ದಾನದ ತಳಹದಿಗಳನ್ನು ಅಲ್ಲಾಡಿಸಿ ಧ್ವನಿ ಹೊರಡಿಸುವುದೇ ಆಗಿದೆ." ಎಂದು ಹೇಳುತ್ತಿದ್ದನು. ದಾನಶೂರರ ಮಧ್ಯೆ ತಾನು ಬರುವುದು ಧ್ಯಾನಮಾಡುತ್ತಿರುವ ಆಮೆಗಳ ಮಧ್ಯೆ ಹೆಚ್ಚಾಗಿ ಧ್ವನಿ ಮಾಡುವ ಪಟಾಕಿಯಂತೆ ಎಂದು ಅವನು ಹೇಳುತ್ತಿದ್ದನು. ತನ್ನ ಹೆಸರು "ನಿಂತಲ್ಲಿ ನಿಲ್ಲದೆ ಓಡುವವನು" ಎಂದೂ ಅವನು ಹೇಳುತ್ತಿದ್ದನು. ಅವನಿಗೆ ಸ್ವಲ್ಪವೂ ಸಂಯಮವೆಂಬುದು ಇರಲಿಲ್ಲ. ದೊಡ್ಡ ವರ್ತಕನ ಅಂಗಡಿಗೆ ಬಂದು, ವ್ಯಾಪಾರ ಮಾಡಲು ಕಾಯುತ್ತಾ ನಿಂತಿರುವ ಗಿರಾಕಿಗಳನ್ನೆಲ್ಲಾ ಆಚೆಗೆ ತಳ್ಳಿ ಸಾಹುಕಾರನೇ ತನ್ನನ್ನು ಮಾತನಾಡಿಸುವವರೆಗೆ ಅವನು ಪೆಟ್ಟಿಗೆಗಳನ್ನೂ ಡಬ್ಬಾಗಳನ್ನೂ ಬೋರ್ಡುಗಳನ್ನೂ ಧಡಬಡನೆ ಒಂದೇ ಸಮನೆ ಬಡಿಯುತ್ತಿದ್ದನು. ಅನಂತರ "ಇದೋ ನಮಸ್ಕಾರ. ಈ ಅವಿದ್ಯಾವಂತನನ್ನು ಒಳಗಿನ ದಿವಾನಖಾನೆಗೆ ಬರಬೇಕೆಂದು ಪ್ರಾರ್ಥಿಸಬೇಡಿ. ಯಾಕೆಂದರೆ ಗ್ರಹಗಳ ಚಲನವಲನಗಳನ್ನೇ ಆಗಲಿ ಅಥವಾ ಮಾನ್ಯನಾದ ಚಕ್ರವರ್ತಿಯ ಆರೋಗ್ಯವನ್ನಾಗಲಿ ಕುರಿತು ಮಾತನಾಡಲು ಇವನಿಗೆ ವಿರಾಮವಿಲ್ಲ. ನೋಡಿ ಅರ್ಧ ರುಪಾಯಿ ಕೊಟ್ಟರೆ ೭ ದಿವಸ ನನ್ನ ಕಿರುಕಳ ನಿಮಗೆ ಇಲ್ಲವಾಗುವುದು. ಇಲ್ಲಿ ತೆಗೆದುಕೊಳ್ಳಿ, ಸರಿಯಾಗಿ ಬರೆದು ರುಜು ಮಾಡಿದ ರಸೀತಿ ಇದೆ. ಸರಸ್ವತಿ ಪ್ರಸನ್ನ ಬೇಡ. ಚಿಲ್ಲರೆಯನ್ನೇ ಕೊಟ್ಟು ಬಿಡಿ." ವರ್ತಕನು ತತ್‌ಕ್ಷಣ ಅವನ ಪ್ರಾರ್ಥನೆಯನ್ನು ನಡೆಸಿದರೇ ಸರಿ. ಇಲ್ಲವಾದರೆ 'ಹೊ' ಅಂಗಡಿಯಲ್ಲಿದ್ದ ವ್ಯಾಪಾರದ ಸಾಮಾನುಗಳನ್ನೆಲ್ಲಾ ದಡಬಡನೆ ಹೊರಕ್ಕೆ ಎಸೆಯುತ್ತಿದ್ದನು; ಸೂಕ್ಷ್ಮವಾದ ಗಾಜು ಮುಂತಾದ ಸಾಮಾನುಗಳ ಮೇಲೆ ಹೊರಳಾಡುತ್ತಿದ್ದನು. ಹುಚ್ಚನಂತೆ ನೆಲದಮೇಲೆ ಉರುಳಾಡುತ್ತಿದ್ದನು. ಇನ್ನೂ ಅನೇಕ ರೀತಿಯ ಉಪಾಯಗಳನ್ನು ಮಾಡುತ್ತಿದ್ದನು. ಗಿರಾಕಿಗಳೆಲ್ಲ ಹೆದರಿಕೊಂಡು ಅಂಗಡಿ ಬಿಟ್ಟು ಓಡಿಬಿಡುತ್ತಿದ್ದರು.

ಏನು ಮಾಡಿದರೂ ಭಿಕ್ಷವನ್ನು ಕೊಡದ ಕೆಲವು ಮೊಂಡು ವರ್ತಕರ ಅಂಗಡಿಯಲ್ಲಿ 'ಹೊ'ವು ತನ್ನ ಕೋಟಿನ ಜೇಬಿನಲ್ಲಿ ಇಟ್ಟುಕೊಂಡಿದ್ದ ಉದ್ದವಾದ ಭಯಂಕರವಾದ ಚೂರಿಯನ್ನು

ಎಳೆದು, ಚುಚ್ಚಿಕೊಳ್ಳದಿದ್ದರೂ ನೋಡಿದವರಿಗೆ ಗಾಬರಿಯಾಗುವಂತೆ ತನ್ನ ಮೈಗೆ ತಿವಿದುಕೊಳ್ಳುವಂತೆ ನಟಿಸುತ್ತಿದ್ದನು. ಅನಂತರ ಭಯಂಕರವಾಗಿ ಕೂಗುತ್ತಾ ಅಂಗಡಿಯ ಬಾಗಿಲಿನಲ್ಲಿ ಮಲಗಿಕೊಂಡು, ಬರುವ ಗಿರಾಕಿಗಳಿಗೆ 'ಇಲ್ಲಿ ಹೋಗಬೇಡಿ, ಈ ವರ್ತಕ ನಿಮ್ಮನ್ನು ಒಳಕ್ಕೆ ಉಪಾಯವಾಗಿ ಕರೆದುಕೊಂಡು ಖನಿ ಮಾಡುತ್ತಾನೆ' ಎಂದು ಹೇಳಿ ತಾನೇ ತನ್ನ ಮೈಯಲ್ಲಿ ಮಾಡಿಕೊಂಡಿದ್ದ ಗಾಯಗಳನ್ನೆಲ್ಲಾ ತೋರಿಸುತ್ತಿದ್ದನು. ಹೀಗೆ 'ಹೊ' ವು ಒಂದೇ ಅಂಗಡಿ ಮುಂದೆ ಅನೇಕ ಗಂಟೆಗಳನ್ನು ಕಳೆಯುವಂತೆ ತೋರುತ್ತಿದ್ದರೂ, ಅದೂ ಅವನ ಕಸಬಿಗೆ ಸಹಾಯಕವಾಗಿಯೇ ಇದ್ದಿತು. ಯಾಕೆಂದರೆ ವಿಚಾರವು ಇತರ ವರ್ತಕರಿಗೆ ತಿಳಿದಕೂಡಲೇ ಅವರು 'ಹೊ'ವು ತಮ್ಮ ಬಾಗಿಲಿಗೆ ಬಂದು ತಮ್ಮ ಕ್ಷೇಮಸಮಾಚಾರವನ್ನು ವಿಚಾರಿಸಲು ಕಾಯದೆ ದುಡ್ಡನ್ನು ಕೈಯಲ್ಲಿ ಹಿಡಿದುಕೊಂಡು 'ಹೊ' ವಿಗೆ ಬಲಾತ್ಕಾರವಾಗಿ ಕೊಟ್ಟು "ಈ ಪ್ಲೇಗು ಇರುವ ಬೀದಿಯಿಂದ ಬೇಗ ಹೊರಟು ಹೋಗಿ" ಎಂದು ಕಳುಹಿಸುತ್ತಿದ್ದರು. ನಗರದ ಸಾಮಾನ್ಯಭಿಕ್ಷುಕರಿಗೆ ಈ ಪೈಪೋಟಿಯಿಂದ ಬಹಳ ಕಷ್ಟವಾಯಿತು. ದತ್ತಮಹನೀಯಗಂತೂ ಕಣ್ಣೆ ಕಾಣದಂತೆ ಆಯಿತು. ಅವನು ಪ್ರಾಚೀನ ಪದ್ಧತಿಗಳನ್ನು ಗೌರವಿಸುತ್ತಾ ಶಾಂತಿಯಿಂದಲೂ ವಿರಾಮದಿಂದಲೂ ತನ್ನ ಭಿಕ್ಷುಕರ ಗುಂಪನ್ನು ಅಂಗಡಿಯಿಂದ ಅಂಗಡಿಗೆ ಕರೆದುಕೊಂಡು ಹೋಗುತ್ತಿದ್ದನು. ಅವನು ವರ್ತಕರನ್ನು ವಿಧೇಯತೆಯಿಂದಲೂ ಉಪಾಯದಿಂದಲೂ ಪ್ರಾರ್ಥಿಸುತ್ತಿದ್ದನು. ಅವರು ಅವನ ಪ್ರಾರ್ಥನೆಯನ್ನು ಲಾಲಿಸಿ ಭಿಕ್ಷವನ್ನು ಕೊಡದಿದ್ದರೆ ಅವನು ಅನುಸರಿಸುತ್ತಿದ್ದ ಅತ್ಯಂತ ತೀಕ್ಷ್ಣವಾದ ಮಾರ್ಗವೆಂದರೆ ಎಲ್ಲಾ ಭಿಕ್ಷುಕರನ್ನೂ ಬಾಗಿಲಿನಲ್ಲಿ ಸಾಲಾಗಿ ನಿಲ್ಲಿಸಿ ದಾನದ ಫಲಗಳನ್ನೂ ದಾನಮಾಡದ ಜಿಪುಣರಿಗೆ ಮೇಲು ಲೋಕದಲ್ಲಿ ಸಂಭವಿಸುವ ಕಷ್ಟಗಳನ್ನೂ ಕುರಿತು ಒಟ್ಟಾಗಿ ಹಾಡುವುದೇ ಆಗಿದ್ದಿತು. ಹೀಗೆ ದತ್ತಮಹನೀಯನು, ಕೆಲವು ಕಾಸುಗಳು ಬಂದರೂ ಸಾಕೆಂದು ಅನೇಕ ಗಂಟೆಗಳು ಒಂದೇ ಅಂಗಡಿಯ ಮುಂದೆ ನಿಲ್ಲುತ್ತಿದ್ದನು. ಆದರೆ ಈಗ ಅವನಿಂದ ವರ್ತಕರಿಗೆ ಭಯವೇ ಇರಲಿಲ್ಲ. 'ಹೊ'ವಿಗೆ ಹೋಲಿಸಿಕೊಂಡು, ವರ್ತಕರು ಇವನನ್ನು ಸ್ವಾಗತಿಸುತ್ತಿದ್ದರು. ಇವನ ಹಿಂಸೆಯಿಂದ ತಪ್ಪಿಸಿಕೊಳ್ಳಲು ಅವರು ಏನು ಮಾಡಿದರೂ ಕಾಸು ಬಿಚ್ಚಲು ಒಪ್ಪುತ್ತಿರಲಿಲ್ಲ. "ನಾವು ಒಂದೇ ದಿನ ಆ ಕಳ್ಳನಾದ 'ಹೊ' ವಿಗೆ, ಅನೇಕ ತಿಂಗಳುಗಳಿಗಾಗಿ ಇಟ್ಟಿದ್ದ ದುಡ್ಡನ್ನೆಲ್ಲ ಕೊಟ್ಟು ಬಿಟ್ಟೆವು. ನನ್ನ ಹತ್ತಿರ ಪರಶುಶಿಲೆ ಇದೆಯೆ? ಆದರೂ ಆಗಲಿ, ನಿನಗೆ ಬೇರೆ ಕಡೆ ಹೋಗಲು ಮನಸ್ಸು ಬರುವವರೆಗೆ ಈ ನಿನ್ನ ಭಿಕ್ಷುಕರ ಗುಂಪು ತಮಗೆ ಇಷ್ಟ ಬಂದಂತೆ

ಇಲ್ಲಿ ಇರಲಿ. ಯಾಕೆಂದರೆ ನಿನ್ನ ಸ್ವಾಭಾವಿಕವಾದ ವಿನಯವು ನಿನ್ನಲ್ಲಿ ನಮ್ಮ ವಿಶ್ವಾಸ ಒಂದೇ ಸಮನಾಗಿರುವಂತೆ ಮಾಡಿದೆ.

ಸಾಧುಗಳಾಗಿ ಯಾವಾಗಲೂ ಮಾತನಾಡದೆ ಇದ್ದ ಬಿಕ್ಷುಕರು ಸಹ ದತ್ತಮಹನೀಯನ ಮುಂದಾಳುತನವನ್ನು ಒಪ್ಪದೆ “ನೀನೂ ಕೂಡ ಆ ಸ್ಫೂರ್ತಿವಂತನಾದ ’ಹೊ’ವಿನ ಕೆಲವು ಸುಲಭವಾದ ದಾರಿಗಳನ್ನು ಅನುಸರಿಸಬೇಕು. ಇಲ್ಲದಿದ್ದರೆ ನಮಗೆ ಹಸಿವಿನಿಂದ ಸಾವು ಖಂಡಿತ ಎಂದು ಹೇಳ ತೊಡಗಿದರು. ಅವರ ಮುಂದಾಳಾದವನು ನಾಲ್ಕು ಸಾವಿರ ವರುಷದ ಪದ್ಧತಿಗಳು ಹಳೆಯವಾಗುತ್ತಿವೆ. ಈಗ ಪೈಪೋಟಿ ಜಾಸ್ತಿಯಾಯಿತು. ನೀನು ಇನ್ನೂ ನಾಗರೀಕವಾದ ಪದ್ಧತಿಗಳನ್ನು ಪ್ರಾರಂಭಿಸದಿದ್ದರೆ ನಾವು ನಿನ್ನನ್ನು ಬಿಟ್ಟು ಬೇರೆ ಮುಂದಾಳನ್ನು ಆರಿಸಿಕೊಳ್ಳಬೇಕಾಗುತ್ತದೆ” ಎಂದನು.

ಇದೇ ಸಂದರ್ಭದಲ್ಲಿ, ಇತಿಹಾಸವಾಗಿ ಪರಿಣಮಿಸಿರುವ ಆ ಪ್ರಸಿದ್ಧವಾದ ಗಾದೆಯ ಸಂಗತಿಯು ನಡೆಯಿತು. ದತ್ತಮಹನೀಯನು, ಕಡೆಯ ಕುರುಡು ಭಿಕ್ಷುಕನನ್ನು ಅವನ ಮನೆಯ ಬಾಗಿಲಿನಲ್ಲಿ ನಿಸ್ಪೃಹನಾಗಿ ಬಿಟ್ಟು, ತನ್ನ ಮನೆಯ ಕಡೆಗೆ (ಹಳೆಯ ಗೋಡೆಸಂದಿ) ತಿರುಗುತ್ತಿರುವಾಗ ಅವನಿಗೆ ಆ ತುಚ್ಛನಾದ ’ಹೊ’ ಎದುರಾದನು. ಅವನೂ ತನ್ನ ಸಂಪಾದನೆಯನ್ನು ಮುಗಿಸಿಕೊಂಡು ಮನೆಯ ಕಡೆಗೆ ಹೊರಟಿದ್ದನು. ಆದರೆ ’ಹೊ’ವಿಗೂ ದತ್ತಮಹನೀಯನಿಗೂ ಈ ವ್ಯತ್ಯಾಸವಿದ್ದಿತು. ’ಹೊ’ವಿನ ಹಿಂದೆ ಇಬ್ಬರು ಬಲಶಾಲಿಗಳು ಹಣದ ದೊಡ್ಡಗಂಟನ್ನು ಹೊತ್ತುಕೊಂಡು ಬರುತ್ತಿದ್ದರು. ಆದರೆ ದತ್ತಮಹನೀಯನ ಪಾಲಿಗೆ ಆ ದಿವಸದ ಸಂಪಾದನೆಯಲ್ಲಿ, ಧನಿಕರು ಮತ್ತಾವ ಉಪಯೋಗಕ್ಕೂ ಬಾರದಿರುವ, ದಾನಕ್ಕಾಗಿಯೇ ಬೇರೆ ಕಡೆ ಇಟ್ಟಿರುವ ಒಂದು ಸಮಕಲು ನಾಣ್ಯ ಮಾತ್ರ ಬಂದಿದ್ದಿತು. ನಾಲ್ಕು ಹೆಜ್ಜೆ ಮುಂದೆ ಹೋದ ಮೇಲೆ ದತ್ತಮಹನೀಯನಿಗೆ ’ಅದೃಷ್ಟದ ಶಕ್ತಿಗಳ’ ದೇವಸ್ಥಾನ ಕಣ್ಣಿಗೆ ಬಿದ್ದಿತು. ಒಬ್ಬ ಭಕ್ತನು ಪ್ರತಿದಿನವೂ ಆ ದೇವಸ್ಥಾನದಲ್ಲಿ ಕೆತ್ತಿದ್ದ ಸುಭಾಷಿತಗಳ ಎದುರಿಗೆ ಒಂದು ಲಾಂದ್ರವನ್ನು ತೂಗು ಹಾಕುತ್ತಿದ್ದನು. ದತ್ತಮಹನೀಯನು ಪದ್ಧತಿಯಂತೆ ದೇವಸ್ಥಾನ ಮುಂದೆ ಒಂದು ಗಳಿಗೆ ನಿಂತನು. ಇದ್ದಕ್ಕಿದ್ದಂತೆ ಅವನಿಗೆ ಸ್ಫೂರ್ತಿ ಬಂದಂತೆ ಆಗಿ ದತ್ತಮಹನೀಯನು ಬೀದಿಯಲ್ಲಿ ಸುತ್ತಮುತ್ತ ಯಾರೂ ಇಲ್ಲದುದನ್ನು ಕಂಡು ತನ್ನ ನಾಲಿಗೆಯನ್ನು ಸುಭಾಷಿತಗಳ ಕಡೆಗೆ ತಿರಸ್ಕಾರದಿಂದ ಉದ್ದೇಶ ಪೂರ್ವಕವಾಗಿ ನೀಡಿದನು.

ಅನಂತರ ಆ ಸಮಕಲು ನಾಣ್ಯವನ್ನು ತನ್ನ ಒಳಜೇಬಿನಿಂದ ತೆಗೆದು ಅದನ್ನು ಗುರಿಯಿಟ್ಟು ಸುಭಾಷಿತಗಳಿಗೆ ಹೊಡೆದನು, ಅದು 'ಶಾಂತವಾದ ಮತ್ತು ಧ್ಯಾನಾಸಕ್ತವಾದ ಜೀವನದ ಬಹುಮಾನಗಳು ಅಸಂಖ್ಯವಾಗಿವೆ' ಎಂಬುದಾಗಿ ಪ್ರಾರಂಭವಾಗುವ ಶ್ಲೋಕಕ್ಕೆ ತಗಲಿದುದನ್ನು ಕಂಡು ಅವನಿಗೆ ಬಹಳ ಸಮಾಧಾನವಾಯಿತು.

ಕೆಲವು ಗಂಟೆಗಳ ತರುವಾಯ ದತ್ತಮಹನೀಯನು ಮುರಕಲು ಗೋಡೆಯ ತನ್ನ ಮನೆಗೆ ಬಂದಾಗ ಅವನ ಸ್ವಭಾವ ಬದಲಾವಣೆಯಾಗಿರುವದು ಅವನ ತಾಯಿಗೆ ತಿಳಿಯದೆ ಇರಲಿಲ್ಲ. ಅವನ ಸ್ವಭಾವದಿಂದ ವಿರಾಮದ ಗಾಂಭೀರ್ಯವು ಬಹಳ ಮಟ್ಟಿಗೆ ಬಿಟ್ಟು ಹೋಗಿದ್ದಿತು. ಅವನ ಉಡುಪುಗಳನ್ನು ನೋಡಿದರೆ ಬೆಳಗಿನ ಜಾವಕ್ಕೆ ಮುಂಚೆಮನೆ ಸೇರಲು ಅವನಿಗೆ ಇಷ್ಟವಿಲ್ಲದಿದ್ದಂತೆ ಕಾಣುತ್ತಿದ್ದಿತು. ಒಳಕ್ಕೆ ಬರುತ್ತಾ ಅವನು ಕೆಲವು ಇಂಪಾದ ಹಾಡುಗಳನ್ನು ಹಾಡುತ್ತಿದ್ದನು. ಅವುಗಳ ಅಭಿಪ್ರಾಯವು 'ತಾನು ನಗರ ರಕ್ಷಕರನ್ನು ಎದುರಿಸುತ್ತೇನೆ' ಎಂಬುದೇ ಆಗಿದ್ದಿತು. ತಾನು 'ಗಡ್ಡವಿಲ್ಲದ ಆಡು' ಎಂದು ಅವನು ಪದೇ ಪದೇ ಹೇಳುತ್ತಿದ್ದನು. ಹೀಗೆ ಹೇಳಿಕೊಂಡು ದತ್ತಮಹನೀಯನು ತನ್ನ ಮನೆಗೆ ಬಂದು ತನ್ನ ಗೊತ್ತಾದ ಮೂಲೆಯಲ್ಲಿ ವಿಶ್ರಮಿಸಿಕೊಂಡನು. ಒಂದು ಗಳಿಗೆಯೊಳಗಾಗಿ ಅವನು ಮಧ್ಯಲೋಕದಲ್ಲಿ (ನಿದ್ರೆ) ಇರಬೇಕು ಎನ್ನುವಷ್ಟರಲ್ಲಿ ಬಾಗಿಲು ತೆರೆದು 'ಚೌಹು' ಎಂಬ ಹೆಸರಿನ ಹೊಸಬನೊಬ್ಬನು ಒಳಕ್ಕೆ ಬಂದನು.

'ಚೌಹು', ದತ್ತಮಹನೀಯನ ತಾಯಿಯನ್ನು ಕುರಿತು 'ನಿಮಗೆ ಎಲ್ಲಾ ಒಳ್ಳೆಯದಾಗಲಿ. ಊಟವಾಯಿತೆ? ನಿಮ್ಮ ಮಗನ ವಿಚಾರದಲ್ಲಿ ಒಂದು ಆಕರ್ಷಣೀಯವಾದ ಏರ್ಪಾಡನ್ನು ನಿಮಗೆ ಹೇಳಲು ಬಂದಿದ್ದೇನೆ' ಎಂದನು.

ದತ್ತಮಹನೀಯನ ತಾಯಿಯು ಎಚ್ಚರಿಕೆಯಿಂದ 'ಹೂವು, ದುಂಬಿಯನ್ನು ಆಕರ್ಷಿಸುತ್ತದೆ. ಆದರೆ ಹೋಗುವಾಗ ಅದರ ತುಟಿಗೆ ಜೇನುಮಧು ಅಂಟಿಕೊಳ್ಳುತ್ತದೆ' ಎಂದಳು. ದಮಹನೀಯನು 'ನಗರ ರಕ್ಷಕರು ನನ್ನ ಕಣ್ಣಿಗೆ ಬಿದ್ದರೆ ಅವರನ್ನು ಎತ್ತಿ ಬೀದಿಯಿಂದ ಆಚೆಗೆ ಒಗೆಯುತ್ತೇನೆ' ಎಂದು ಆಗಾಗ್ಗೆ ಜಂಭ ಹೊಡೆಯುತ್ತಿದ್ದನು. ಅವರ ಪೈಕಿ ಯಾರಾದರೂ ಉಪಾಯವಾಗಿ ದತ್ತನನ್ನು ಹಿಡಿದುಕೊಂಡು ಹೋಗಲು ಬಂದಿರಬಹುದೆಂದು ಅವಳಿಗೆ ಭಯವಾಗಿತ್ತು.

'ಚೌಹು' ಧೈರ್ಯವನ್ನು ಕೊಟ್ಟು ಮಾತನಾಡುತ್ತಾ 'ಸಾಧುವಾದ ಆಡುಮರಿ ಒಂದು ರಾತ್ರಿಯೊಳಗೆ ತೋಳವಾಗುವುದೆ? ನನ್ನ ಮಾತಿಗೆ ನಿನ್ನ ಕಿವಿ ಚೆನ್ನಾಗಿ ಬಾಗಲಿ. ಯಾಕೆಂದರೆ ಇದರಿಂದ ಬಹಳ ಲಾಭವಾಗಬಹುದು. ಭಿಕ್ಷುಕರನ್ನು ಸ್ಥಳದಿಂದ ಸ್ಥಳಕ್ಕೆ ಕರೆದುಕೊಂಡು ಹೋಗುವ ಕಸಬಿನಲ್ಲಿ ಪ್ರಾಣವನ್ನು ದೇಹದಲ್ಲಿ ನಿಲ್ಲಿಸುವಷ್ಟು ಕೂಡ ಉತ್ಪತ್ತಿಯಿಲ್ಲವೆಂಬುದು ನಿನಗೆ ತಿಳಿಯದ ವಿಷಯವಲ್ಲ. ಮುಂದೆ ದತ್ತನು ಒಬ್ಬನೇ ಕೈಯಲ್ಲಿ ಭಿಕ್ಷದ ಪಾತ್ರೆ ಹಿಡಿದುಕೊಂಡು ಹೋಗಬೇಕಾಗುವುದು. ಅವನು ಮಗನಾದುದರಿಂದ ಯಾವ ಕಸಬನ್ನೂ ಮಾಡಿ ನಿನ್ನ ಮತ್ತು ತನ್ನ ಜೀವನವನ್ನು ನಡೆಸಿಕೊಳ್ಳಲಾರ. ಅಂದರೆ ನಿಮ್ಮ ವಂಶ ನಾಶವಾಗುವುದು. ಮೇಲುಲೋಕದಲ್ಲಿ ನಿನ್ನ ಅವಸ್ಥೆ ಅಸಹನೀಯವಾಗುವುದು'

'ಅದು ಬಹಳ ದೂರದ ಮಾತು. ಜಾಣತನವುಳ್ಳ ಕೋಳಿ ಎಷ್ಟು ವಯಸ್ಸಾದರೂ ವಸಂತಕ್ಕೆ ಹೆದರುವುದಿಲ್ಲ. ಆದರೆ ಯಾವ ಉಪಾಯದಿಂದ ಈ ಅಪಾಯವನ್ನು ತಪ್ಪಿಸಿಕೊಳ್ಳಬಹುದು?'

'ನಿನ್ನ ಮುಂದೆ ಇರುವ ಈ ಮನುಷ್ಯ ಕ್ಷೌರಕ. ನಾನು ಇರುವುದು ಮೂರು ಅಂತಸ್ತಿನ ಮೊಟ್ಟೆ ಭವನದ ಬೀದಿಯಲ್ಲಿ. ನಾನು ಅನೇಕ ದಿನಗಳಿಂದ ದತ್ತನ ಸಂಯಮವನ್ನೂ ಸಾಧು ಸ್ವಭಾವವನ್ನೂ ನೋಡಿದ್ದೇನೆ. ಈಗ ನನಗೆ ಒಬ್ಬ ಸಹಾಯಕನು ಬೇಕಾಗಿರುವುದರಿಂದ ಮೊದಲು ಇವನ ವಿಷಯವೇ ಮನಸ್ಸಿಗೆ ಬಂತು. ಇತರರ ವಿಷಯದಲ್ಲಿ ದೊಡ್ಡ ತೊಂದರೆಯೇ ಆಗಿರುವ ಈ ಮೂಗುತನ, ದತ್ತನ ವಿಷಯದಲ್ಲಿ ಅವನ ಲಾಭಕ್ಕೇ ಆಗಿದೆ ಯಾಕೆಂದರೆ ದತ್ತನಿಗೆ ಮುಂದೆ ಕುಳಿತಿರುವವರ ಜತೆಯಲ್ಲಿ ನಾಗರೀಕವಾಗಿ ಮಾತನಾಡುವುದಕ್ಕೆ ಆಗಲಿ ಅವರ ಸಂಭಾಷಣೆಯನ್ನು ಕೇಳುವುದಕ್ಕೆ ಆಗಲಿ ಸಾಧ್ಯವಿಲ್ಲ. ಆದುದರಿಂದ ಅವನು ತನ್ನ ಕೈಚಳಕಕ್ಕೆ, ನಾನು ಒಬ್ಬರನ್ನು ಒಳಗು ಮಾಡುತ್ತಿದ್ದ ಕಡೆ ಇಬ್ಬರನ್ನು ಒಳಗು ಮಾಡುವನು. ಅವನ ಉತ್ಪತ್ತಿ ಹೆಚ್ಚಾಗುವುದು. ಅವನ ಮಾನ್ಯಳಾದ ತಾಯಿಗೂ ಇದರಿಂದ ಅನೇಕ ವಿಧದಲ್ಲಿ ಸುಖವಾಗುವುದು."

'ಚೌಹು' ದತ್ತನಿಗೆ ಮೂಗು ಎಂದು ಮೊದಲು ಹೇಳಿದುದರಲ್ಲಿ, ಅವನ ತಾಯಿಗೆ ಆಗ ಸರಿಯಾಗಿ ಅರ್ಥ ತಿಳಿಯದಿದ್ದರೂ ಈಗ ತಿಳಿಯಿತು. ತನ್ನ ಕತ್ತಿನಲ್ಲಿ 'ಮೂಗ, ಕಿವಿ ಕೇಳುವುದಿಲ್ಲ' ಎಂಬ ಒಂದು ಬೋರ್ಡನ್ನು ಹಾಕಿಕೊಂಡು ತಿರುಗುವುದು ದತ್ತನ ಪದ್ಧತಿಯಾಗಿದ್ದಿತು. ಇದಕ್ಕೆ ಮುಖ್ಯ ಕಾರಣ ದತ್ತನ ವಿನಯವೇ ಆಗಿದ್ದಿತು. ತಾನು ನಡೆಸಿಕೊಂಡು ಹೋಗುತ್ತಿದ್ದ ಭಿಕ್ಷುಕರಿಗಿಂತ

ತಾನು ಯಾವ ವಿಧದಲ್ಲಿಯೂ ಉತ್ತಮನೆಂದು ತೋರಿಸಿಕೊಳ್ಳಲು ಅವನಿಗೆ ಇಷ್ಟವಿರಲಿಲ್ಲ. ಇದರಿಂದ ಅವನು ಜನರನ್ನು ಪೂರ್ಣವಾಗಿ ಮೋಸಪಡಿಸುತ್ತಿದ್ದನೆಂದೂ ಹೇಳಲು ಸಾಧ್ಯವಿಲ್ಲ. ಯಾಕೆಂದರೆ ದಾರಿಯಲ್ಲಿ ಯಾರು ಸಿಕ್ಕಿದರೂ ದತ್ತನು ಕೂಡಲೇ ಅವರೊಂದಿಗೆ ಸಂಭಾಷಣೆಗೆ ಪ್ರಾರಂಭಿಸುತ್ತಿದ್ದನು. ಆದರೆ ಹೇಗೋ 'ಚೌಹು' ಮನಸ್ಸಿನಲ್ಲಿ ಅವನು ಮೂಗ ಎಂಬ ಭಾವವೇ ಸ್ಥಿರವಾಗಿ ನಿಂತಿದ್ದಿತು. ಅವನ ಆ ಭಾವವನ್ನು ತಿದ್ದಿದರೆ, ತಾನು ಅವನಿಗಿಂತ ಹೆಚ್ಚು ತಿಳಿದವಳೆಂದು ಹೇಳಿಕೊಂಡಂತೆ ಆಗುವುದೆಂದೂ ಅದು ವಿನಯವಲ್ಲವೆಂದೂ ಮತ್ತು ಆ ಮೂಲಕ ದತ್ತನಿಗೆ ಹೆಚ್ಚು ಕೂಲಿ ದೊರೆಯುತ್ತಿದ್ದುದರಿಂದಲೂ ದತ್ತನ ತಾಯಿ ಅದನ್ನು ತಿದ್ದಲಿಲ್ಲ. ದತ್ತನು ಬೇರೆ ಕೆಲಸದಲ್ಲಿ ಇಲ್ಲದೆ ಹೋಗಿದ್ದರೆ ಏನಾದರೂ ಹೇಳುತ್ತಿದ್ದನು. ಅವರ ಸಂಭಾಷಣೆಯು ತನ್ನ ವ್ಯಾಧಿಯ ಕಡೆ ತಿರುಗಿದುದನ್ನು ಕೇಳಿ ಅವನು ತಾನು ಮಲಗಿದ್ದ ಹುಲ್ಲುಹಾಸಿಗೆಯಲ್ಲಿ ತನ್ನ ಬೋರ್ಡನ್ನು ಹುಡುಕ ತೊಡಗಿದನು. ಅದನ್ನು ಚೌಹುವಿಗೆ ತೋರಿಸುವುದರಿಂದ ಮಾತ್ರ ತಾನು ಎಲ್ಲರಂತೆ ಇರುವೆನೆಂದು ಸಾಧಿಸಬಹುದೆಂದು ಅವನ ಆಗಿನ ಅವ್ಯವಸ್ಥಿತವಾದ ಬುದ್ಧಿಗೆ ತೋರಿತು. (ಆದರೆ ಮರುದಿನ ಬೆಳಿಗ್ಗೆ ಆ ಬೋರ್ಡು ನ್ಯಾಯಸ್ಥಾನದ ಬಾಗಿಲಿನಲ್ಲಿ ಮೊಳೆಗಳಿಂದ ನೇತುಹಾಕಿದ್ದಿತು. ಇಷ್ಟು ಧೈರ್ಯವಾದ ಮತ್ತು ನಿಷ್ಪಕ್ಷಪಾತವಾದ ಬರವಣಿಗೆ, ಚಕ್ರವರ್ತಿಯ ಅಪ್ಪಣೆ ಇಲ್ಲದೆ ಖಂಡಿತ ಇಲ್ಲಿ ಇರಲು ಕಾರಣವಿಲ್ಲವೆಂದು ಅಧಿಕಾರಿಗಳು ನಂಬಿದುದರಿಂದ ಅದು ಬಹುದಿನಗಳು ನ್ಯಾಯಸ್ಥಾನದ ಬಾಗಿಲಿನಲ್ಲಿಯೇ ಇದ್ದಿತು.) ಆದುದರಿಂದ ಬೋರ್ಡು ದತ್ತನಿಗೆ ತನ್ನ ಹುಲ್ಲಿನ ಹಾಸಿಗೆಯಲ್ಲಿ ಸ್ವಾಭಾವಿಕವಾಗಿ ಸಿಕ್ಕಲಿಲ್ಲ. ಅಲ್ಲದೆ ಅವನ ತಾಯಿಯು ಅವನು ಮಾತನಾಡಬೇಕಾದುದಿಲ್ಲವೆಂದೂ ವಿಷಯವನ್ನು ಪೂರ್ಣವಾಗಿ ತನಗೆ ಒಪ್ಪಿಸಬೇಕೆಂದೂ ನಿಸ್ಸಂದೇಹವಾದ ಸಂಜ್ಞೆಗಳಿಂದ ತೋರಿಸಿದಳು.

ದತ್ತನ ತಾಯಿಯು "ಈ ಏರ್ಪಾಡು ಮನಸ್ಸನ್ನು ಆಕರ್ಷಿಸುವುದಾಗಿದೆ. ಆದರೆ ದತ್ತನಿಗೆ ಕತ್ತಿ ಕತ್ತರಿಗಳಲ್ಲಿ ಚೆನ್ನಾಗಿ ಅನುಭವವಾದ ಮೇಲೆ, ಮುಂದೆ ಬಂದು ಕುಳಿತುಕೊಳ್ಳುವವರ ಅಪ್ಪಣೆಗಳನ್ನು ಹೇಗೆ ತಿಳಿದುಕೊಂಡು ಅದರಂತೆ ನಡೆಯಲು ಸಾಧ್ಯವಾಗುವುದು?" ಎಂದಳು.

ಚೌಹು 'ಈ ಆಕ್ಷೇಪಣೆ ಅಲ್ಪವಾದುದು. ಕ್ಷೌರದ ಕಾಲುಮಣೆಯ ಮೇಲೆ ಒಬ್ಬ ಗಿರಾಕಿಯು ಬಂದು ಕುಳಿತ ಕೂಡಲೆ, ಅವನು ತಲೆಯನ್ನು ಹಿಂದಕ್ಕೆ ಬಗ್ಗಿಸಿ ಸೂರಿನ ಕಡೆ ಒಂದೇ ದೃಷ್ಟಿಯಿಂದ ನೋಡುತ್ತಾನೆ. ಇಲ್ಲದಿದ್ದರೆ ತಲೆಯನ್ನು ಸ್ವಲ್ಪ ಮುಂದಕ್ಕೆ ಬಗ್ಗಿಸಿ ಶಾಂತನಾಗಿ ಕುಳಿತುಕೊಳ್ಳುತಾನೆ. ಮೊದಲು ಹೇಳಿದ ರೀತಿಯಲ್ಲಿ ಕುಳಿತರೆ ಅವನು ತನ್ನ ಮುಖದ ಉಬ್ಬು ತಗ್ಗುಗಳನ್ನು

ನಯಮಾಡಿಸಿಕೊಳ್ಳಲು ಬಂದಿದ್ದಾನೆಂದು ತಿಳಿಯಬೇಕು. ಎರಡನೆಯ ತರದಲ್ಲಿ ಕುಳಿತರೆ ಅವನ ಕೂದಲುಗಳನ್ನು ಸರಿಮಾಡಿಸಿಕೊಳ್ಳಬೇಕೆಂಬುದು ಅವನ ಇಷ್ಟವೆಂದು ತಿಳಿಯಬೇಕು. ದತ್ತನು ಸರಿಯಾದ ಗೌರವಯುತವಾದ ರೀತಿಯಲ್ಲಿ ನಡೆದುಕೊಳ್ಳುವನೆಂಬುದರಲ್ಲಿ ನಿನಗೆ ಸಂಶಯ ಬೇಡ. ಆದರೆ ನೀನು ಅನುಸರಿಸುವ ಸನ್ನೆಗಳಿಂದ ಈ ಏರ್ಪಾಡುಗಳನ್ನು ನಿನ್ನ ಮಗನಿಗೆ ತಿಳಿಸು. ಅವನು ಅತ್ಯಂತ ಮೊಂಡನೂ ಮಾತಾ ಪಿತ್ರ ಭಕ್ತಿಯಿಲ್ಲದವನೂ ಆದವನಾದರೆ ಏನೂ ಮಾಡುವುದಕ್ಕಾಗುವುದಿಲ್ಲ. ಇಲ್ಲದಿದ್ದರೆ ನಾಳೆ ಬೆಳಿಗ್ಗೆ ಅವನು ಖಂಡಿತ ಹೊಳೆಯುವ ಸಿಡಿಲಿನ ಗುರುತಾದ ನನ್ನ ಅಂಗಡಿಯ ಮುಂದೆ ಒಂದು ನಿಲ್ಲುವನು' ಎಂದನು.

'ಎತ್ತನ್ನು ಸಾಕುವ ಕೈಯು, ಆ ಎತ್ತು ಕೊಬ್ಬಿ ಬೆಳೆದ ಮೇಲೆ, ಅದನ್ನು ಕೊಲ್ಲಲು ಚೂರಿಯನ್ನು ಹಿಡಿಯುತ್ತದೆ. ಉದಾರಿಯಾದ ಅಧಿಕಾರಿಯನ್ನು ಕಂಡರೆ ಹಾಗೇ ಹಿಂದಕ್ಕೆ ಸರಿ' ಎಂದು ಹೇಳಿರುವ ಗಾದೆಯಲ್ಲಿ ತುಂಬಾ ಮುಂದಾಲೋಚನೆ ಇದೆ. 'ಚೌಹು' ಆ ರೀತಿ ಕಾರಣಗಳನ್ನು ಹೇಳಿದರೂ, ತನ್ನ ಸಹಾಯಕ್ಕೆ ದತ್ತನಿಗಿಂತ ಹೆಚ್ಚು ಅರ್ಹರೂ ಜಾಣರೂ ಅವನಿಗೆ ಸಿಕ್ಕುವುದು ಕಷ್ಟವಾಗಿರಲಿಲ್ಲ. ಆದುದರಿಂದ ಅವನ ಮಾತಿನ ಹಿಂದುಗಡೆ ಇರುವ ಕಾರಣಗಳನ್ನು ಪರೀಕ್ಷಿಸುವುದು ಅವಶ್ಯಕವಾಗುತ್ತದೆ. 'ಚೌಹು' ತಾನು ಹೇಳಿದ್ದಂತೆ ನಿಜವಾಗಿಯೂ ಕ್ಷೌರಕನೇ ಆಗಿದ್ದನು. ಅನೇಕ ವರುಷಗಳಿಂದ, ಆ ಕಸಬಿನಲ್ಲಿ ನಗರದ ಆ ಭಾಗದಲ್ಲಿ ತಾನು ಅತ್ಯಂತ ಜಾಣನೆಂಬ ಕೀರ್ತಿಯನ್ನು ಗಳಿಸಿ ಹಣಗಾರನಾಗಿ ಹೊಟ್ಟೆಯನ್ನೂ ಬೆಳೆಸಿದ್ದನು. ಆದರೆ ಒಂದು ಕೆಟ್ಟ ಗಳಿಗೆಯಲ್ಲಿ ಅವನು ತನ್ನ ಸಂಯಮವನ್ನು ಮರೆತು, ಅಫೀಮಿನ ಹೊಗೆಯಿಂದ ಆವೃತನಾಗಿ ಬುದ್ಧಿಯನ್ನು ಮಂಕು ಮಾಡುವ ಅಕ್ಕಿಯಿಂದ ಮಾಡಿದ ಮದ್ಯವನ್ನು ಅತಿಯಾಗಿ ಸೇವಿಸಲು ಪ್ರಾರಂಭಿಸಿದನು. ಈ ಕಾರಣದಿಂದ ಅವನ ಗಿರಾಕಿಗಳು ಕಡಿಮೆಯಾದರು; ಅವನ ಕೈಯು, ಹಿಂದೆ ನೋಡಿದವರಿಗೆಲ್ಲಾ ಆಶ್ಚರ್ಯವಾಗುವಂತೆ ಗಂಭೀರವಾಗಿ ಮಾಡುತ್ತಿದ್ದ ಚುರುಕನ್ನೂ ಕಳೆದುಕೊಂಡಿತು. ಅದರ ಬದಲು ಕೈಯು ದಿಕ್ಕಾಪಾಲಾಗಿ ಚಲಿಸತೊಡಗಿತು. ಈ ದಿನ ಅವನು ಯಾವ ಯಾವ ವಸ್ತು ಎಲ್ಲೆಲ್ಲಿ ಇದೆಯೆಂಬ ನಿಶ್ಚಿತಜ್ಞಾನವಿಲ್ಲದೆ, ರೊಟ್ಟಿ ಅಂಗಡಿಯ 'ಹೆಂಗ್ ಚೋ' ವಿನ ಗಂಭೀರವಾದ ಮೀಸೆಗಳನ್ನು ಬೋಳಿಸಿಬಿಟ್ಟನು. ಆ ರೊಟ್ಟಿ ಅಂಗಡಿಯವನಿಗೆ ತನ್ನ ಮೀಸೆಗಳನ್ನು ಕಂಡರೆ ಪ್ರಾಣವಾಗಿತ್ತು. ಮೀಸೆಯ ಹೆಮ್ಮೆಯೂ ಅವನಿಗೆ ಬಹಳವಾಗಿತ್ತು. ಅವನು ತನ್ನ ಈ ಅವಮಾನವನ್ನು ನೋಡಿ, ಮುಂದೆ ತನ್ನ ನಿಶ್ಚಯದಲ್ಲಿ ತನಗೆ ಸಹಾಯಮಾಡಬೇಕೆಂದು ತನ್ನ ಹಿರಿಯರ ಆತ್ಮಗಳನ್ನೆಲ್ಲಾ ಪ್ರಾರ್ಥಿಸಿ, ತನ್ನ ಪ್ರತಿಜ್ಞೆಗೆ ಸಾಕ್ಷಿಗಳಾಗಿರಲೆಂದು ಬೀದಿಯವರನ್ನೆಲ್ಲಾ

ಕರೆದು 'ಚೌಹುವನ್ನು ಸಾಯುವಂತೆ ಕತ್ತರಿಸುತ್ತೇನೆ, ಅದನ್ನು ಸಾಧಿಸಲು ಅತಿ ಕಷ್ಟವಾದರೆ ಅವನ ಅಂಗಡಿಯಲ್ಲಿ ಆತ್ಮಹತ್ಯಮಾಡಿಕೊಳ್ಳುತ್ತೇನೆ' ಎಂದು ಪ್ರತಿಜ್ಞೆ ಮಾಡಿದನು. ಈ ಎರಡು ವಿಧವಾದ ಅಪಾಯಗಳು 'ಚೌಹು'ನಿಗೆ ಬಹಳ ಗಾಬರಿಯನ್ನು ಉಂಟುಮಾಡಿದವು. ಅವನಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ಅವನು ಇನ್ನೂ ಹೆಚ್ಚು ಹೆಚ್ಚಾಗಿ ಅಕ್ಕಿಯ ಮದ್ಯವನ್ನು ಸೇವಿಸಿ ತಾನು ಧರಿಸಿದ್ದ ಬಟ್ಟೆಗಳನ್ನೆಲ್ಲಾ ಒಂದಾದ ಮೇಲೆ ಒಂದರಂತೆ ಹರಿಯತೊಡಗಿದನು. ಆಗ ಅವನ ಹೆಂಡತಿ 'ಸೆ ಚೌ'ಯು, ಅಂಗಡಿಯ ಬಾಗಿಲಿನಲ್ಲಿ ನಿಂತಿದ್ದವರನ್ನು ಉಪಾಯದಿಂದ ಆಚೆಗೆ ಕಳುಹಿಸಿ ಬಾಗಿಲನ್ನು ಹಾಕಿಕೊಂಡು ಒಳಕ್ಕೆ ಬಂದು ಗಂಡನ ಮಗ್ಗುಲಲ್ಲಿ ನಿಂತುಕೊಂಡು 'ಓ ನಿಕೃಷ್ಟನಾದ ಚೌಹು, ನಿನ್ನನ್ನು ಮುತ್ತಿರುವ ವಿಷಯಗಳನ್ನು ಕಣ್ಣು ಬಿಟ್ಟು ನೋಡು. ನಿನ್ನ ಈ ನೀಚವಾದ ಸ್ವಭಾವ ನಮ್ಮನ್ನು ಹಸಿವಿನಿಂದ ಸಾಯುವ ಹತ್ತಿರಕ್ಕೆ ತಂದಿದೆ. ಈ ಹೆಂಗ್ ಚೌವಿನ ಕೈಯಿಂದ ತಪ್ಪಿಸಿಕೊಳ್ಳುವ ಉದ್ದೇಶದಿಂದ ನೀನು ನಿನ್ನ ಕಸಬನ್ನು ಬಿಟ್ಟರೆ ಹೊಟ್ಟೆಗಿಲ್ಲದೆ ನಾವು ಸಾಯುವುದು ಖಂಡಿತ. ಅವನ ಕಣ್ಣಿಗೆ ಕಾಣುವಂತೆ ನೀನು ಇದ್ದರೆ ನಿನ್ನನ್ನು ಬಲಾತ್ಕಾರವಾಗಿ ಅವನು ಸಾಯಿಸುವನು. ನಿರಪರಾಧಿನಿಯಾದ ನಾನು ಗತಿಯಿಲ್ಲದವಳಾಗುವೆನು. ನೀನು ಬಹು ಎಚ್ಚರಿಕೆಯಿಂದ ಇದ್ದು ಈ ಎರಡು ಅಪಾಯಗಳಿಂದಲೂ ತಪ್ಪಿಸಿಕೊಂಡರೆ ಮುಂದೆ ಇನ್ನೂ ಹೆಚ್ಚು ಕಷ್ಟವೇ ಇದೆ. ಯಾಕೆಂದರೆ ಹೆಂಗ್‌ಚೌ ಬೇರೆ ಗತಿಯಿಲ್ಲದೆ ನಿನ್ನ ಅಂಗಡಿಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವನು. ಅವನ ಆತ್ಮವು ಈ ಭೂಮಿಯಲ್ಲಿಯೂ ಸ್ವರ್ಗದಲ್ಲಿಯೂ ನಿನ್ನ ಎಲ್ಲಾ ಆಸೆಗಳನ್ನೂ ಎದುರಿಸಿ ನಿರ್ಮೂಲ ಮಾಡುವುದು. ಅವನ ಅಸಂಖ್ಯಾತರಾದ ಪಿತೃಗಳ ಆತ್ಮಗಳು ನಿನ್ನನ್ನು ಎಲ್ಲೆಲ್ಲು ಕಾಡುವುವು'

'ಚೌಹು' ಗಾಂಭೀರ್ಯವಿಲ್ಲದ ತಿರಸ್ಕಾರದಿಂದ 'ಜೀವನದ ಬೇರೆ ಬೇರೆ ಸಂಗತಿಗಳನ್ನು ಎಷ್ಟು ಚೆನ್ನಾಗಿ ಎಷ್ಟು ಹಿತವಾಗಿ ನೀನು ಹೇಳಿದೆ! ನಾಳೆ ಚಂದ್ರನ ಹಬ್ಬ. ಈ ಮನೆಯವನು ಬಾಡಿಗೆ ಕೇಳಲು ಬರುತ್ತಾನೆ. ದಕ್ಷಿಣದಲ್ಲಿ ದಂಗೆ ಎದ್ದಿರುವುದರಿಂದ ಚಾಣಕ್ಯನಾದ ವೈಸರಾಯಿಯು ಅಫೀಮಿನ ಬೆಲೆಯನ್ನು ಒಂದಕ್ಕೆ ಎರಡು ಮಾಡಿದ್ದಾನೆ. ಕಳ್ಳನೊಬ್ಬನು ನನ್ನ ರೇಶಿಮೆ ವುತ್ತಿಯನ್ನು ಹೊತ್ತುಕೊಂಡು ಹೋಗಿದ್ದಾನೆ. 'ಇವನ್ನೆಲ್ಲಾ ಯಾಕೆ ಹೇಳದೆ ಬಿಟ್ಟೆ. ಇದೆಲ್ಲಾ ಸೇರಿದರೆ 'ಹೊಳೆಯುವ ಸಿಡಿಲಿನ' ಒಳಗಿನ ಸುಖದ ಚಿತ್ರವು ಪೂರ್ಣವಾಗುವದು'

ಅವನ ಹೆಂಡತಿಯು ತಿರಸ್ಕಾರದಿಂದ 'ಚಿಲಕವನ್ನು ಹಾಕಿರುವ ಕದದ ಹಿಂದೆ, ಹಗುರವಾದ ಮಾತನಾಡುವುದು ಸುಲಭ. ಹಾಗಾದರೆ ಒಡೆಯ ಒಳಗಿನ ದಿವಾನಖಾನೆಯಲ್ಲಿ

ಸುಖವಾಗಿ ಮಲಗಿಕೋ. ಇಂಪಾದ ಸಂಗೀತವನ್ನು ಹಾಡಿ ನಿದ್ರೆ ಬರಿಸುತ್ತೇನೆ. ನಾಳೆಯ, ನಾಳೆಯ ನಮ್ಮಿಬ್ಬರ ಹಣೆಬರಹವೂ ಮರೆಯಲಿ' ಎಂದಳು.

'ಚೌಹು' ಎದ್ದು ಕೋಪದಿಂದ, ಚೆನ್ನಾಗಿ ಅಲಂಕರಿಸಿದ್ದ ತನ್ನ ಜುಟ್ಟನ್ನೆಲ್ಲಾ ಕೀಳುತ್ತಾ 'ಎಂದಿಗೂ ಆಗದು. ಇನ್ನೊಂದು ಸಂತೋಷಕರವಾದ ಮಾರ್ಗವಿದೆ. ಅದರಿಂದ ನನಗೆ ತಪ್ಪಿ ಹೋಗಿರುವ ಸಂಸಾರ ಶಾಂತಿ ಉಂಟಾಗುತ್ತದೆ. ನನ್ನ ಶತ್ರುವಿಗೆ ಕಣ್ಣು ಕಾಣದ ಮಂಕು ಉಂಟಾಗುತ್ತದೆ. ಆ ಬುದ್ಧಿಹೀನನಾದ 'ಹೆಂಗ್ ಚೌ' ಗಿಂತ ಮುಂಚಿತವಾಗಿ ನಾನೇ ಈಗ ಅವನ ಮನೆ ಬಾಗಿಲೆಗೆ ಹೋಗಿ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ. ನನ್ನ ಆತ್ಮ ಅವನನ್ನು ಹೋದ ಹೋದ ಕಡೆ ಕಾಡುತ್ತದೆ. ರೊಟ್ಟಿಯ ಒಲೆಯ ಅಂಗಡಿಯ ಈ ಕಾಟದಿಂದ ವಾಸಕ್ಕೆ ಅನರ್ಹವಾಗುತ್ತದೆ. ನನಗೂ ಒಳ್ಳೆ ಗೌರವಯುತವಾದ ಸಮಾಧಾನವಾಗುತ್ತದೆ' ಹೀಗೆ ಹೇಳಿಕೊಂಡು 'ಚೌಹು' ತನ್ನ ಕಸಬಿನ ಅತ್ಯಂತ ತೀಕ್ಷ್ಣವಾದ ಒಂದು ಆಯುಧವನ್ನು ತೆಗೆದು ಕೊಂಡು ಅದನ್ನು ಬಹಳ ಎಚ್ಚರಿಕೆಯಿಂದ ತಲೆಯ ಸುತ್ತ ನೂರಾರು ಸಲ ಸರಸರನೆ ತಿರುಗಿಸಿದನು.

ಅವನ ಹೆಂಡತಿಯಾದ 'ಸೆ ಚೌ' ಅವನ ಕೈಯನ್ನು ಹಿಡಿದು ತಡೆಯುವುದು ಆವಶ್ಯಕವೆಂದು ಭಾವಿಸಲಿಲ್ಲ. ಅವಳು 'ಕುರಿಮರಿ ಹುಟ್ಟಿದ ಹೊಸದರಲ್ಲಿ ಹುಲಿಗೆ ಹೆದರುವುದಿಲ್ಲ. ಆದರೆ ಕುರಿಯಾಗುವ ಹೊತ್ತಿಗೆ ತೋಳಕ್ಕೆ ಹೆದರುತ್ತದೆ' ಎಂಬ ಗಾದೆಯಿದೆ. ನೀನೇನೋ ಪೂರ್ಣವಾದ ಧೈರ್ಯದಿಂದಲೇ ಹೆಂಗ್‌ಚಾವಿನ ಅಂಗಡಿಗೆ ಹೊರಡುವೆ. ಆದರೆ ದಾರಿಯಲ್ಲಿ ಕೆಲಸಕ್ಕೆ ಬಾರದ ಸಾಮಾನುಗಳನ್ನೆಲ್ಲಾ ಕೊಳ್ಳುವವನ ಅಂಗಡಿ ಇದೆ. ಅದರ ಮುಂದೆ ಮದ್ಯದ ವ್ಯಾಪಾರಿ 'ಕಾಂಗ್' ತನ್ನ ಮದ್ಯಗಳನ್ನೆಲ್ಲಾ ಬಹಳ ಹಿತವಾಗಿ ಪ್ರದರ್ಶಿಸಿರುವ ಅಂಗಡಿ ಇದೆ. ಆ ಕತ್ತಿ ಇನ್ನೂ ನಿನ್ನ ವಶದಲ್ಲಿ ಇರುವುದರಿಂದ ಆ ಕಡೆ ಇಡು. ನಿನ್ನಲ್ಲಿ ಪೂರ್ಣ ವಿಶ್ವಾಸವುಳ್ಳ ನಾನು ನಿನಗೆ ಒಂದು ದಾರಿಯನ್ನು ಹೇಳುತ್ತೇನೆ. ಅದರಿಂದ ನಿನ್ನ ಎಲ್ಲಾ ಕಷ್ಟಗಳೂ ಪರಿಹಾರವಾಗುತ್ತವೆ. ನಿನ್ನ ಕೈಬಿಟ್ಟು ಹೋಗುತ್ತಿರುವ ಕಸಬೂ ನಿನಗೇ ಉಳಿಯುತ್ತದೆ.'

ತನ್ನ ಹೆಂಡತಿಯು ತನ್ನನ್ನು ಕುರಿಗೆ ಹೋಲಿಸಿದುದರಿಂದ 'ಚೌಹು'ಗೆ ಸ್ವಲ್ಪ ಅಸಮಾಧಾನವಾಯಿತು. ಆದರೆ ಯಾವ ಉಪಾಯದಿಂದ ತನ್ನ ಎಲ್ಲಾ ಕಷ್ಟಗಳೂ ಬಿಡುಗಡೆಯಾಗುವವೋ ಅದನ್ನು ಕೇಳಲು ಅವನಿಗೆ ಬಹಳ ಕುತೂಹಲವಿದ್ದಿತು. ಅವನು 'ಹೆಂಗಸರ ಉಪದೇಶ ಗೋಡೆಹಾಕಿರುವ ನಗರವನ್ನು ಸಹ ನಾಶಮಾಡುತ್ತದೆ.' ಎಂದೂ ಹೇಳಿದ. 'ಆದರೆ ಆಗಲಿ, ಹೇಳು' ಎಂದನು.

ಅವನ ಹೆಂಡತಿಯು 'ಈ ನಗರದ ಅತ್ಯಂತ ಕೀಳಾದ ಪ್ರದೇಶದಲ್ಲಿ ದತ್ತನೆಂಬ ಹೆಸರುಳ್ಳವನು ವಾಸಿಸುತ್ತಿದ್ದಾನೆ. ಅವನು ಕುರುಡು ಭಿಕ್ಷುಕರ ಮುಂದಾಳು. ಎಷ್ಟೋ ಸಲ ನಿನ್ನ ಅಂಗಡಿ ಮುಂದೆ ಹೋಗಿದ್ದಾನೆ. ಆದರೆ ದಾನಿಗಳು ಎಚ್ಚರಿಕೆ ಕೊಟ್ಟಿರುವುದರಿಂದ ಒಳಕ್ಕೆ ಬಂದಿಲ್ಲ. ದತ್ತನು ಒಂದೆರಡು ಸಣ್ಣ ವ್ಯತ್ಯಾಸಗಳನ್ನು ಬಿಟ್ಟರೆ ಎಲ್ಲಾ ವಿಧದಲ್ಲಿಯೂ ಪೂರ್ಣವಾಗಿ ನಿನ್ನ ಪ್ರತಿರೂಪವೇ ಆಗಿದ್ದಾನೆ. ನಿನ್ನನ್ನು ಚೆನ್ನಾಗಿ ಬಲ್ಲವರು ಯಾರಿಗೂ, ನೀವಿಬ್ಬರೂ ಒಟ್ಟಾಗಿ ನಿಂತುಕೊಂಡ ಹೊರತು ವ್ಯತ್ಯಾಸವು ತಿಳಿಯುವುದಿಲ್ಲ. ಇದರ ಜತೆಗೆ ಅವನು ಕಿವುಡನಾದುದರಿಂದ ಹೇಳಿದುದು ಅವನಿಗೆ ಕೇಳಿಸುವುದಿಲ್ಲ. ಮಗನಾದುದರಿಂದ ಅವನು ಮಾತಾಡುವುದಿಲ್ಲ. ಇಷ್ಟು ತಿಳಿದ ಮೇಲೆ, ಒಡೆಯ, ನಿನ್ನ ಮಿಡತೆಯಂತಹ ಬುದ್ಧಿಪೂರ್ಣವಾದ ಏರ್ಪಾಡನ್ನು ಸ್ಫೂರ್ತಿಯಿಂದಲೇ ಗ್ರಹಿಸಿದೆಯೆಂದು ತಿಳಿಯುತ್ತೇನೆ'

ಚೌಹು ತನ್ನಲ್ಲಿ ತಾನು ಸಂತೋಷಪಡುತ್ತಾ 'ಸಂದೇಹವೇನು? ದತ್ತನು ಮನೆಯಲ್ಲಿ ಇಲ್ಲದಾಗ ನಾನು ಅಲ್ಲಿ ಹೋಗಿ ಅವನ ಆಸ್ತಿಯನ್ನೆಲ್ಲಾ ಎತ್ತಿಕೊಂಡು ಯಾವುದಾದರೂ ದೂರದ ದೇಶಕ್ಕೆ ಹೋಗಿ 'ಹೆಂಗ್ ಚೆ' ವಿನ ಸೇಡಿನಿಂದ ತಪ್ಪಿಸಿಕೊಂಡು ಸುಖವಾಗಿರಬಹುದು, ಎಂಬುದೇ ಈ ಏರ್ಪಾಡಿನ ಉಳಿದ ಮಾತುಗಳು' ಎಂದನು.

ಅವನ ಹೆಂಡತಿಯು 'ನಿನ್ನ ದಾಸಿಯನ್ನು ಈ ಗೋಡೆ ಹಾಕಿದ ಪಟ್ಟಣದಲ್ಲಿ ಅವಳ ಪಾಡಿಗೆ ಅವಳನ್ನು ಬಿಟ್ಟು ಹೋಗುವುದು; ಅದರಲ್ಲಿಯೂ ಆ ಕ್ರೂರಿಯಾದ 'ಹೆಂಗ್ ಚೊ' ತನ್ನ ಪ್ರತಿಜ್ಞೆಯನ್ನು ನೆರವೇರಿಸಿ ಆತ್ಮ ಹತ್ಯ ಮಾಡಿಕೊಂಡರೆ ಅವನನ್ನು ನಾನು ಎತ್ತಿಹಾಕಬೇಕಾಗುವುದು. ನಿಜವಾಗಿಯೂ ಸ್ವಾಭಾವಿಕವಾಗಿ ಸ್ವಚ್ಛವಾಗಿರುವ ನಿನ್ನ ಬುದ್ಧಿಯ ತಿಳಿನೀರ ಪ್ರವಾಹದಲ್ಲಿ ಮಂಜು ಮುಸುಕಿದೆ. ಚೆನ್ನಾಗಿ ಕೇಳು, ನಿನ್ನ ವೇಷವನ್ನು ಸ್ವಲ್ಪ ಬದಲಾಯಿಸಿಕೊಂಡು ದತ್ತನ ಮನೆಯ ಬಾಗಿಲಿಗೆ ಹೋಗು.'

'ಮೊದಲು ಆ ಸ್ಥಳ ಯಾವುದು ತಿಳಿದುಕೊಳ್ಳಬೇಕು' ಎಂದು ಚೌಹು ಎಲ್ಲಾ ವಿಷಯಗಳನ್ನು ಸ್ಪಷ್ಟವಾಗಿ ತಿಳಿಯುವ ಆಸೆಯಿಂದ ಹೇಳಿದನು. ಅವನ ಹೆಂಡತಿಯು 'ಹೇಗಾದರೂ ಆಗಲಿ, ಅವನ ತಾಯಿಯೊಂದಿಗೆ ಅವನನ್ನು ಪ್ರಶಂಸಿಸಿ ನಿನ್ನ ಕಸಬಿನ ಗೌರವಕ್ಕೂ ಲಾಭಕ್ಕೂ ಅವನನ್ನು ಪಾಲುಗಾರನಾಗಿ ಮಾಡಿಕೊಳ್ಳುವೆನೆಂದು ಕೇಳು. ತತ್‌ಕ್ಷಣವೇ ಒಪ್ಪಿಗೆಯ ಮಾತುಗಳು ಹಾರಿಬರುತ್ತವೆ. ಯಾಕೆಂದರೆ ಭಿಕ್ಷದ ಯಾವ ಭಾಗವೂ ಖಿಲವಾಗುತ್ತಿದೆ. ದತ್ತನಲ್ಲಿ ಹೂಳಿಟ್ಟ ಹಣವಿಲ್ಲ. ಸಾಮಾನ್ಯವಾಗಿ ಕೊಡುವುದಕ್ಕಿಂತ ಸ್ವಲ್ಪ ಹೆಚ್ಚು ಕೂಲಿಯನ್ನು ಕೊಡಲು

ಹಿಂದೆಗೆಯಬೇಡ. ನಿನ್ನ ಜೀವ ಅದರ ಮೇಲೆ ಅವಲಂಬಿಸಿದೆ. ದತ್ತನನ್ನು ಈ ರೀತಿ ಸಂಪಾದಿಸಿದ ನಂತರ ಅವನಿಗೆ ಬೇಗ ಬೇಗ ನಿನ್ನ ಕಸಬಿನ ಒರಟು ಮಾರ್ಗಗಳನ್ನು ಹೇಳಿ ಕೊಟ್ಟು, ನಿನ್ನ ಬಟ್ಟೆಗಳಂತೆಯೇ ಅವನಿಗೆ ಬಟ್ಟೆಗಳನ್ನು ಹಾಕಿ ನಿನ್ನ ಸ್ಥಳದಲ್ಲಿ ಅವನನ್ನು ಅಂಗಡಿಯಲ್ಲಿ ಕೂರಿಸಿ ನೀನು ಒಳಗೆ ಇರು. ಈ ತಂತ್ರವು ಯಾರಿಗೂ ತಿಳಿಯುವುದಿಲ್ಲ. ಇತರರಿಗೆ ಹೇಳಲು ದತ್ತನಿಗೆ ಸಾಧ್ಯವಾಗುವುದಿಲ್ಲ. ಹೆಂಗ್ ಚೊ, ಈ ರೀತಿ ದತ್ತನು ಸ್ಪಷ್ಟವಾಗಿ ಕಣ್ಣಿಗೆ ಬೀಳುತ್ತಿರುವುದನ್ನು ನೋಡಿ, ಆತ್ಮಹತ್ಯೆಮಾಡಿಕೊಳ್ಳುವುದು ಅವಶ್ಯಕವೆಂದು ಭಾವಿಸುವುದಿಲ್ಲ. ಅವನು ದತ್ತನನ್ನು ಕತ್ತರಿಸಿ ಹಾಕಿದರೆ, ಅಧಿಕಾರಿಗಳು ಬಂದು ಅವನನ್ನು ಹಿಡಿದುಕೊಂಡು ಹೋಗುವರು. ನೀನು ಸುರಕ್ಷಿತವಾಗಿರುವೆ. ಕೊನೆಯಲ್ಲಿ ಮತ್ತೇನು ನಡೆಯದಿದ್ದರೂ ನಿನ್ನ ಉತ್ಪತ್ತಿ ಹೆಚ್ಚಾಗುವುದು. ಏಕೆಂದರೆ ದತ್ತನು ಒಳ್ಳೆ ಕೆಲಸಗಾರನೂ, ಮಿತವ್ಯಯಿಯೂ, ಮದ್ಯವಿರೋಧಿಯೂ ಎಲ್ಲಾ ವಿಧದಲ್ಲೂ ನಂಬಿಕೆಗೆ ಅರ್ಹನೂ ಆಗುವನು. ಇಂಥ ಅಪರೂಪದ ಕ್ಷೌರಕನಿರುವ ಅಂಗಡಿಗೆ ಗಿರಾಕಿಗಳು ಯಾವಾಗಲೂ ಪ್ರವಾಹದಂತೆ ನುಗ್ಗುತ್ತಿರುವರು.'

ಚೌಹುವು 'ಅಯ್ಯೋ ಇಷ್ಟೆಯೆ! ನೀನು ಯಾವುದೋ ಸ್ಫೂರ್ತಿಯ ಏರ್ಪಾಡೆಂದು ಹೇಳಿದಾಗ ನಾನು ಒಂದು ಗಳಿಗೆ ನಿಜವಾಗಿಯೂ ನಿನಗೆ ಅಂತಹ ಉಪಾಯವು ಅಕಸ್ಮಾತ್ತಾಗಿ ಹೊಳೆದಿರಬಹುದೆಂದು ತಿಳಿದಿದ್ದೆ. ಆದರೆ ನಿನ್ನ ಸೂಚನೆ, ಹಿಮದ ಗಡ್ಡೆಯಿಂದ ಗಟ್ಟಿಯಾದ ನದಿಯನ್ನು ಬಾತುಗಳು ದಾಟಲು ಮಾಡಲು ಪ್ರಯತ್ನಕ್ಕೆ ಸಮಾನವಾಗಿವೆ. ಬರಿಯ ಮಾತಿನ ಮೆರವಣಿಗೆ; ಫಲ ಮಾತ್ರ ಏನೂ ಇಲ್ಲ. ನಾಳೆ ಬೆಳಿಗ್ಗೆ ದತ್ತನು ಇಲ್ಲಿ ತನ್ನ ದಾರಿದ್ರ್ಯವನ್ನು ಹೇಳಿಕೊಂಡು, ಕೆಲಸ ಕೊಡಿ ಎಂದು ಬೇಡಿಕೊಂಡರೆ, ಮಾತ್ರ ಅವನ ಪ್ರಾರ್ಥನೆಯನ್ನು ಲಾಲಿಸುವೆನು. ಆದರೆ ಆ ಅಲ್ಪನನ್ನು ಹೋಗಿ ನೋಡುವುದು ನನ್ನ ಯೋಗ್ಯತೆಗೆ ಕಡಿಮೆಯಾದುದು' ಎಂದನು.

ಮಾರನೆ ದಿನ ದತ್ತನು 'ಹೊಳೆಯುವ ಸಿಡಿಲಿನ' ಬಾಗಿಲಿಗೆ ಒಂದನು. ಬೇಗ ಬೇಗ ತಲೆ ಬೋಳಿಸುವ ಮತ್ತು ಜುಟ್ಟನ್ನು ಅಲಂಕರಿಸುವ ಸುಲಭವಾದ ಮಾರ್ಗಗಳನ್ನು ಕಲಿತುಕೊಂಡು ತನ್ನ ಕೈಯಿಂದ ಅಲಂಕರಿಸಿಕೊಳ್ಳಲು ಬಂದವರಿಗೆಲ್ಲಾ ಶಸ್ತ್ರಚಿಕಿತ್ಸೆ ಮಾಡಲು ಪ್ರಾರಂಭಿಸಿದನು. ತನಗೆ ವಂದಿಸಿ ಮಾತನಾಡಿಸಿದವರಿಗೆಲ್ಲ ಅವನು ಸಂಜ್ಞೆಯಿಂದಲೇ ಪ್ರತ್ಯುತ್ತರವನ್ನು ಕೊಟ್ಟು 'ನಿಮಗೆ ಸ್ವಾಗತ; ಆದರೆ ನಾನು ನಿರತನಾಗಿರುವ ಈ ಕರ್ತವ್ಯದಿಂದ ಈಗ ವಿಮುಖನಾಗಲಾರೆ' ಎಂಬ ಭಾವವನ್ನು ವ್ಯಕ್ತಪಡಿಸುತ್ತಿದ್ದನು. ಇಷ್ಟಾದರೂ ಮುಖ್ಯವಾದ ವಿಷಯ ಬಂದಾಗ ಅವನ

ಮನಸ್ಸು ಒಳ್ಳೆ ಚುರುಕಾಗಿರುತ್ತಿದ್ದಿತು. ಅವನು ಬೇರೆ ಜ್ಞಾನದಲ್ಲಿರುವನೆಂದುಕೊಂಡು, ಗಿರಾಕಿಗಳಲ್ಲಿ ಯಾರಾದರೂ ಕೊಡಬೇಕಾದ ದುಡ್ಡನ್ನು ಕೊಡದೆ ತಪ್ಪಿಸಿಕೊಳ್ಳಲು ಪ್ರಯತ್ನಿಸಿದರೆ, ದತ್ತನು ಅವರನ್ನು ಗೋಡೆಗೆ ಅಮುಕಿ ಅವರ ಕತ್ತನ್ನು ಹಿಡಿದುಕೊಂಡು, ಅನುಮಾನಕ್ಕೆ ಅವಕಾಶವಿಲ್ಲದಂತೆ ಅವರ ಮುಖದ ಮುಂದೆ ಹೊಳೆಯುವ ಕತ್ತಿಯನ್ನು ಅಲ್ಲಾಡಿಸುತ್ತಿದ್ದನು. ದತ್ತನ ಕೈಚಳಕ ನಿರೀಕ್ಷಿಸಿದ್ದುದಕ್ಕಿಂತಲೂ ಬಹಳ ಚುರುಕಾಗಿದ್ದುದರಿಂದ ಅವನ ಗಿರಾಕಿಗಳ ಸಂಖ್ಯೆ ದಿನದಿನಕ್ಕೆ ಬೆಳೆಯತೊಡಗಿತು. 'ಇಂತಹ ಬೀದಿಯಲ್ಲಿ ಒಬ್ಬ ಕ್ಷೌರಕ ಇದ್ದಾನೆ. ಒಳ್ಳೆಯ ನಾಗರೀಕವಾದ ಮಾತನ್ನು ಆಡುವ ಸಬೂಬನ್ನೇ ಅವನು ಇಟ್ಟುಕೊಂಡಿಲ್ಲ. ತನ್ನ ಕೈಯಲ್ಲಿ ಸಿಕ್ಕಿದವರಿಗೆ 'ದಿವ್ಯವಾದ ಮಂತ್ರೌಷಧಿಗಳನ್ನೂ ಸಮಸ್ತ ರೋಗಹಾರಿ ದ್ರಾವಕವನ್ನೂ ಅವನು ಬಲಾತ್ಕರಿಸುವುದಿಲ್ಲ' ಎಂಬ ಸುದ್ದಿ ನಿಜವೇ ಎಂದು ನೋಡಲು ನಗರದ ನಾನಾ ಭಾಗಗಳಿಂದ ಜನರು ದತ್ತನ ಅಂಗಡಿಗೆ ಬರತೊಡಗಿದರು. ಇದರಿಂದ 'ಚೌಹು' ಒಳ್ಳೆ ಧನಿಕನಾಗತೊಡಗಿದನು. ಆದರೆ ದತ್ತನು ತನ್ನ ತಾಯಿಯ ಎಚ್ಚರಿಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು ತನ್ನ ಮುಖದ ಮುಂದೆ ಮುಸುಕನ್ನು ಎತ್ತಿಯೇ ಇದ್ದುದರಿಂದ 'ಚೌಹು' ಮತ್ತು ಅವನ ಹೆಂಡತಿಗೆ ದತ್ತನ ಮಾತಿನ ದೌರ್ಬಲ್ಯವನ್ನು ಕುರಿತು ಸಂದೇಹವುಂಟಾಗಲಿಲ್ಲ. ಆದುದರಿಂದ ಅವರು ದತ್ತನು ಎದುರಿಗೆ ಇದ್ದರೂ ಅತ್ಯಂತ ಮುಖ್ಯವಾದ ವಿಷಯಗಳ ಮೇಲೆ ನಿಸ್ಸಂಕೋಚವಾಗಿ ಮಾತನಾಡುತ್ತಿದ್ದರು. ದತ್ತನು ತಾನು ಮೌನವಾಗಿಯೇ ಇದ್ದುಕೊಂಡು ಅವರ ಹಿಂದಲ ಜೀವನದ ಅನೇಕ ಸಂಗತಿಗಳನ್ನು ಗ್ರಹಿಸಿದನು.

ಹುಲ್ಲಿನ ಗರಿಗಳು ರೇಶಿಮೆ ಹುಳುಗಳಾಗುವ ತಿಂಗಳಿನ ಒಂದು ಸಾಯಂಕಾಲ, ದತ್ತನು ಒಬ್ಬನೇ ಅಂಗಡಿಯಲ್ಲಿ ತನ್ನ ಆಯುಧಗಳ ಹರಿತವನ್ನೂ ಕಾಂತಿಯನ್ನೂ ಹೆಚ್ಚಿಸುತ್ತಾ ಕುಳಿತಿದ್ದನು. ಒಳಗಿನಿಂದ 'ಚೌ ಹು'ವಿನ ಹೆಂಡತಿಯು 'ಈ ಕಾಡಿನ ಗಾಳಿ, ರಾಕ್ಷಸನ ಬಾಯಿನ ಉಸಿರಿನಂತೆ ಬೆಚ್ಚಗೆ ಸುಖರಹಿತವಾಗಿದೆ. ಹೊರಗಿನ ಕೊಠಡಿಯಲ್ಲಿ ಒಂದು ಗಳಿಗೆ ವಿಶ್ರಮಿಸಿಕೊಳ್ಳೋಣ' ಎಂದುದು ಕೇಳಿಸಿತು. ಅನಂತರ ಅವರು ಹೊರಗಿನ ಅಂಗಡಿಗೆ ಬಂದು ಒಂದು ಆಸನದ ಮೇಲೆ ಕುಳಿತುಕೊಂಡರು. 'ಚೌಹು' ಧೂಮಪಾನಮಾಡುತ್ತಾ ಬೀಸಣಿಗೆಯಲ್ಲಿ ಬೀಸಿಕೊಳ್ಳತೊಡಗಿದನು. ಅವನ ಹೆಂಡತಿಯು ತನ್ನ ತಲೆಕೂದಲಿಗೆ ಅಂಟನ್ನು ಹಾಕಿ ರಕ್ಕೆಯನ್ನು ಬೀಸಿಕೊಂಡಿರುವ ಹಕ್ಕಿಯ ಆಕಾರಕ್ಕೆ ಅದನ್ನು ತಿದ್ದಿಕೊಳ್ಳುತ್ತಿದ್ದಳು.

'ಚೌಹು' ವು ಹಿಂದಲಂತೆ ಅತ್ಯಂತ ಎಚ್ಚರಿಕೆಯಿಂದ ಇರಬೇಕಾದ ಅವಶ್ಯಕತೆ ಈಗ ಇಲ್ಲ. ರೊಟ್ಟಿ ಅಂಗಡಿಯ 'ಹೆಂಗ್ ಚೊ' ಬೀದಿಗೆ ಹಾಕ ಬೇಕಾದ ಕಲ್ಲುಗಳನ್ನು ಆರಿಸಿ, ತೂಗಹಾಕಬೇಕಾದ ಲಾಂದ್ರಗಳ ಸಂಖ್ಯೆಯನ್ನು ಗೊತ್ತು ಮಾಡುವವರ ಪೈಕಿ ತಾನೂ ಒಬ್ಬನಾಗಬೇಕೆಂದು ಬಯಸುತ್ತಿದ್ದಾನೆ. ಇದರಲ್ಲಿ ಅವನಿಗೆ ಎದುರಾಗಿ ನಿಂತಿರುವವನು ಮದ್ಯದ ವ್ಯಾಪಾರಿ 'ಕಾಂಗ್' ತನಗೆ ಬೀದಿಗೆ ಹಾಕಬೇಕಾದ ಕಲ್ಲುಗಳು, ತೂಗ ಹಾಕಬೇಕಾದ ಲಾಂದ್ರ ಇವುಗಳ ವಿಚಾರ ಬಹಳ ಚೆನ್ನಾಗಿ ತಿಳಿದಿರುವುದೆಂದೂ, ಸಾರ್ವಜನಿಕ ವೆಚ್ಚವನ್ನು ತಾನು ಕಣ್ಣಿಟ್ಟು ನೋಡಿಕೊಳ್ಳುವೆನೆಂದೂ, ರೊಟ್ಟಿಯ ಹಿಟ್ಟಿನ ಜತೆಯಲ್ಲಿ ಪುಡಿಮಾಡಿದ ಬಿಳಿ ಮಣ್ಣನ್ನು ಮಾಮೂಲಾಗಿ ಸೇರಿಸುವವರ ದುರಾಶೆಯನ್ನು ತಾನು ಪೂರ್ಣವಾಗಿ ಪ್ರತಿಭಟಿಸುವೆನೆಂದೂ ಹೇಳುತ್ತಿದ್ದಾನೆ. ಗೊತ್ತಾದ ಪರೀಕ್ಷೆಯ ದಿನ ಬಂದಾಗ ಎಲ್ಲರೂ ತನ್ನ ಯೋಗ್ಯತೆಯ ಒಪ್ಪಿಗೆಯನ್ನೇ ತೋರಿಸಬೇಕೆಂಬುದು 'ಹೆಂಗ್ ಚೋ'ವಿನ ಆಸೆಯಾಗಿರುತ್ತದೆ. ಆದುದರಿಂದ ಅವನು ನನಗೆ ಬರೆದಿರುವ ಕಾಗದದಲ್ಲಿ ನಮ್ಮಿಬ್ಬರಿಗೂ ಗೌರವಯುತವಾದ ರಾಜಿಯಾಗಬೇಕೆಂದು ಹೇಳಿ, ಪ್ರತಿಯೊಬ್ಬ ಮನುಷ್ಯನೂ ಚೆನ್ನಾಗಿ ಕ್ಷೌರ ಮಾಡಿಕೊಂಡು ಜುಟ್ಟನ್ನು ಅಲಂಕಾರವಾಗಿ ಇಟ್ಟುಕೊಳ್ಳಬೇಕೆಂದು ಬಲಾತ್ಕರಿಸುವ ಕಾನೂನನ್ನು ಮಾಡಬೇಕಾದುದು ಆವಶ್ಯಕವೆಂದು ಹೇಳಿದ್ದಾನೆ' ಎಂದನು.

ಅವನ ಹೆಂಡತಿಯಾದ 'ಸೆ ಚೌ' ಹಲ್ಲಿನಲ್ಲಿ ಕಡಿದುಕೊಂಡಿದ್ದ ದಂತದ ಪಿನ್‌ಗಳ ನಡುವೆ 'ಈ ವಿಷಯ ಹೀಗೆ ತೀರ್ಮಾನವಾಗುವುದನ್ನು ಒಪ್ಪತಕ್ಕದ್ದೆ. ಇನ್ನು ಮುಂದೆ ಹಿಂದಲಂತೆ ನೀನೆ ನಿನ್ನ ಅಂಗಡಿಯ ಕೆಲಸ ಮಾಡುವೆ?' ಎಂದಳು.

ಚೌಹು 'ಸಂದೇಹವೇನು, ದತ್ತನೇನೋ ಅವನ ಯೋಗ್ಯತೆಯನ್ನೂ ಅಲ್ಪಬುದ್ಧಿಯನ್ನೂ ನೋಡಿದರೆ ನಿರೀಕ್ಷಿಸಿದುದಕ್ಕಿಂತ ಚೆನ್ನಾಗಿಯೇ ಶ್ರಮ ಪಟ್ಟು ಕೆಲಸಮಾಡಿದ್ದಾನೆ. ಆದರೆ ನಾಗರಿಕನಾದ ಉತ್ತಮವಾದ ಸಂಭಾಷಣೆ ಇಲ್ಲದಿದ್ದರೆ, ಮೇಲುತರಗತಿಯ ಜನ ನಮ್ಮಲ್ಲಿ ಉದಾಸೀನರಾಗುತ್ತಾರೆ. ತನ್ನ ಅದೃಷ್ಟವನ್ನು ತಾನು ತಪ್ಪಿಸಿಕೊಳ್ಳಲು ಪ್ರಯತ್ನಿಸುವುದು ನಿಜವಾಗಿಯೂ ಮೂರ್ಖತೆ. ದತ್ತನು, ಕುರುಡು ಭಿಕ್ಷುಕರನ್ನು ಬೀದಿಯಿಂದ ಬೀದಿಗೆ ಕರೆದುಕೊಂಡು ಹೋಗುವುದಕ್ಕಾಗಿಯೇ ಹುಟ್ಟಿರುವಂತೆ ತೋರುತ್ತದೆ. ತನ್ನ ಕಸಬಿಗೆ ಅವನು ಮತ್ತೆ ಹಿಂದಿರುಗಬೇಕು.'

ಅವನ ಹೆಂಡತಿಯು 'ಆಳವಾದ ಬುದ್ಧಿಯಿಲ್ಲದ ಚೌಹು ದ್ರಾಕ್ಷಾರಸವನ್ನು ಕುಡಿಯುತ್ತಿರುವ ಮನುಷ್ಯರು ಇಷ್ಟಪಟ್ಟು ಸುಲಭವಾಗಿ ಹುಳಿ ಮದ್ಯವನ್ನು ಸೇವಿಸುವರೆ? ರೇಶಿಮೆ ವಸ್ತ್ರಗಳನ್ನು ತೊಡುತ್ತಿರುವವರು, ಚರ್ಚೆಮಾಡದೆ ಅದನ್ನು ಬಿಟ್ಟು ಗೋಣಿಚೀಲವನ್ನು ಧರಿಸುವರೆ? ನಿನ್ನ ಕೆಲಸಗಳನ್ನೂ ನಿನ್ನ ಸುಖಗಳನ್ನೂ ಪರಿಗಣಿಸುವಾಗ ದೊಡ್ಡವಾಗುವ ನಿನ್ನ ಕಣ್ಣುಗಳು, ಇತರರ ಕೆಲಸಗಳನ್ನು ಕಂಡಾಗ ಸಂಣವಾಗುತ್ತವೆ. ದತ್ತನು ಎಂದಿಗೂ ಮತ್ತೆ ತನ್ನ ಹಳೆಯ ಭಿಕ್ಷುಕರೊಂದಿಗೆ ಸೇರುವುದಿಲ್ಲ. ಆ ಗುಂಪು ಈ ವೇಳೆಗೆ ಬೇರೆ ಬೇರೆಯಾಗಿ ಚದರಿಹೋಗಿದೆ. ಈಗ ಅವನಲ್ಲಿ ಸ್ವಲ್ಪ ದುಡ್ಡು ಸೇರಿದೆ. ಕಸಬಿನಲ್ಲಿ ಅವನು ನಿಪುಣನಾಗಿದ್ದಾನೆ. ಅವನು ಬೇರೆ ಒಂದು ಅಂಗಡಿಯನ್ನು—ಬಹುಶಃ ನಿನ್ನ ಅಂಗಡಿಯ ಎದುರಿಗೇ ಅಥವಾ ಮಗ್ಗುಲಲ್ಲಿ—ತೆಗೆದುಕೊಂಡು, ಉಪಾಯದಿಂದಲೂ, ಕಡಿಮೆ ಬೆಲೆಯಿಂದಲೂ, ಒಳ್ಳೆಯ ಕೆಲಸದಿಂದಲೂ, ನಿನ್ನ ಗಿರಾಕಿಗಳ ಬಹುಭಾಗವನ್ನು ತನ್ನ ಕಡೆಗೆ ಎಳೆಯುವನು'

ಚೌಹು ಹಳದಿ ಬಣ್ಣಕ್ಕೆ ತಿರುಗಿ ಪೆಚ್ಚಾದನು. 'ಪ್ರವಾಹದಿಂದ ತಪ್ಪಿಸಿಕೊಳ್ಳುವುದಕ್ಕಾಗಿ, ಹುಲಿಯ ಬಾಲವನ್ನು ಹಿಡಿದುಕೊಳ್ಳಬೇಡ' ಎಂಬ ಗಾದೆಯಲ್ಲಿ ಆಳವಾದ ತತ್ವ ಅಡಗಿದೆ. ಈಗ ನನ್ನ ಕಸಬನ್ನು ನಾನೇ ಮಾಡಿಕೊಳ್ಳಬೇಕೆಂದು ನಾನು ಯೋಚಿಸುತ್ತಿರುವುದರಿಂದ ನಾನು ಮತ್ತೊಬ್ಬ ಕಸಬುದಾರನನ್ನು ಗೊತ್ತು ಮಾಡಿಕೊಳ್ಳುವುದು ಎಂದಿಗೂ ಸಾಧ್ಯವಿಲ್ಲ. ಆದರೆ ದತ್ತನು ಈ ಅನುಭವವನ್ನು ಉಪಯೋಗಿಸಿಕೊಂಡು 'ಹೊಳೆಯುವ ಸಿಡಲಿಗೆ' ಎದುರಾಗಿ ಬೇರೆ ಬೋರ್ಡನ್ನು ಸ್ಥಾಪಿಸುವನೆಂಬುದು ಯೋಚನೆಗೂ ಅರ್ಹವಲ್ಲದ ಮಾತು. ಆದುದರಿಂದ ಈ ಅನಿವಾರ್ಯವಾದ ಸಮಸ್ಯೆಗೆ ಬಿಡುಗಡೆಯು, ದತ್ತನನ್ನು ಸಾಧ್ಯವಾದಷ್ಟು ಬೇಗ ಕೊಲ್ಲುವುದೇ ಆಗಿದೆ. ನಮ್ಮ ಕೈಯಲ್ಲಿ, ಇಲ್ಲಿಯವರೆಗೆ ಸಂತೋಷದ ಅನೇಕ ಗುರುತುಗಳನ್ನು ಸ್ವೀಕರಿಸಿದ ಅವನು ಈಗ ನಮ್ಮನ್ನು ಈ ಕಷ್ಟಕ್ಕೆ ಗುರಿಮಾಡುತ್ತಿರುವುದು, ಅತ್ಯಂತ ತಪ್ಪು ಬುದ್ಧಿ ಹೀನತೆಯೂ ಆಗಿದೆ.

'ಸೆ ಚೌ' ದತ್ತನು ಕುಳಿತಿದ್ದ ಸ್ಥಳಕ್ಕೆ ಒಂದು ಅವನ ಮುಂದೆ ನೇತು ಹಾಕಿದ್ದ ತಾಮ್ರದ ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳುತ್ತಾ 'ಹೀಗೆ ಮಾಡುವುದು ನಮಗೆ ಹಿತವಾದುದಿಲ್ಲ. ಆದರೆ ಈ ಕಷ್ಟದಲ್ಲಿ ಮತ್ತೇನನ್ನೂ ಮಾಡುವುದು ಸಾಧ್ಯವಿಲ್ಲ.' ಎಂದಳು.

ಚೌಹುವು 'ಬೀದಿಯು' ದೈವವಶದಿಂದ ನಿರ್ಜನವಾಗಿದೆ. ಈ ಹೊತ್ತಿನಲ್ಲಿ ಇಲ್ಲಿ ಬರುವವರು ಸಾಧಾರಣವಾಗಿ ಯಾರೂ ಇಲ್ಲ. ನಾನು ದತ್ತನಿಗೆ 'ನಿನ್ನನ್ನು ಕ್ಷೌರದಿಂದ ಗೌರವಿಸುತ್ತೇನೆ. ಅದರ ಜತೆಯಲ್ಲಿ ಕೆಲವು ಕಸಬಿನ ಗುಟ್ಟುಗಳನ್ನು ತಿಳಿಸುತ್ತೇನೆ.' ಎಂದು

ಹೇಳುತ್ತೇನೆ. ಅನಂತರ ಅವನಿಗೆ ಕ್ಷೌರ ಮಾಡುತ್ತಿರುವಾಗ ನಾನು ಅಕಸ್ಮಾತ್ತಾಗಿ ನೆಲದ ಮೇಲೆ ಬಿದ್ದಿರುವ ಹಣ್ಣಿನ ಮೇಲೆ ಕಾಲಿಡಬಹುದು. ಆಗ ನನ್ನ ಕೈ—'

'ಸೆ ಚೌ' ತನ್ನ ಸೋಗಸಾದ ಬೆರಳುಗಳನ್ನು ಅಷ್ಟೇ ಅಂದವಾಗಿದ್ದ ಕಿವಿಗೆ ಮುಚ್ಚಿಕೊಂಡು 'ಎಲೈ ರಾಕ್ಷಸ, ಈ ಸಂಭಾಷಣೆಯನ್ನು ಅಷ್ಟು ವಿವರವಾಗಿ ಮುಂದುವರಿಸಬೇಡ. ಮತ್ತು ಈ ಕೋಮಲೆಯ ಎದುರಿಗೆ ನಿನ್ನ ತೀರ್ಮಾನವನ್ನು ಕಾರ್ಯಕ್ಕೆ ರೂಪಗೊಳಿಸಬೇಡ. ನಾಳೆ ಮಧ್ಯಾನ್ನ ನಾನು ಬಟ್ಟೆಗಳ ಅಂಗಡಿಗೆ ಹೋಗುತ್ತೇನೆ. ಈ ಬೂದುಬಣ್ಣದ ಮುತ್ತಿನ ಉಡುಪಿಗೆ ಸರಿಹೋಗುವ ರೇಶಿಮೆ ವಸ್ತ್ರ ಒಂದು ಬೇಕಾಗಿದೆ. ನಾಳೆಯ ದಿನ ನೀನು, ಅಂಗಡಿಯನ್ನು ಕೆಲವು ಗಂಟೆ ಮುಚ್ಚುವುದರಿಂದ ಆ ಕಾಲ ಬಹಳ ಅನುಕೂಲವಾಗಿದೆ. ಅಲ್ಲದೆ ನನ್ನಂತಹ ಕೋಮಲೆಯಾದ ಸುಂದರಿ ಇಲ್ಲಿ ಈಗ ಇರುವುದು ನಾಳೆ ಹೊರಗೆ ಹೋಗುವಾಗ ಮನೆಬಿಟ್ಟು ಹೊರಕ್ಕೆ ಹೋಗುವುದು ಒಳ್ಳೆಯದು. ಸುಮ್ಮನೆ ಒಳಗಿನ ಕೊಠಡಿಯಲ್ಲಿ ಇದ್ದರೆ ಸಾಲದು' ಎಂದಳು.

ಚೌಹು "ಈ ಸೂಚನೆ ಬಹಳ ಚೆನ್ನಾಗಿದೆ. ಆಗ ಯಾರೂ ನಮ್ಮನ್ನು ತೊಂದರೆಪಡಿಸುವುದಿಲ್ಲ" ಎಂದನು.

ಅವನ ಹೆಂಡತಿಯು ತಲೆಗೆ ಸುವಾಸನೆಯ ಚಿನ್ನದ ಧೂಳನ್ನು ಉದುರಿಸಿಕೊಂಡು—ಅದರ ಮೇಲೆ ಬೆಳಕು ಬಿದ್ದ ಕೂಡಲೇ ಅದು ಅತ್ಯಂತ ಕಾಂತಿಯುಕ್ತವಾಗಿ ಹೊಳೆಯುತ್ತಿದ್ದಿತು—'ನಿನ್ನದೇ ಎಂದು ತಿಳಿಯದೆ ಇರುವ ಆಯುಧವನ್ನು ಉಪಯೋಗಿಸುವುದು ಒಳ್ಳೆಯದಲ್ಲವೆ? ದತ್ತನಿಗೆ ಹತ್ತಿರದ ಮೂಲೆಯಲ್ಲಿ ಬಲವಾದ ಒಂದು ಗಂಟುಗಂಟಾದ ದೊಣ್ಣೆಯಿದೆ. ನೆಲದ ಮೇಲೆ ಬಿದ್ದಿರುವ ಯಾವುದಾದರೂ ವಸ್ತುವಿನ ಕಡೆಗೆ ದತ್ತನ ಲಕ್ಷ್ಯವನ್ನು ತಿರುಗಿಸಿ, ಅವನು ಅದನ್ನು ತೆಗೆದುಕೊಳ್ಳಲು ಬಗ್ಗಿದಾಗ, ಅವನನ್ನು ಮೇಲು ಲೋಕಕ್ಕೆ ಕಳುಹಿಸುವುದು ಬಹಳ ಸುಲಭವಾಗುವುದು.'

ಚೌಹು ಈ ಬದಲಾವಣೆಯಲ್ಲಿ ಅಡಗಿದ್ದ ದುರಾಲೋಚನೆಯನ್ನು ಕಂಡು 'ನಿಜ. ಅಲ್ಲದೆ ಆಗ ಬಹಳ ಕಡಿಮೆಯಾಗಿ ಚೆಲ್ಲುವರ—'

ಅವನ ಹೆಂಡತಿಯು ಬೆರಳನ್ನು ಅಳ್ಳಾಡಿಸುತ್ತಾ 'ಹಾ' ಎಂದಳು ! (ಅವಳ ಮನಸ್ಸು ಬಹು ಕೋಮಲವಾಗಿದ್ದಿತು. ಕ್ರೂರವಾದ ಕರ್ಮಗಳನ್ನು ಮನೋಹರವಾದ ಮಾತುಗಳಲ್ಲಿ ಹೇಳಿದರೆ ಹೊರತು ಅವಳ ಮನಸ್ಸು ಹೆದರುತ್ತಿದ್ದಿತು! ) "ಎಲೈ ರಕ್ತದ ಮೇಲೆಯೇ ಮನಸುಳ್ಳ ರಾಕ್ಷಸ! ನಿಲ್ಲು, ಈಗ ನಾವು ನದಿಯ ತೀರದಲ್ಲಿ ವಿರಾಮವಾಗಿ ತಿರುಗಾಡೋಣ, ಸಂಗೀತಗಾರರು,

ಮರದ ಮತ್ತು ಹಿತ್ತಾಳೆಯ ಅನೇಕ ವಾದ್ಯಗಳ ಇಂಪಾದ ಧ್ವನಿಯಿಂದ ಆ ಸ್ಥಳವನ್ನು ಈ ಹೊತ್ತಿನಲ್ಲಿ ಮತ್ತಷ್ಟು ಮನೋಹರವಾಗಿ ಮಾಡಿರುವರು. ಆ ಹೃದಯವನ್ನು ಆಕರ್ಷಿಸುವ ಗಾನದಿಂದ ನಮ್ಮ ಮನಸ್ಸನ್ನು ತುಂಬಿಕೊಳ್ಳೋಣ”

ದತ್ತನಿಂದ ಚೌಹುವನ್ನು ಬಿಡುಗಡೆ ಮಾಡಲು ಗೊತ್ತು ಮಾಡಿದ್ದ ಏರ್ಪಾಡು ನಿಜವಾಗಿಯೂ ಚೆನ್ನಾಗಿದ್ದಿತು. ಸಾಮಾನ್ಯವಾಗಿ ಅದಕ್ಕೆ ಅಪಜಯವಾಗುವ ಸೂಚನೆಗಳೂ ತೋರಲಿಲ್ಲ. ಆದರೆ ತಾನು ಉಪಯೋಗಿಸುತ್ತಿದ್ದ ಗಾದೆಗಳು, ತನಗೆ ವಿರೋಧವಾಗಿ ಪರಿಣಮಿಸುವ ಅರ್ಥವನ್ನು ಸಹ ಉಳ್ಳವುಗಳಾಗಿದ್ದುವೆಂಬುದು ಆ ಬುದ್ಧಿಹೀನನಾದ ಕ್ಷೌರಕನಿಗೆ ತಿಳಿಯಲಿಲ್ಲ. ಸಾಮಾನ್ಯವಾಗಿ ಒಳ್ಳೆಯ ಗಾದೆಗಳನ್ನು ರತ್ನಕ್ಕೆ ಹೋಲಿಸುತ್ತಾರೆ. ರತ್ನದಲ್ಲಿ ಹೇಗೆ ಯಾವ ಕಡೆ ನೋಡಿದರೂ ಕಾಂತಿ ಕಾಣುತ್ತದೆಯೋ ಹಾಗೆಯೇ ಗಾದೆಗಳನ್ನು ಹೇಗೆ ಬೇಕಾದರೂ ಅರ್ಥಮಾಡಿಕೊಳ್ಳಬಹುದು. ಕೊನೆಗೆ ಯಾವ ಅರ್ಥದಲ್ಲಿ ತೆಗೆದುಕೊಂಡರೆ ಅದರಲ್ಲಿ ನೀತಿ, ಜ್ಞಾನ, ವಿವೇಕ ದೊರೆಯುತ್ತದೆ ಎಂಬುದು ಸಾಧಾರಣವಾದ ಮನುಷ್ಯರಿಗೆ ತಿಳಿಯದೇ ಹೋಗಬಹುದು. ಮಾರನೆ ದಿನ ಮಧ್ಯಾಹ್ನ ದತ್ತನು ಅಂಗಡಿಯಲ್ಲಿ ತನ್ನ ಜಾಗದಲ್ಲಿ ಕುಳಿತಿದ್ದಾಗ ಚೌಹು ಅಸ್ಪಷ್ಟವಾದ ಹೆಜ್ಜೆಗಳನ್ನು ಹಾಕುತ್ತಾ ಒಳಕ್ಕೆ ಬಂದನು. ಅಂಗಡಿಗೆ ಯಾರೂ ಬಂದು ತೊಂದರೆ ಕೊಡದಂತೆ ಬಾಗಿಲುಗಳನ್ನೆಲ್ಲಾ ಹಾಕಿದ್ದನು. ಗೋಡೆ ಸಂದಿನಲ್ಲಿ ಏನೂ ಕಾಣದಂತೆ ಚೌಹು ಸಂದಿಗಳಿಗೆಲ್ಲಾ ಬಟ್ಟೆ ಚೂರುಗಳನ್ನು ತುರುಕಿದ್ದನು. ಒಳಕ್ಕೆ ಬರುತ್ತಿರುವಾಗ ಅವನು “ಎಲೈ ದೇವತೆಗಳಿರಾ, ದತ್ತನನ್ನು ಕೊಲ್ಲುವ ವಿಚಾರದಲ್ಲಿ ನನ್ನ ಮನಸ್ಸನ್ನು ಪೂರ್ಣವಾಗಿ ಬದಲಾಯಿಸಿದ್ದೆ. ಆದರೆ ಈಗ ಅವನ ಅನೇಕ ಅಪವಿತ್ರವಾದ ಕೆಲಸಗಳು ನನ್ನ ಜ್ಞಾಪಕಕ್ಕೆ ಬರುತ್ತಿವೆ. ಅದಕ್ಕೆ ಅವನಿಗೆ ಶಿಕ್ಷೆ ಮಾಡಲು ನಾನೇ ನಿಮ್ಮ ಪ್ರತಿನಿಧಿ” ಎಂದುಕೊಂಡನು. ಮತ್ತು ತನ್ನ ಉದ್ದೇಶವು ಸಾಧುವಾದುದೆಂದು ತನಗೇ ನಂಬಿಕೆಯನ್ನುಂಟುಮಾಡಿಕೊಳ್ಳಲು, ( ಮತ್ತು ಕೆಟ್ಟ ದೈವಗಳಿಂದ ತಪ್ಪಿಸಿಕೊಳ್ಳಲು) ಅವನು ಬಾಲ್ಯದಲ್ಲಿ ದೇವಸ್ಥಾನದಲ್ಲಿ ನಿತ್ಯವೂ ಹೇಳುತ್ತಿದ್ದ ಒಂದು ಪ್ರಾರ್ಥನೆಯನ್ನು ಹೇಳುತ್ತಾ ಮುಂದೆ ಬಂದನು. ಆಗ ದತ್ತನಿಗೆ ಇದೇ ಸಮಯ ಎಂಬುದು ಗೊತ್ತಾಯಿತು.

ದತ್ತನು ಇದ್ದಕ್ಕಿದ್ದಂತೆ ಸ್ಪಷ್ಟವಾದ ಧ್ವನಿಯಲ್ಲಿ “ಒಡೆಯ, ನೋಡು ನಿನ್ನ ಕಾಲಿನ ಬಳಿ ಏನೋ ಬಿದ್ದಿದೆ” ಎಂದನು.

'ಚೌಹು' ನೆಲದ ಮೇಲೆ ನೋಡಿದನು. ಅವನ ಮುಂದೆ ಒಂದು ಬೆಳ್ಳಿಯ ನಾಣ್ಯವು ಬಿದ್ದಿತ್ತು. ಅವನ ಮಂಕಾದ ಮತ್ತು ಅವ್ಯವಸ್ಥಿತವಾದ ಬುದ್ಧಿಗೆ, ದತ್ತನು ತನ್ನನ್ನು ಮಾತನಾಡಿಸಿದುದು ತಾನು ಮೊದಲು ಮಾಡಿದ್ದ ಏರ್ಪಾಡಿನಿಂದ ಯಾವುದೋ ರೀತಿ ವಿರೋಧವಾಗಿದ್ದಿತೆಂದು ತೋರಿತು. ದತ್ತನ ಮಾತನ್ನು ಕೇಳಿ 'ನಾನು ದತ್ತನಿಗೆ ಏನೋ ಹೇಳಬೇಕೆಂದು ಯೋಚಿಸಿದ್ದೆನಲ್ಲ' ಎಂದು ಅವನು ಎಂದುಕೊಂಡನು. ಆದರೆ ಆಗ ಅವನ ಮನಸ್ಸು ಸಕಾರಣವಾಗಿ ಯೋಚಿಸುವ ಸ್ಥಿತಿಯಲ್ಲಿ ಇರಲಿಲ್ಲ. ಅವನು ಆಶೆಯಿಂದ ಬೆಳ್ಳಿಯ ನಾಣ್ಯವನ್ನು ತೆಗೆದುಕೊಳ್ಳಬೇಕೆಂದು ಬಗ್ಗಿದನು. ಪ್ರತಿಯೊಂದು ಗಳಿಗೆಯ ಆವಶ್ಯಕತೆಯನ್ನೂ ಸರಿಯಾಗಿ ತಿಳಿದಿದ್ದ ದತ್ತನು, ಚುರುಕಾಗಿ ಮುಂದಕ್ಕೆ ಹಾರಿ ದೊಣ್ಣೆಯನ್ನು ತೆಗೆದುಕೊಂಡು ಅದನ್ನು ಪೂರ್ಣವಾಗಿ ಚೌಹುವಿನ ತಲೆಯ ಮೇಲೆ ಬಿಟ್ಟನು. ಚೌಹು ಕೂಡಲೆ ನೆಲದ ಮೇಲೆ ಬಿದ್ದು ಪ್ರಾಣ ಬಿಟ್ಟನು. ಏಟಿಗೆ ದೊಣ್ಣೆಯೂ ಚೂರುಚೂರಾಯಿತು. ದತ್ತನು ತಡಮಾಡದೆ ತನ್ನ ಯಜಮಾನನ ಉಡುಪುಗಳನ್ನೂ ಒಡವೆಗಳನ್ನೂ ಧರಿಸಿಕೊಂಡು ತನ್ನ ವಸ್ತ್ರಗಳನ್ನು ಚೌಹುವಿಗೆ ಧರಿಸಿ, ನೆಲದಲ್ಲಿದ್ದ ಒಂದು ಕಲ್ಲು ಬಾಗಿಲನ್ನು ತೆರೆದು, ಕ್ಷೌರಕನ ದೇಹವನ್ನು ಕೆಳಗಿನ ಗುಹೆಗೆ ನೂಕಿದನು. ಅನಂತರ ತನ್ನ ಕೂದಲು ಕಟ್ಟಿದ್ದುದನ್ನು ಸ್ವಲ್ಪ ಮಟ್ಟಿಗೆ ಬದಲಾಯಿಸಿ, ಉದ್ದೇಶಪೂರ್ವಕವಾಗಿ ತನ್ನ ತುಟಿಗಳನ್ನು ಆಳವಾಗಿ ಕತ್ತರಿಸಿಕೊಂಡು ಒಳಗಿನ ಕೊಠಡಿಯ ಮಂಚದ ಮೇಲೆ ಕುಳಿತು ಚೌಹುವಿನ ಒಂದು ಹೊಗೆಕೊಳವೆಯನ್ನು ಸೇದುತ್ತಾ, ಸೆಚೌಯ ಬರವನ್ನು ಎದುರು ನೋಡುತ್ತಿದ್ದನು.

'ಸೆಚೌ' ಯು ಒಳಕ್ಕೆ ಬಂದು 'ರೇಶಿಮೆ ಅಂಗಡಿಗಳವರು ಸರಿಯಾದ ಸಾಮಾನುಗಳನ್ನೇ ಇಟ್ಟುಕೊಳ್ಳದೆ ಇರುವುದು ಆಶ್ಚರ್ಯವಾಗಿದೆ. ಇವತ್ತು ನನಗೆ ಬೇಕಾದ ವಸ್ತ್ರಗಳನ್ನು ಹುಡುಕುವುದರಲ್ಲಿ ನನ್ನ ಪಾದರಕ್ಷೆಯ ತಳಗಳೆಲ್ಲಾ ಸವೆದುಹೋದವು. ಒಡೆಯ, ಇವತ್ತಿನ ಕೆಲಸಗಳು ಹೇಗೆ ನಡೆದುವು?'

ದತ್ತನು 'ವಿಧಿಯ ನಿಯಮದಂತೆ. ಆದರೆ ಒಂದು ರೀತಿಯಲ್ಲಿ ಕ್ರೂರವಾಗಿ, ಯಾಕೆಂದರೆ ಒಂದು ಬೆಳಕು ಆರಿಹೋಯಿತು' ಎಂದನು.

'ಸೆಚೌ' ಯು ಅನಿವಾರ್ಯವಾದುದನ್ನು ಹಿತವಾಗಿ ಹೇಳಿದ ದತ್ತನ ಮಾತಿನ ಕ್ರಮವನ್ನು ಒಪ್ಪಿ 'ಅನಿರೀಕ್ಷಿತವಾದ ಬದಲಾವಣೆ ಏನೂ ಆಗಲಿಲ್ಲವಷ್ಟೆ?' ಎಂದಳು.

ದತ್ತನು 'ಮೊದಲಿನಿಂದ ಕೊನೆಯವರೆಗೆ ನಾನು ಯೋಚಿಸಿದ್ದಂತೆಯೇ ಆಯಿತು' ಎಂದನು.

'ಸೆಚೌ'ಗೆ, ಏನೋ ಬದಲಾವಣೆಯಾದಂತೆ ತೋರಿತು. ಆ ಬದಲಾವಣೆಯಲ್ಲಿ ತನಗೆ ಸಂಬಂಧವಿಲ್ಲದಂತೆ ತೋರಿತು. 'ನಾನೂ ಕೂಡ ಯೋಚಿಸಿದ್ದಂತೆ...' ಎಂದಳು.

ದತ್ತನು 'ಮಾತನ್ನು ಆರು ದಾರಿಯಲ್ಲಿ ಬರೆದು ವ್ಯಕ್ತಪಡಿಸಬಹುದು. ಆದರೆ ಹೆಂಗಸರ ಮನಸ್ಸನ್ನು ಓದಲು ಯಾರಿಗೆ ತಾನೆ ಸಾಧ್ಯ? ಆದರೂ ಸ್ಪಷ್ಟವಾಗಿ ಹೇಳಬೇಕಾದರೆ ನಮ್ಮನ್ನು ಅನುಸರಿಸುತ್ತಿದ್ದ ನೆರಳು ಮರೆಯಾಯಿತು. ಭವಿಷ್ಯವು ಶಾಶ್ವತವಾಯಿತು'

'ಸೆಚೌ' ಯು 'ಒಳ್ಳೆಯದಾಯಿತು. ಆದರೆ ನಿನ್ನ ಧ್ವನಿ ಎಷ್ಟು ಬದಲಾಯಿಸಿದೆ! ಬಾಯಿನ ಮುಂದೆ ಆ ಬಟ್ಟೆಯನ್ನು ಯಾಕೆ ಹಿಡಿದುಕೊಂಡಿರುವೆ?' ಎಂದಳು.

ದತ್ತನು ಬಟ್ಟೆಯನ್ನು ತಗಿಸಿ 'ದೊಡ್ಡ ಚೂರಾಯಿತು. ಅದರ ಒಂದು ಚೆಕ್ಕೆ ಮೇಲಕ್ಕೆ ಹಾರಿ ನನ್ನ ತುಟಿಯನ್ನು ಕತ್ತರಿಸಿತು. ನೀನು ಹೇಳುವುದು ನಿಶ್ಚಯ, ಪ್ರತಿಯೊಂದು ಮಾತಿಗೂ ನೋವು ಅಸಹನೀಯವಾಗಿದೆ. ನನ್ನ ಧ್ವನಿ ನನಗೇ ಗುರುತುಹತ್ತುತ್ತಿಲ್ಲ'

'ಸೆಚೌ' ಪಶ್ಚಾತ್ತಾಪದಿಂದ 'ಎಲೈ ಅದ್ವಿತೀಯನಾದ ಚೌಹು, ನೋವನ್ನು ನೀನು ಎಷ್ಟು ಧೈರ್ಯದಿಂದ ಸಹಿಸಿಕೊಳ್ಳುತ್ತಿರುವೆ? ನಾನು ಅಜ್ಞಾನದಿಂದ, ಸುಂದರವಾದ ಬಟ್ಟೆಗಳನ್ನು ಆರಿಸುವುದರಲ್ಲಿ ಸುಖವಾಗಿ ಕಾಲವನ್ನು ಕಳೆಯುತ್ತಿದ್ದಾಗ ನೀನು ಇಲ್ಲಿ ನರಳುತ್ತಾ ಬಿದ್ದಿರುವೆ. ಈಗ ನೋಡು ಸಾವಕಾಶ ಮಾಡದೆ ಇವಳು ನಿನ್ನ ಮನಸ್ಸಿಗೆ ಶಾಂತಿಯನ್ನುಂಟು ಮಾಡಲು ಆಹಾರವನ್ನು ಸಿದ್ಧ ಮಾಡುತ್ತಾಳೆ. ಈ ಸಂದರ್ಭಕ್ಕಾಗಿಯೇ ಚಿನ್ನದ ಮೀನಗಳನ್ನೂ, ಹನ್ನೊಂದು ವರುಷ ಭೂಮಿಯಲ್ಲಿ ಹೂಳಿದ್ದ ಮೊಟ್ಟೆಗಳನ್ನೂ, ಎಣ್ಣೆಯಲ್ಲಿ ಇಟ್ಟಿದ್ದ ಒಂದು ಸಣ್ಣ ಹಾವನ್ನೂ ತಂದಿದ್ದಾಳೆ' ಎಂದಳು.

ಅವರು ಮಾತನಾಡದೆ ಸ್ವಲ್ಪ ಹೊತ್ತು ಊಟ ಮಾಡಿದ ಮೇಲೆ ದತ್ತನು ಮತ್ತೆ ಮಾತನಾಡಿದನು. "ನನ್ನ ಮಾತುಗಳನ್ನು ಲಕ್ಷ್ಯವಿಟ್ಟು ಕೇಳು. ನಿನ್ನ ಮುಂದೆ ಇಡುವ ಈ ಏರ್ಪಾಡಿನಲ್ಲಿ ಏನಾದರೂ ತಪ್ಪಾಗಲಿ ಅವಿವೇಕವಾಗಲಿ ಇದ್ದರೆ ಅದನ್ನು ಕೇಳಲು ಹಿಂದೆಗೆಯಬೇಡ. ರೊಟ್ಟಿ ಅಂಗಡಿಯ ಹೆಂಗ್ ಚೊ ತನ್ನ ಸೇಡಿನ ಪ್ರತಿಜ್ಞೆಯನ್ನು ಎಲ್ಲರೆದುರಿಗೂ ಮಾಡಿದನು. ಅದನ್ನು ಕಂಡವರು ಅನೇಕರು ಇದ್ದಾರೆ. ಆದರೆ ಅವನು ಬರೆದ ರಾಜಿಯ ಕಾಗದ ಯಾರಿಗೂ ತಿಳಿಯದು. ಆದುದರಿಂದ ಗವಿಯಲ್ಲಿ ಬಿದ್ದಿರುವುದನ್ನು ತೆಗೆದುಕೊಂಡು, ನನ್ನ

ಬಟ್ಟೆಗಳನ್ನು ಅದಕ್ಕೆ ತೊಡಿಸಿ, ರಾತ್ರಿಯಾದ ಕೂಡಲೆ ಯಾರಿಗೂ ಕಾಣದಂತೆ ಅದನ್ನು ತೆಗೆದುಕೊಂಡು ಹೋಗಿ "ಹೆಂಗ್ ಚೋ"ವಿನ ಮನೆಯ ಆವರಣದಲ್ಲಿ ಬಿಡೋಣ. "ಹೆಂಗ್ ಚೋ"ವಿಗೆ ನಗರದ ಹೊರಗಡೆ ಒಂದು ಅಂಜೂರದ ತೋಟವಿದೆ. ಪದ್ಧತಿಯಂತೆ ಅವನು ಬೆಳಗಿನ ಜಾವ ಎದ್ದು ಮನೆಯ ಮುಂದೆ ಇರುವ ದೇಹವನ್ನು ನೋಡಿದಾಗ, ತನ್ನ ಪ್ರತಿಜ್ಞೆಯನ್ನೂ ಅದರಿಂದ ತನ್ನ ಸುತ್ತ ಸುತ್ತಿಕೊಳ್ಳುವ ಬಲೆಯನ್ನೂ ತಿಳಿದ ಅವನು ದೇಹವನ್ನು ಗುಟ್ಟಾಗಿ ಅಂಜೂರ ತೋಟದಲ್ಲಿ ಹೂಳಬೇಕೆಂದು ಎತ್ತಿಕೊಂಡು ಹೊರಡುವನು. ಆಗ ನೀನು ನಿನ್ನ ಗಂಡನನ್ನು ಹುಡುಕುತ್ತಾ ಅವನ ಎದುರಿಗೆ ಹೋಗಿ ಅವನ ಗಂಟನ್ನು ನೋಡಿ ಅನುಮಾನದಿಂದ ಗಟ್ಟಿಯಾಗಿ ಕೂಗುವೆ. ಆದರೆ ಬಹಳ ಗಟ್ಟಿಯಾಗಿ ಕೂಗಬೇಡ. ಯಾಕೆಂದರೆ ನಿನ್ನ ಧ್ವನಿ ಬಲವಾದರೆ ಪೋಲಿಸಿನವರು ಬರುತ್ತಾರೆ. ಹೆಂಗ್ ಚೋವಿಗೆ ಬಹಳ ಕಷ್ಟ ಬರುತ್ತದೆ. ಆದರೆ ನಮಗೆ ಏನೂ ಪ್ರಯೋಜನವಾಗುವುದಿಲ್ಲ. ಅದರ ಬದಲು ನೀನು ಧ್ವನಿಯನ್ನು ಸ್ವಲ್ಪ ಮೇಲಕ್ಕೆ ಎತ್ತಿದ ಕೂಡಲೇ, ರೊಟ್ಟಿ-ಅಂಗಡಿಯವನ ಮನೆಯೊಳಕ್ಕೆ ಹೋಗೋಣ. 'ಈ ತಪ್ಪಿಗೆ ನಿನಗೆ ಪೂರ್ಣವಾದ ಪ್ರತಿಫಲವನ್ನು ಕೊಡುತ್ತೇನೆ' ಎಂದು ಬೇಡಿಕೊಳ್ಳುತ್ತಾನೆ. ನೀನು ಹಾಗೆಯೇ ಮಾಡು. ನೀನು ಪ್ರಕಟಿಸಬೇಕಾದ ದುಃಖವನ್ನೂ ಸಹ ಮನಸ್ಸಿನಲ್ಲಿ ಇಟ್ಟುಕೊಂಡು, ಸತ್ತವನಿಗೆ ಸರಿಯಾದ ಶವ ಸಂಸ್ಕಾರವಾಗಬೇಕೆಂದು ಗೊತ್ತುಮಾಡಿ, ೫೦೦ ರೂಪಾಯಿಗಳಿಗಿಂತ ಕಡಿಮೆಯಿಲ್ಲದಷ್ಟನ್ನು ತೆಗೆದುಕೊಂಡು ಬಾ"

ದತ್ತನು ಈ ಉಪಾಯವನ್ನು ವಿವರಿಸುತ್ತಿರುವಾಗ "ಸೆಚೌ" ಯ ಕಣ್ಣುಗಳು ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿದ್ದುವು. ಅವಳು 'ಎಲೈ ಅತ್ಯಂತ ಬುದ್ಧಿಶಾಲಿಯಾದ ಚೌಹು, ನಿನ್ನ ಬುದ್ಧಿಗೆ ಹೋಲಿಸಿದರೆ ಇತರರೆಲ್ಲಾ ಕೇವಲ ಅಲ್ಪರೇ ಆಗುತ್ತಾರೆ. ನಾನು ಇಲ್ಲಿ ಇಲ್ಲದಿದ್ದಾಗ ನೀನು ಯಾವುದೋ ಅದ್ಭುತವಾದ ಚಿಲುಮೆಯ ನೀರನ್ನು ಕುಡಿದಿರುವೆ. ನಿನ್ನ ಬುದ್ಧಿ ಯಾವಾಗಲೂ ಇಷ್ಟು ಚುರುಕೂ ಹೊಳಪೂ ಆಗಿರಲಿಲ್ಲ. ನಿನ್ನ ಶ್ರೇಷ್ಠವಾದ ಉಪಾಯವನ್ನು ಕಾರ್ಯರೂಪಕ್ಕೆ ತರೋಣ. ಇಂತಹ ಲಾಭಕರವಾದ ಕೆಲಸವನ್ನು ಮಾಡಲು ನನ್ನ ಕಾಲು ಕೆರೆಯುತ್ತಾ ಇದೆ.'

ಅವರು ಗುಹೆಗೆ ಇಳಿದು ಚೌಹುವಿನ ದೇಹವನ್ನು ತೆಗೆದುಕೊಂಡು ಅವನ ವಸ್ತ್ರಗಳನ್ನೇ ಅವನಿಗೆ ತೊಡಿಸಿದರು. ಅದರ ಒಳಗಡೆಯ ಜೇಬಿನಲ್ಲಿ ದತ್ತನು ಅಷ್ಟು ಮುಖ್ಯವಲ್ಲದ ಒಂದೆರಡು ಕಾಗದಗಳನ್ನು ಇಟ್ಟನು. ಕೈಗೆ ಹಾಕಿದ್ದ ಒಂದು ಒಡವೆಯನ್ನೂ ಅದರ ಕೈಗೆ ಕಟ್ಟಿ, ಇತರ ಉಪಾಯದಿಂದಲೂ ಅವನು ಚೌಹು ಎಂಬುದು ಅನುಮಾನವಿಲ್ಲದಂತೆ ಮಾಡಿದನು. ಅನಂತರ

ಅರ್ಧರಾತ್ರಿಯಾದ ಮೇಲೆ ಇಬ್ಬರೂ ಚೌಹುವನ್ನು ಎತ್ತಿಕೊಂಡು ಜನಸಂಚಾರವಿಲ್ಲದ ಬೀದಿಗಳ ಮೂಲಕ ಹೋಗಿ ಯಾರೂ ಕಾಣದಂತೆ ಅವನನ್ನು 'ಹೆಂಗ್ ಚೊ'ವಿನ ಬಾಗಿಲಿನಲ್ಲಿ ಬಿಟ್ಟರು.

ದತ್ತನು 'ಎಲ್ಲರ ಎದುರಿಗೆ ನಿನ್ನ ಸ್ಥಿತಿಯನ್ನು ಹೇಳಿಕೊಳ್ಳಬೇಕಾದ ಸಮಯ ಬಂದರೆ ನಿನ್ನಲ್ಲಿ ಎಲ್ಲರಿಗೂ ಸಹಾನುಭೂತಿಯುಂಟಾಗುವಂತೆ ಮಾಡುವ ಮತ್ತೊಂದು ಉಪಾಯವಿದೆ. ದತ್ತನು ನಮಗೆ ಮಾಡಿರುವ ಸೇವೆಗಾಗಿ ನನ್ನ ಎಲ್ಲಾ ಆಸ್ತಿಗಳನ್ನೂ ಅವನ ಹೆಸರಿಗೆ ಬರೆದು ಇಡುತ್ತೇನೆ. ರೊಟ್ಟಿ ಅಂಗಡಿಯವನು ಚೌಕಶಿ ಮಾಡಿದರೆ ನೀನು ಅನಾಥೆಯೆಂಬುದನ್ನು ಸ್ಥಾಪಿಸಲು ಇದನ್ನು ತೋರಿಸಬಹುದು. ಅವನು ಅರೆದು ಹೋಗುತ್ತಾನೆ' ಎಂದನು. ಅನಂತರ ದತ್ತನು ಅಂತಹ ಕಾಗದವನ್ನು ಬರೆದು ಚೌಹುವಿನ ರುಜವನ್ನು ಹಾಕಿ ಅವನ ಉಂಗರದಿಂದಲೇ ಮೋಹರ್ ಮಾಡಿದನು. 'ಸೆಚೌ' ತನ್ನ ರುಜುವನ್ನೂ ಸಹ ಸೇರಿಸಿದಳು. ಆನಂತರ 'ಹೆಂಗ್ ಚೊ' ವಿನ ನಡವಳಿಕೆಗಳನ್ನು ಕಾಯುತ್ತಿರಬೇಕೆಂದು ಅವಳಿಗೆ ಅಪ್ಪಣೆಮಾಡಿ ದತ್ತನು ಅವಳನ್ನು ಸೂರಿನ ಮೇಲಕ್ಕೆ ಕಳುಹಿಸಿದನು.

ಬೆಳಗಿನ ಜಾವ 'ಹೆಂಗ್ ಚೊ' ಹೆಗಲಿನ ಮೇಲೆ ಯಾವುದೋ ಒಂದು ಗಂಟನ್ನೂ ಕೈಯಲ್ಲಿ ಗುದ್ದಲಿಯನ್ನೂ ಹಿಡಿದುಕೊಂಡು, ದತ್ತನು ಹೇಳಿದ್ದ ಅಂಜೂರದ ತೋಟದ ಕಡೆಗೆ ಹೊರಟಿದ್ದನು. ಅವನ ದಾರಿಯು 'ಚೊಹೊ'ವಿನ ಮನೆಯ ಮುಂದೆ ಇದ್ದಿತು. ಆದರೆ ಮನೆಯ ಬಳಿಗೆ ಬರುವುದಕ್ಕೆ ಮುಂಚೆ 'ಸೆಚೌ' ಯು ತಲೆಯ ಕೂದಲನ್ನು ಕೆದರಿಕೊಂಡು ನೆಲದ ಮೇಲೆ ಬಟ್ಟೆಗಳನ್ನು ಎಳೆಯುತ್ತಾ ಅವನ ಎದುರಿಗೆ ಬಂದಳು. ದತ್ತನಿಗೆ ಗಟ್ಟಿಯಾಗಿ ಕಿರಿಚಿದ ಧ್ವನಿಯೂ ಆನಂತರ ಅನೇಕ ಬಾಗಿಲುಗಳನ್ನು ತೆರೆದು ಓಡಾಡುವ ಹೆಜ್ಜೆಗಳ ಸದ್ದೂ ಕೇಳಿಸಿತು. ಪ್ರತಿ ಗಳಿಗೆಯೂ ಅವನಿಗೆ ಕನಸಿನಂತೆ ತೋರುತ್ತಿದ್ದಿತು. ಆದರೆ ಅವನು ಸಂಯಮದಿಂದ ತನ್ನ ಕೊಠಡಿಯನ್ನು ಬಿಟ್ಟು ಅಲ್ಲಾಡದೆ ಕುಳಿತಿದ್ದನು.

'ಸೆಚೌ' ಬರುವ ವೇಳೆಗೆ ಚೆನ್ನಾಗಿ ಬೆಳಗಾಗಿದ್ದಿತು. ಬಾಗಿಲಿನಲ್ಲಿ ಅವಳು ತನ್ನ ಜತೆಯಲ್ಲಿ ಬಂದಿದ್ದವನನ್ನು ಹಿಂದಕ್ಕೆ ಕಳುಹಿಸಿ ಒಳಗೆ ಬಂದು ಭಾರವಾದ ಬೆಳ್ಳಿಯ ನಾಣ್ಯಗಳ ಚೀಲವನ್ನು ದತ್ತನ ಮುಂದೆ ಇಟ್ಟು 'ಸುಖವಾಗಲಿ, ನಿನ್ನ ಮಾತು ನಡೆದಿದೆ' ಎಂದಳು.

ದತ್ತನು 'ಹಾಗಾದರೆ ಸರಿ' ಎಂದನು. ಅವನ ಧ್ವನಿಯಲ್ಲಿ ಸ್ವಲ್ಪವೂ ದಯೆ ಪ್ರೀತಿ ಇರಲಿಲ್ಲ. ಅವನು ಆ ಹಣದ ಚೀಲವನ್ನು ಚೌಹುವಿನ 'ವಿಲ್' ಸಮೀಪದಲ್ಲಿಟ್ಟು 'ಹೊರಗಿನ ಬಾಗಿಲು ಯಾಕೆ ಹಾಕಿದೆ? ದತ್ತನಿಗೆ ಸುಖವನ್ನು ಬಯಸುವವರು ನಮ್ಮೊಂದಿಗೆ ಬಂದು ಟೀ ಕುಡಿಯಲಿ' ಎಂದನು.

'ಸೆಚೌ'ಯು ಅನುಮಾನ ಆಕ್ಷೇಪಣೆಯಿಂದ 'ಒಡೆಯನ ಮಾತು ವಿಚಿತ್ರವಾಗಿದೆ. ಈ ದಾಸಿಯನ್ನು ಕಂಡರೆ ಅವನ ಉಸಿರು ತಣ್ಣಗಿದೆ' ಎಂದಳು.

ದತ್ತನು ಸ್ಪಷ್ಟವಾದ ತಿರಸ್ಕಾರದಿಂದ 'ಅದು 'ಹೆಂಗ್ ಚೊ'ವಿನ ಮರದ ಬೇರನ್ನು ಸಹ ಬೆಚ್ಚಗೆ ಮಾಡುವುದಿಲ್ಲ. ಎಲ್ಲಿ ನಿನ್ನ ಕೈಯನ್ನು ಮುಂದಕ್ಕೆ ನೀಡು' ಎಂದನು.

ಆಶ್ಚರ್ಯದಿಂದ ನಡಗುತ್ತಾ 'ಸೆಚೌ' ತನ್ನ ಕೈಯನ್ನು ಮೇಜಿನ ಮೇಲೆ ನಿಧಾನವಾಗಿ ದತ್ತನ ಕಡೆಗೆ ನೀಡಿದಳು. ದತ್ತನು ಅದನ್ನು ಬಲವಾಗಿ ತನ್ನ ಮುಷ್ಟಿಯಲ್ಲಿ ಹಿಡಿದುಕೊಂಡನು. ಒಂದು ಗಳಿಗೆ ಹಿಡಿದಿದ್ದ ನಂತರ 'ಸೆಚೌ' ಭಯದಿಂದ ಅವನ ಮುಖವನ್ನು ನೋಡಿದಳು. ಅದುವರೆಗೆ ಮುಖದ ಮೇಲೆ ಬಲಾತ್ಕಾರವಾಗಿ ತಂದುಕೊಂಡಿದ್ದ ಗಾಂಭೀರ್ಯವನ್ನು ದತ್ತನು ಸ್ವಲ್ಪ ಸಡಿಲಿಸಿದನು. ಅದನ್ನು ಕಂಡು 'ಸೆಚೌ' ಭಯಂಕರವಾಗಿ ಕೂಗಿಕೊಂಡು ದತ್ತನ ಕೈಯಿಂದ ತನ್ನ ಕೈಯನ್ನು ಕಿತ್ತುಕೊಂಡು ಬೀದಿಗೆ ಓಡಿದಳು. ಅವಳ ಕೂಗನ್ನು ಜನ ಬಹುಕಾಲ ಮರೆಯಲಿಲ್ಲ. ಅನಂತರ ಸೆಚೌಯನ್ನು ನಗರದಲ್ಲಿ ಯಾರೂ ಕಾಣಲಿಲ್ಲ.

ಈ ಕತೆಗಾರನು ಕಂಡುಹಿಡಿದಿರುವ ದತ್ತನ ಜೀವನದ ಹಿಂದಲ ಸಂಗತಿಗಳು ಇವೆಯೇ. ಇತರ ಸಣ್ಣ ಸಣ್ಣ ಕಾವ್ಯಗಳಲ್ಲಿ ದತ್ತನು ಮುದುಕನಾಗುವವರೆಗೆ ಬದುಕಿದ್ದು ಎಲ್ಲಾ ಸುಖಗಳನ್ನೂ ಅನುಭವಿಸಿ ವೇದಗಳನ್ನೂ ಸುಭಾಷಿತಗಳನ್ನೂ ಇನ್ನೂ ಹೆಚ್ಚಾಗಿ ಅನುಸರಿಸುತ್ತಾ ಕೊನೆಗೆ ಮೇಲು ಲೋಕಕ್ಕೆ ಹೋದ ಸಂಗತಿಗಳನ್ನು ತಿಳಿದುಕೊಳ್ಳಬಹುದು.

# ವೈಯ್ಯಾರಿ

ಈಗ ಸುಮಾರು ನಾಲ್ಕು ವರುಷಗಳ ಕೆಳಗೆ ಎಪ್ರಿಲ್ ತಿಂಗಳಿನ ಮೂರನೇ ವಾರದ ಒಂದು ಸಂಜೆ ಅರ್ಕಲಗೂಡಿನಿಂದ ನಮ್ಮೂರಿಗೆ ಬರುವ ರಸ್ತೆಯಲ್ಲಿ ಒಬ್ಬ ಯುವಕನು ನಡೆದುಕೊಂಡು ಬರುತ್ತಿದ್ದನು. ಅರ್ಕಲಗೂಡಿನಿಂದ ನಮ್ಮ ಊರಿಗೆ ಬರಬೇಕಾದರೆ ಹೊಳೆಯ ಮೇಲೆ ಕಟ್ಟಿರುವ ಸೇತುವೆಯನ್ನು ದಾಟಿಕೊಂಡು ಬರಬೇಕು. ಯುವಕನು ಸೇತುವೆಯ ಬಳಿಗೆ ಬರುವ ವೇಳೆಗೆ ಸೂರ್ಯನು ಅಸ್ತಂಗತನಾಗುವುದರಲ್ಲಿದ್ದನು. ಪಶ್ಚಿಮದ ಕಡೆ ದೂರದಲ್ಲಿ ರಂಗನ ಬೆಟ್ಟ, ಮಹಾರಾಜನ ದುರ್ಗ ಇವುಗಳ ಹಿಂದೆ ಕಿತ್ತಲೆಹಣ್ಣಿನ ಬಣ್ಣದ ಕಿತ್ತಲೆಹಣ್ಣಿನ ಆಕಾರದ ಸೂರ್ಯನು ಅರ್ಧ ಮುಳುಗಿ ನಿಧಾನವಾಗಿ ಕೆಳಕ್ಕೆ ಸರಿಯುತ್ತಿದ್ದನು. ಉತ್ಸಾಹಿಯೂ ಸಾಹಸಿಯೂ ಆದ ಬೇಟೆಗಾರ ಯುವಕನೊಬ್ಬನು, ಸೇತುವೆಯ ಕಲ್ಲುಗೋಡೆಯ ಮಧ್ಯದ ಕಲ್ಲಿಗೆ ಹಗ್ಗವನ್ನು ಕಟ್ಟಿ ಅದನ್ನು ಹಿಡಿದುಕೊಂಡು ಸೇತುವೆಯ ಕಮಾನು ಕೆಳಗಿನ ಕಲ್ಲುಗಳ ಮೇಲೆ ಗೂಡುಕಟ್ಟಿದ್ದ ಪಾರಿವಾಳಗಳನ್ನು ಹಿಡಿಯುವ ಸಾಹಸದಲ್ಲಿ ತೊಡಗಿದ್ದನು. ಅವನ ಆ ಸಾಧನೆಯಲ್ಲಿ ಅಪಾಯ ಪೂರ್ಣವಾಗಿತ್ತು. ನೀರಿನಿಂದ ಸೇತುವೆ ಸುಮಾರು ೪೦ ಅಡಿ ಎತ್ತರದಲ್ಲಿದ್ದಿತು. ಹಗ್ಗದಿಂದ ಕೆಳಕ್ಕೆ ಇಳಿಯುವಾಗ ಸ್ವಲ್ಪ ಹೆಚ್ಚುಕಡಿಮೆಯಾಗಿದ್ದರೂ ಅವನ ಮೈ ಪುಡಿಪುಡಿಯಾಗುವುದರಲ್ಲಿ ಸಂದೇಹವಿರಲಿಲ್ಲ. ಆದರೆ ಬೇಟೆಗಾರನು ಆ ವಿದ್ಯೆಯಲ್ಲಿ ಒಳ್ಳೆಯ ತರಬೇತಾದವನಂತೆ ಕೆಲಸ ಮಾಡುತ್ತಿದ್ದನು. ಅವನ ಮುಖದ ಧೈರ್ಯವನ್ನು ನೋಡಿದರೆ ಯಾರಿಗೂ ಭಯವುಂಟಾಗುತ್ತಿರಲಿಲ್ಲ.

ಹಲ್ಲನ್ನು ಮುರಿಯದಿರುವ ನಿಜವಾಗಿಯೂ ವಿಷವಿರುವ ಹಾವನ್ನು ಆಡಿಸುವ ಹಾವಾಡಿಗನನ್ನು ನೋಡುವಂತೆ ಯುವಕನು ಬೇಟೆಗಾರನನ್ನು ಒಂದು ಗಳಿಗೆ ನೋಡಿ ಮುಳುಗುತ್ತಿರುವ ಸೂರ್ಯನಲ್ಲಿ ನೆಟ್ಟ ಮನಸ್ಸುಳ್ಳವನಾಗಿ ನಿಂತಲ್ಲಿಯೇ ನಿಂತನು. ಹೊಂಬಣ್ಣದ ಬಿಸಿಲು ಜಗತ್ತಿಗೇ ಒಂದು ಮನೋಹರವಾದ ಸೊಬಗನ್ನು ಕೊಟ್ಟಿದ್ದಿತು. ನದಿಯ ನೀರು ಒಂದೊಂದು ಕಡೆ ಒಂದೊಂದು ಬಣ್ಣದಲ್ಲಿ ಕಾಣುತ್ತಿದ್ದಿತು. ಮರ, ಗಿಡ, ಹಕ್ಕಿ, ಬಯಲು ಎಲ್ಲವೂ "ಟೆಕ್ನಿ ಕಲರ್" ಸಿನಿವಾದಂತೆ ತೋರುತ್ತಿದ್ದುವು. ಅನೇಕ ತಿಂಗಳುಗಳಿಂದ ಮೈಸೂರಿನಲ್ಲಿ ಪುಸ್ತಕಗಳ ಧೂಳನ್ನು ಕುಡಿದು, ಫೌಂಟೆನ್ ಪೆನ್ ಶಾಯಿಯನ್ನು ಹೀರಿ, ಹೂವು ಅರಳಿದರೂ ನೋಡದೆ, ಗಾಳಿ ಬೀಸಿದರೂ ತಿಳಿಯದೆ, ಮೋಡಗಳು ಅಂತರಿಕ್ಷದಲ್ಲಿ ಬಗೆಬಗೆಯ ಚಿತ್ರಗಳನ್ನು

ಬರೆದರೂ ಕಾಣದೆ ಜೂಜಿನ ಕುದುರೆಯಂತೆ ಒಂದೇ ಸಮನೆ ಓದಿನ ಓಟವನ್ನು ನಡೆಸುತ್ತಿದ್ದ ಯುವಕನಿಗೆ ನಮ್ಮ ಹಳ್ಳಿಯ ಆ ಸಂಜೆ ಗಂಧರ್ವರ ಸೀಮೆಯಾಗಿ ಮಾಟದ ನಾಡಾಗಿ ಹೊಸದಾಗಿ ಹುಲುಸಾಗಿ ಕಂಡಿತು. ಸೇತುವೆಯ ಮೇಲೆ ಬೀಸುತ್ತಿದ್ದ ಆ ತಂಗಾಳಿಯಲ್ಲಿ ಅಮೃತದ ಬಿಂದುಗಳು, ಚೈತನ್ಯದ ಕಣಗಳು ಅವನ ದೇಹವನ್ನು ಪ್ರವೇಶಿಸುತ್ತಿದ್ದುವು. ಯುವಕನ ಮನಸ್ಸು ಪ್ರಸನ್ನವಾಯಿತು. ದೇಹವು ಅನೇಕ ಕಾಲದ ಬಗೆಬಗೆಯ ಬಂಧನಗಳನ್ನೂ ಪಟ್ಟಣದ ಕೃತಕತೆಗಳನ್ನೂ ಬಿಟ್ಟು ಸ್ವಾಭಾವಿಕವಾಯಿತು. ಅವನ ಮನಸ್ಸಿನಲ್ಲಿ ಬಹುಕಾಲದಿಂದಲೂ ಅವನಿಗೇ ತಿಳಿಯದೆ ಇದ್ದ ಯಾವುದೋ ಅರಕೆಯು ಪೂರ್ಣವಾಗಿ ಅವನ ಮನಸ್ಸು ಶಾಂತವಾಯಿತು.

ಯುವಕನು ಸಂಧ್ಯಾವಂದನೆಯನ್ನು ಮಾಡಿಕೊಂಡು ಹಳ್ಳಿಗೆ ಹೋಗೋಣವೆಂದು ಯೋಚಿಸಿ, ಸೇತುವೆಯ ಬಲಮಗ್ಗುಲಲ್ಲಿ ಕಟ್ಟಿದ್ದ ಕಲ್ಲಿನ ಮೆಟ್ಟಿಲುಗಳನ್ನು ಇಳಿದು ನೀರಿನ ತೀರಕ್ಕೆ ಬಂದನು. ನೀರಿನಿಂದ ನಾಲ್ಕು ಮಾರು ದೂರದ ಭಂಡೆಯ ಮೇಲೆ ತನ್ನ ಕೈಯ್ಯಲ್ಲಿದ್ದ ಒಲೆ-ಚೀಲವನ್ನೂ, ಪಾದರಕ್ಷೆಯನ್ನೂ ಇಟ್ಟು ನೀರಿನ ಸಮೀಪಕ್ಕೆ ಬಂದು ನಿಂತನು. ನದಿ ಆಚೆ ದಡದಲ್ಲಿ ಸುಮಾರು ಎರಡು ಫರ್ಲಾಂಗ್ ದೂರದಲ್ಲಿ ವಿಶಾಲವಾದ ಗಗನಚುಂಬಿಗಳಾದ ಮರಗಳನ್ನುಳ್ಳ ತೋಪೂ ಅದರ ಸಂದಿಯಲ್ಲಿ ನರಸಿಂಹಸ್ವಾಮಿ ದೇವಸ್ಥಾನದ ಗೋಪುರವೂ ಕಾಣುತ್ತಿದ್ದಿತು. ಯುವಕನು ನದಿಯ ತೀರಕ್ಕೆ ಇಳಿದ ಸ್ಥಳ ನಿರ್ಜನವಾಗಿದ್ದಂತೆ, ಸೇತುವೆಯ ಮೇಲೆ ನಿಂತಿದ್ದಾಗ ತೋರಿದ್ದಿತು. ಆದರೆ ಈಗ ಅವನು ನೋಡುವಲ್ಲಿ ಅವನು ನಿಂತಿದ್ದ ಸ್ಥಳದಿಂದ ೪-೫ ಮಾರು ದೂರದಲ್ಲಿ ಯುವತಿಯೊಬ್ಬಳು ಪಾತ್ರೆಗಳನ್ನು ಬೆಳಗುತ್ತಿರುವುದು ಕಾಣಿಸಿತು. ಕಣ್ಣಿಗೆ ಕಾಣುವವರೆಗೆ ನೋಡಿದರೂ ಅವರಿಬ್ಬರ ಹೊರತು ಮತ್ತಾರೂ ನದಿಯ ಪಾತ್ರದಲ್ಲಿ ಕಣ್ಣಿಗೆ ಬೀಳುತ್ತಿರಲಿಲ್ಲ.

ರಾಮಸ್ವಾಮಿಯು ಹುಡುಗಿಯನ್ನು ನೋಡಿದನು. ಆ ನದಿ, ಆ ಮುಳುಗುವ ಸೂರ್ಯ, ಆ ಸಂಜೆ, ಆ ತಂಗಾಳಿ, ಆ ಹಾರಾಡುತ್ತಿದ್ದ ಪಾರಿವಾಳದ ಪಕ್ಷಿಗಳು, ಕಣ್ಣನ್ನು ಮಿಟಿಕಿಸುತ್ತಾ ಅಣಕಿಸುತ್ತಿರುವ ಆ ಮೀನುಗಳು; ಆ ಗಂಧರ್ವರ ಸೀಮೆಗೆ ಅರ್ಹಳಾದ ಅಪ್ಸರೆಯಾಗಿ ಆಕೆ ತೋರಿದಳು. ಆ ಸಂಜೆ ರಾಮಸ್ವಾಮಿ ಯಾವುದನ್ನು ಕಂಡಿದ್ದರೂ ಆಶ್ಚರ್ಯಪಡುತ್ತಿರಲಿಲ್ಲ. ಅಪ್ಸರ ಸ್ತ್ರೀಯರು ಇವನ ಸುತ್ತಾ ನರ್ತನ ಮಾಡುತ್ತಾ 'ನಿನ್ನನ್ನು ಸ್ವರ್ಗಲೋಕಕ್ಕೆ ಕರೆದುಕೊಂಡು ಹೋಗಲು ಬಂದಿದ್ದೇವೆ' ಎಂದಿದ್ದರೂ ಅವನಿಗೆ ಆಶ್ಚರ್ಯವಾಗುತ್ತಿರಲಿಲ್ಲ. ಆ ಆಂದಿನ

ಗಾಳಿಯಲ್ಲಿಯೇ ಆಂತಹ ಗಾರುಡಿ ಅಡಗಿದ್ದಿತು. ರಾಮಸ್ವಾಮಿ, ನದಿಯನ್ನೂ ಸೇತುವೆಯನ್ನೂ ಸೂರ್ಯಾಸ್ತವನ್ನೂ ನೋಡಿದಂತೆ ಆ ಹುಡುಗಿಯನ್ನೂ ನೋಡತೊಡಗಿದನು. ಆಗ ಅವನಿಗೆ ಔಚಿತ್ಯ ಅನೌಚಿತ್ಯಗಳ ಒಣ ನೀತಿಗಳು ಅಡ್ಡಬರಲಿಲ್ಲ. ಅವನು ತನ್ನ ಮನಸ್ಸನ್ನು ಆದು ಹೋದ ಕಡೆ ಸ್ವಾಭಾವಿಕವಾಗಿ ಹರಿಯಬಿಟ್ಟನು. ಹುಡುಗಿ ಸುಮಾರು ಹದಿನಾಲ್ಕು ಹದಿನೈದು ವರುಷದವಳಾಗಿದ್ದಳು. ಅವಳ ಆಂಗಾಂಗಗಳೆಲ್ಲ ಪುಷ್ಪವಾಗಿ ಬೆಳೆದಿದ್ದವು. ಅವಳು ಗುಲಾಬಿ ಬಣ್ಣದ ಸೀರೆಯನ್ನು ಉಟ್ಟಿದ್ದಳು. ಸೀಗೆಮೊಗ್ಗಿನ ರವಿಕೆಯನ್ನು ತೊಟ್ಟಿದ್ದಳು. ಅವಳ ಕೈಯಿನಲ್ಲಿ ಒಂದೇ ಒಂದು ಬಳೆಯು ಮಿಂಚಿನ ಗೆರೆಯಂತೆ ಹೊಳೆಯುತ್ತಿದ್ದಿತು. ಅವಳ ನೆತ್ತಿಯು ವಿಶಾಲವಾಗಿದ್ದಿತು. ಕಣ್ಣುಗಳು ತೀಕ್ಷ್ಣವಾಗಿ ಹೊಳೆಯುತ್ತಿದ್ದುವು. ಆ ನೋಟದ ಹಿಂದೆ ತುಂಟತನವು ತೋರುತ್ತಿದ್ದಿತು. ತಲೆಯನ್ನು ಬಾಚಿರಲಿಲ್ಲವಾದುದರಿಂದ ತಲೆಯ ಕೂದಲು ಕಣ್ಣಿನ ಮೇಲೂ ಮೂಗಿನ ಮೇಲೂ ಹಾರಾಡುತ್ತಿದ್ದಿತು. ಅವಳು ತನ್ನ ಲತೆಯಂತಹ ಕೈಗಳಿಂದ ತಾನು ತಂದಿದ್ದ ಬಟ್ಟೆಗಳನ್ನೆಲ್ಲಾ ಸುತ್ತಿ ಸುತ್ತಿ ಹಿಂಡಿಕೊಂಡಳು. ಅನಂತರ ಅವುಗಳನ್ನೆಲ್ಲಾ ದುಂಡಾಗಿ ಕುಕ್ಕೆಯಲ್ಲಿ ಮಡಗಿ ಅದರ ಮಧ್ಯದಲ್ಲಿ ಸೂರ್ಯನ ಮರಿಗಳಂತೆ ಬೆಳಗಿದ್ದ ಪಾತ್ರೆಗಳನ್ನಿಟ್ಟಳು. ರಾಮಸ್ವಾಮಿಯು ಸಂಧ್ಯಾವಂದನೆಯನ್ನು ಮಾಡುತ್ತಾ, ಅವಳ ಮೇಲೆ ಇಟ್ಟ ಕಣ್ಣನ್ನು ತೆಗೆಯದೆ ಅವಳನ್ನೇ ನೋಡುತ್ತಾ ಇದ್ದನು.

ಇದ್ದಕ್ಕಿದ್ದಂತೆ ಭರ್‍ರನೆ ಮಳೆಯ ಹನಿಗಳು ಬಾಣಗಳಂತೆ ಬಿದ್ದವು. ಆ ಮನೋಹರವಾದ ಸಂಜೆಯಲ್ಲಿ ಅಂತಹ ಮಳೆ ಬರುವುದೆಂದು ಯಾರೂ ಯೋಚಿಸಿರಲಿಲ್ಲ. ಮಳೆಯ ಹನಿಗಳು ಅವರೆಯ ಕಾಳುಗಳಂತೆ ಬಲವಾಗಿ ಬೀಳಲು ಪ್ರಾರಂಭಿಸಿದವು. ನದಿಯ ನೀರು ಒಂದು ಕಮಾನಿನ (arch) ಜಾಗವನ್ನು ಬಿಟ್ಟು ತುಂಬಿದ್ದಿತು. ಮಳೆ ಹನಿ ಬಿದ್ದಕೂಡಲೆ ಹುಡುಗಿಯು ಕಮಾನಿನ ಕೆಳಗಡೆ ಹೋಗಿ ನಿಂತಳು. ರಾಮಸ್ವಾಮಿಯು ಮಳೆಹನಿ ಬಿದ್ದ ಕೂಡಲೆ ತಾನೂ ಅಲ್ಲಿಗೇ ಹೋಗಬೇಕೆಂದು ಯೋಚಿಸಿದನು. ಆದರೆ ಹುಡುಗಿ ಅಲ್ಲಿ ಹೋಗಿ ನಿಂತುದರಿಂದ ಅವನಿಗೆ ಸ್ವಲ್ಪ ಯೋಚನೆಗೆ ಬಂದಿತು. ಆದರೆ ಮಳೆಯಿಂದ ತಪ್ಪಿಸಿಕೊಳ್ಳಲು ಅಲ್ಲಿ ಬೇರೆ ಯಾವ ಆಶ್ರಯವೂ ಇರಲಿಲ್ಲ. ಅವನು ಒಂದು ಸಲ ತನ್ನ ಬಲೆ-ಚೀಲದ ಕಡೆಗೂ ಒಂದು ಸಲ ಸೇತುವೆಯ ಕೆಳಗೆ ಹುಡುಗಿ ನಿಂತಿದ್ದ ಕಮಾನಿನ ಆಶ್ರಯದ ಕಡೆಗೂ ನೋಡುತ್ತಿದ್ದನು. ಮಳೆಹನಿ ಬಿದ್ದು ಮೈ ಸ್ವಲ್ಪ ತಣ್ಣಗಾಗಲು ಅವನ ಮೈಯಿನ ಕಾವು ಸ್ವಲ್ಪ ಕಡಿಮೆಯಾಯಿತು. ಎಲ್ಲಿಯೋ ಹಾರಾಡುತ್ತಿದ್ದ ಮನಸ್ಸು ದೇಹವನ್ನು ಬಂದು ಸೇರಿತು. ಹಸಿವಿನಿಂದ ನರಳುತ್ತಿರುವವನು, ಮತ್ತೊಬ್ಬನ ಎಲೆಯ

ಅನ್ನವನ್ನು ನೋಡುವಂತೆ ರಾಮಸ್ವಾಮಿಯು ಸೇತುವೆಯ ಕಮಾನಿನ ಕೆಳಗೆ ನೋಡಹತ್ತಿದನು. ಹುಡುಗಿಗೆ, ಕಾಲಿಗೆ ಹುರಿ ಕಟ್ಟಿದ ಜೀರುಂಬೆ ಲಾಗ ಹಾಕುತ್ತಿರುವಂತೆ ರಾಮಸ್ವಾಮಿ ಲಾಗ ಹಾಕುತ್ತಿರುವುದು ತಿಳಿಯದೇ ಇರಲಿಲ್ಲ. ಅವಳು 'ಇಲ್ಲಿ ಬಂದರೆ ವಾಸಿ, ಮಳೆ ನೆನೆಯುವುದಿಲ್ಲ' ಎಂದಳು. ರಾಮಸ್ವಾಮಿಗೆ ಅಷ್ಟೇ ಬೇಕಾಗಿತ್ತು. ಅವನು ತನ್ನ ಬಲೆ-ಚೀಲವನ್ನೂ ಪಾದರಕ್ಷೆಯನ್ನೂ ತೆಗೆದುಕೊಂಡು ಕಮಾನಿನ ಆಶ್ರಯವನ್ನು ಸೇರಿದನು. ಹತ್ತಿರಕ್ಕೆ ಬಂದ ಮೇಲೆ ರಾಮಸ್ವಾಮಿ ಮತ್ತೆ ಹುಡುಗಿಯನ್ನು ನೋಡಿದನು. ಅವಳು ಅತ್ಯಂತ ಚೆಲುವೆ ಎಂಬುದರಲ್ಲಿ ಅವನಿಗೆ ಅನುಮಾನ ಉಳಿಯಲಿಲ್ಲ. ಹುಡುಗಿಯು ಅಲ್ಲೇ ನೆಲದ ಮೇಲೆ ಬೆಳೆದಿದ್ದ ಕಾಡು ಹೂವುಗಳನ್ನು ಕುಯಿದು ತಲೆಯ ಮೇಲೆ ಲತೆಯನ್ನೇ ಬೆಳಸಿಕೊಂಡಳು. ಅವಳು ತಲೆಯನ್ನು ಬಾಚಿ ಹೆಣೆದುಕೊಂಡಿರಲಿಲ್ಲ.

ಹುಡುಗಿಯು ರಾಮಸ್ವಾಮಿಯನ್ನು 'ನಿಮ್ಮ ಊರು ಯಾವುದು?' ಎಂದು ಕೇಳಿದಳು. ರಾಮಸ್ವಾಮಿಯು ಸರಿಯಾದ ಉತ್ತರವನ್ನು ಕೊಡದೆ 'ನಾನು ಈಗ ಮೈಸೂರಿನಿಂದ ಬಂದೆ. ಅರ್ಕಲಗೂಡಿಗೆ ಬರುವ ವೇಳೆಗೆ ಈ ಕಡೆಯ ಬಸ್ ಬಂದು ಬಿಟ್ಟಿದ್ದಿತು. ಆದುದರಿಂದ ನಡೆದುಕೊಂಡೇ ಬಂದೆ' ಎಂದನು. ಹುಡುಗಿಯು 'ಯಾರ ಮನೆಗೆ ಬಂದಿದ್ದೀರಿ?' ಎಂದಳು. ರಾಮಸ್ವಾಮಿಯು ಸಂಕೋಚದಿಂದ ಹಿಂದೆ ಮುಂದೆ ನೋಡುತ್ತಾ 'ಇಲ್ಲೇ ಬಂದೆ' ಎಂದನು. ಹುಡುಗಿಯು 'ಹೇಳಿ ಸಂಕೋಚವೇಕೆ?' ಎಂದಳು. ರಾಮಸ್ವಾಮಿಗೆ ಸದ್ಯ ಇವಳ ಕೈಯಿಂದ ತಪ್ಪಿಸಿಕೊಂಡರೆ ಸಾಕು ಎನ್ನಿಸಿತು. ಅವನು 'ಇಲ್ಲಿ ಯಜಮಾನ್ ರಂಗಾಚಾರ್ ಅಂತ ಇದ್ದಾರಲ್ಲಾ, ಅವರ ಮನೆಗೆ ಬಂದೆ' ಎಂದನು. ಹುಡುಗಿಯು ಎಲ್ಲಾ ತಿಳಿದವಳಂತೆ 'ಓ!' ಎಂದಳು. ರಾಮಸ್ವಾಮಿಗೆ ಪೀಕಲಾಟಕ್ಕೆ ಬಂತು. ಈ 'ಓ' ಎಂಬುದಕ್ಕೆ ಅರ್ಥವೇನು! ಎಂದು ಯೋಚಿಸುತ್ತಿರುವಲ್ಲಿ ಹುಡುಗಿಯು ಬಾಂಬು ಸಿಡಿಸುವಂತೆ 'ನಿಮ್ಮ ಹೆಸರು ರಾಮಸ್ವಾಮಿ ಅಲ್ಲವೆ? ನೀವು ಮೈಸೂರಿನಲ್ಲಿ ಓದುತ್ತಿಲ್ಲವೆ? ಇಲ್ಲಿ ಎಷ್ಟು ದಿವಸ ಇರುತ್ತೀರಿ?' ಎಂದೂ ಮುಂತಾಗಿ ಒಂದಾದ ಮೇಲೆ ಒಂದರಂತೆ ಪ್ರಶ್ನೆಗಳ ಮಳೆ ಕರೆದಳು. ಕೊನೆಗೆ ರಾಮಸ್ವಾಮಿಯು 'ಯಜಮಾನ್ ರಂಗಾಚಾರ್ರು ನಿನಗೆ ಏನಾಗಬೇಕು?' ಎಂದನು. ಹುಡುಗಿಯು ಕೇವಲ ನಾಚಿಗೆಯನ್ನು ಅಭಿನಯಿಸಿ 'ಅವರು ನಮ್ಮ ತಂದೆ' ಎಂದಳು. ರಾಮಸ್ವಾಮಿಯು ಆಸೆಯಿಂದ ಮತ್ತೊಂದು ಸಲ ಹುಡುಗಿಯ ಕಡೆ ನೋಡಿ 'ಓ ಹಾಗೇ!' ಎಂದನು.

ಅಷ್ಟುಹೊತ್ತಿಗೆ ಮಳೆಯು ನಿಂತಿತು. ಹುಡುಗಿಯು ಸರಸರನೆ ಕುಕ್ಕೆಯನ್ನು ತಲೆಯ ಮೇಲೆ ಇಟ್ಟುಕೊಂಡು ಮನೆಗೆ ಹೊರಟಳು. ರಾಮಸ್ವಾಮಿಯು 'ನೀನು ಹೋಗು. ನಾನು ನಿಧಾನವಾಗಿ ಬರುತ್ತೇನೆ' ಎಂದನು.

ರಾಮಸ್ವಾಮಿಯು ಮೈಸೂರಿನಲ್ಲಿ ಬಿ. ಎ. ತರಗತಿಯಲ್ಲಿ ಓದುತ್ತಿದ್ದನು. ಅವನ ತಂದೆ ಟಿ.ನರಸೀಪುರದ ಹತ್ತಿರದ ಹಳ್ಳಿಯಲ್ಲಿ ಜಮೀನುದಾರರೂ ಪುರೋಹಿತರೂ ಆಗಿದ್ದರು. ಅವರು ಒಳ್ಳೆಯ ಸಂಸ್ಕೃತ ವಿದ್ವಾಂಸರೂ ಧರ್ಮಶಾಸ್ತ್ರಜ್ಞರೂ ಆಗಿ ನಮ್ಮ ಜನರಿಗೆಲ್ಲಾ ಒಂದು ಬಗೆಯಲ್ಲಿ ಅವರ ಜ್ಞಾನದಿಂದಲೂ ನಿಷ್ಠೆಯಿಂದಲೂ ಗುರುಗಳೇ ಆಗಿದ್ದರು. ಆ ವಾತಾವರಣದಲ್ಲಿ ಬೆಳೆದ ರಾಮಸ್ವಾಮಿ ತಾನೂ ಒಳ್ಳೆಯ ವೈದೀಕನೆ ಆಗಿದ್ದನು. ಅವನು ಬಿ. ಎ. ತರಗತಿಗೆ ಬಂದಿದ್ದರೂ ಒಂದು ದಿನವೂ ಹೋಟಲಿಗೆ ಹೋಗಿರಲಿಲ್ಲ. ಒಂದು ಕೊಠಡಿಯನ್ನು ಬಾಡಿಗೆಗೆ ತೆಗೆದುಕೊಂಡು ಅಲ್ಲಿ ತಾನೇ ಸ್ವತಃ ಅಡಿಗೆಮಾಡಿಕೊಳ್ಳುತ್ತಿದ್ದನು. ಅವನು ಇದುವರೆಗೆ ಒಂದು ದಿನವೂ ಮುಖಕ್ಷೌರ ಮಾಡಿಸಿಕೊಂಡಿರಲಿಲ್ಲ. ಎರಡು ಮೂರು ದಿನಗಳಿಗೊಮ್ಮೆ ಪೂರ್ತಾ ಕ್ಷೌರವನ್ನೇ ಮಾಡಿಸಿಕೊಳ್ಳುತ್ತಿದ್ದನು. ಅವನ ಸ್ನೇಹಿತರು 'ನಿತ್ಯಾ ಹೀಗೆ ನೀನು ಬುರುಡಿ ಕೆರಿಸಿಕೊಂಡರೆ ನಿನಗೆ ಹುಚ್ಚು ಹತ್ತುವುದು ಖಂಡಿತ' ಎಂದು ಹೇಳುತ್ತಿದ್ದರು. ವೈದೀಕರ ಮಗನಾಗಿ ವೈದೀಕರಂತೆ ಕಾಣುತ್ತಿದ್ದವನು ನಮಗೆ ತೋರಿದ ಮಟ್ಟಿಗೆ ಅವನೊಬ್ಬನೇ. ಅವನು ಮುಂಜಿಯಾದಂದಿನಿಂದ ಇಲ್ಲಿಯವರೆಗೆ ಒಂದು ದಿನವೂ ತಣ್ಣೀರು ಸ್ನಾನವನ್ನು ಬಿಟ್ಟವನಲ್ಲ. ಗಾಢವಾದ ನಾಮ, ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಗಳಲ್ಲಿ ಔದಾಸೀನ್ಯವನ್ನು ತೋರಿಸಿದವನಲ್ಲ. ಸ್ನೇಹಿತರು ಎಷ್ಟು ಹಾಸ್ಯ ಮಾಡಿದ್ದರೂ ಅವನ ಸ್ವಭಾವ ಬದಲಾಯಿಸಿರಲಿಲ್ಲ. ಅವನು ಚಲನಚಿತ್ರಗಳನ್ನೂ ಕೂಡ ಬಹಿಷ್ಕರಿಸಿದ್ದನು. ಒಟ್ಟಿನಲ್ಲಿ ಅವನು ಮೈಸೂರಿನಲ್ಲಿದ್ದರೂ ಹಳ್ಳಿಯಲ್ಲಿದ್ದವನಂತೆಯೇ ಇದ್ದನು. ಮೈಸೂರಿನ ಜೀವನವೂ ಅವನಿಗೆ ಸಾಕಾಗಿದ್ದಿತು.

ಅವನ ತಂದೆ ಅವನ ಮೇಲೆ ಬಹಳ ಆಸೆಯನ್ನು ಇಟ್ಟಿದ್ದರು. ಅವರ ಆಸೆ ಎರಡು ಬಗೆಯದಾಗಿದ್ದಿತು. ಮೊದಲನೆಯದು ಅವನು ತಮ್ಮ ವಂಶದ ಗೌರವವನ್ನು ಕಾಯುತ್ತಾನೆಂಬುದು, ಅಂದರೆ ಇಂಗ್ಲಿಷ ಓದಿದ ಈ ಕಾಲದ ಹುಡುಗರಂತೆ ವ್ರಾತ್ಯನಾಗುವುದಿಲ್ಲವೆಂದು; ಎರಡನೆಯದು ಇಂಗ್ಲಿಷ್ ಓದಿಯೂ ಒಳ್ಳೆಯ ವಿದ್ಯಾವಂತನಾಗಿ ಮುಂದಕ್ಕೆ ಬರುತ್ತಾನೆಂಬುದು. ಇತರ ವೈದೀಕ ತಂದೆಗಳ ಮನೆಗೆ ಹೋಗುವ ಕಾಲೇಜು ವಿದ್ಯಾರ್ಥಿಗಳಂತೆ ರಾಮಸ್ವಾಮಿಯು ಊರಿಗೆ ಹೊರಡುವ ಮೊದಲ ರಾತ್ರಿ ಪೂರ್ತಾ ಕ್ಷೌರವನ್ನು

ಮಾಡಿಸಿಕೊಂಡು, ಎಲ್ಲಿಂದಲಾದರೂ ಜನಿವಾರವನ್ನು ಸಂಪಾದಿಸಿ ಕತ್ತಿಗೆ ನೇತುಹಾಕಿಕೊಳ್ಳುವ ಹುಡುಗನಾಗಿರಲಿಲ್ಲ. ತನ್ನ ತಂದೆ ತನ್ನಿಂದ ಏನು ನಿರೀಕ್ಷಿಸುವರೆಂಬುದನ್ನು ತಿಳಿದು ರಾಮಸ್ವಾಮಿಯು ಅದರಂತೆ ನಡೆಯುತ್ತಿದ್ದನು.

ನಮ್ಮ ಊರು ಯಜಮಾನ ರಂಗಾಚಾರ್ಯರು, ರಾಮಸ್ವಾಮಿಯ ತಂದೆಗೆ ಬಾಲ್ಯದಿಂದಲೂ ಸ್ನೇಹಿತರು. ಇವರು ತಮ್ಮ ಯೌವನಕಾಲದಲ್ಲಿ ರಾಮಸ್ವಾಮಿಯ ತಂದೆಯಷ್ಟೇ ವೈದೀಕರಾಗಿದ್ದರು. ಆದರೆ ನಮ್ಮ ಊರಿನ ಪರಿಸ್ಥಿತಿ, ಇಲ್ಲಿ ಹರಿಜನರ ವಿಷಯದಲ್ಲಿ ಬ್ರಾಂಹಣರು ತೋರಿಸುತ್ತಿರುವ ಸ್ನೇಹಭಾವ, ಹೊರಗಿನವರು ಪದೇ ಪದೇ ಬಂದು ನಮ್ಮಲ್ಲಿ ಸೇರಿ ಜಗತ್ತಿನ ಬೆಳವಣಿಗೆಯನ್ನು ನಮಗೆ ತಿಳಿಸುವುದು, ಗಾಂಧಿ ಚಳವಳಿ ಇವುಗಳೆಲ್ಲವುಗಳ ಫಲವಾಗಿ ರಂಗಾಚಾರ್ಯರು, ರಾಮಸ್ವಾಮಿಯ ತಂದೆಯಷ್ಟು ವೈದೀಕರೆಂದು ಹೇಳಲು ಸಾಧ್ಯವಿಲ್ಲ. ಅಲ್ಲದೆ ರಂಗಾಚಾರ್ರ ಜೀವನದಲ್ಲಿ ಎರಡು ತೀವ್ರವಾದ ದುಃಖಗಳನ್ನು ಕಂಡಿದ್ದುದರಿಂದ ಅವರ ಮನಸ್ಸು ಬಹಳ ಪಕ್ವವಾಗಿದ್ದಿತು. ಅವರ ಹೆಂಡತಿ ಸುಮಾರು ೫ ವರುಷಗಳ ಕೆಳಗೆ ರಂಗಾಚಾರ್ಯರಿಗೆ ೪೦ ವಯಸ್ಸಾಗಿದ್ದಾಗ ಸ್ವರ್ಗಸ್ಥರಾದರು. ಆ ಘಾಯ ಮಾಯುವುದರೊಳಗಾಗಿ ಕುರುವಿನ ಮೇಲೆ ಬೊಕ್ಕೆ ಎಂಬಂತೆ ಒಂದು ವರುಷ ಹಿಂದೆ ಮದುವೆ ಮಾಡಿದ್ದ ಅವಳ ಮಗಳು ಲಲಿತುವಿನ ಗಂಡ ಕಾಲವಾದನು. ಮದುವೆಯಾದಾಗ ಲಲಿತುವಿಗೆ ೧೦-೧೧ ವಯಸ್ಸಾಗಿದ್ದಿತು. ಆದರೆ ಅಳಿಯನಿಗೂ ೧೯ ವರುಷ ವಾತ್ರವಾಗಿತ್ತು. ರಂಗಾಚಾರ್ಯರ ಹೆಂಡತಿ ಇಬ್ಬರಿಗೂ ವರಸಾಮ್ಯ ಚೆನ್ನಾಗಿದೆ ಎಂದು ಹೇಳಿ ರಂಗಾಚಾರ್ರು ೨-೩ ವರುಷ ತಡೆಯೋಣವೆಂದರೂ ಕೇಳದೆ ಮದುವೆಗೆ ಏರ್ಪಡಿಸಿಬಿಟ್ಟಳು. ಮದುವೆಯಾದ ಆರು ತಿಂಗಳಿಗೆ, ಅತ್ತೆ ತೀರಕೊಂಡ ಎರಡು ತಿಂಗಳ ನಂತರ ಅಳಿಯ ಈಜುವುದಕ್ಕೆ ಹೋಗಿ ಮುಳುಗಿಹೋದನು. ಲಲಿತ ಚಿನ್ನದ ಬೊಂಬೆಯಂತಹ ಹುಡುಗಿ ಹನ್ನೊಂದು ವರುಷಕ್ಕೆ ವಿಧವೆಯಾದಳು.

ಹೆಂಡತಿ ಸತ್ತಾಗ ರಂಗಾಚಾರ್ಯರಿಗೆ ವಯಸ್ಸು ೪೦ ಆಗಿತ್ತು. ಲಲಿತಾ ಅವರ ಹಿರಿಯ ಹುಡುಗಿಯಲ್ಲದೆ ಅವಳ ತಂಗಿಯರು ನಾಲ್ಕು ಹುಡುಗಿಯರಿದ್ದರು. ಕಡೆಯ ಹುಡುಗಿಗೆ ಎರಡು ವರುಷವಾಗಿತು. ಈ ಪಂಚಕಲ್ಯಾಣಿಗಳನ್ನು ಪೋಷಿಸುವ ಭಾರ ಯಾರನ್ನಾದರೂ ಹಣ್ಣುಮಾಡತಕ್ಕದ್ದೆ. ರಂಗಾಚಾರ್ರು ಯಾರು ಎಷ್ಟು ಬಲಾತ್ಕರಿಸಿದರೂ ಎರಡನೆಯ ಮದುವೆ ಮಾಡಿಕೊಳ್ಳಲಿಲ್ಲ. ಲಲಿತೆಗಂತೂ ಬಾಲ್ಯದಿಂದಲೇ ದೊಡ್ಡ ಮನೆಯ ಸಂಸಾರವನ್ನು ನಡೆಸುವುದು

ಅಭ್ಯಾಸವಾಯಿತು. ಆ ಹನ್ನೊಂದು ವರುಷದ ಹುಡುಗಿ ತನ್ನ ನಾಲ್ಕು ಜನ ತಂಗಿಯರಿಗೆ ತಾನೇ ತಾಯಿಯಾದಳು.

ಲಲಿತೆಗೆ ಮೊದಮೊದಲು ತಾನು ವಿಧವೆ ಎಂಬುದು ಅರ್ಥವಾಗಲಿಲ್ಲ. ಒಂದೊಂದು ಸಲ, ಜತೆಯ ಹುಡುಗಿಯರಿಗೆ ಮದುವೆಯಾದಾಗ ತನ್ನನ್ನು ಒಂದು ದಿನ ಹೀಗೆ ಒಬ್ಬ ಬಂದು ಮದುವೆ ಮಾಡಿಕೊಂಡು ಹೋಗುತ್ತಾನೆ, ಎಂದು ಅವಳು ಯೋಚಿಸುತ್ತಿದ್ದಳು. ಹಿಂದೆ ನಡೆದ ಮದುವೆ ಎಲ್ಲೋ ಸ್ವಪ್ನದಲ್ಲಿ ನಡೆದಂತೆ, ಅವಳಿಗೆ ಸರಿಯಾಗಿ ಜ್ಞಾಪಕವೇ ಇರಲಿಲ್ಲ. ಗಂಡ ತೀರಿಕೊಂಡು ಎರಡು ವರುಷಗಳಾದ ಮೇಲೆ ಅವಳಿಗೆ ಒಮ್ಮಿಂದೊಮ್ಮೆ ತಾನೂ ಎಲ್ಲರಂತೆ ಎಂದು ತೋರತೊಡಗಿತು. ಅವಳು ಇದ್ದಕ್ಕಿದ್ದಂತೆ ಚೆಲುವಾಗಿ ತಲೆಬಾಚಿಕೊಂಡು ಹಣೆಗೆ ಕುಂಕುಮವನ್ನು ಇಟ್ಟುಕೊಂಡು ಹೂವು ಮುಡಿದುಕೊಂಡು ಹೊಳೆಗೆ ಹೊರಟುಬಿಡುತ್ತಿದ್ದಳು. ಮುದುಕಿಯರು 'ಊರು ಹಾಳಾಯ್ತು' ಎಂದು ನೆಟಿಕೆ ಮುರಿಯುತ್ತಿದ್ದರೂ ಹುಡುಗಿಯರಿಗೆ ಲಲಿತೆಯ ಚೆಲುವಿನ ಹೊಟ್ಟೇಕಿಚ್ಚು ಹೆಚ್ಚುತ್ತಿದ್ದಿತೇ ಹೊರತು ಅವರಿಗೆ ಅವರಲ್ಲಿ ತಪ್ಪು ಏನೂ ತೋರುತ್ತಿರಲಿಲ್ಲ. ಯುವಕರು 'ಅಯ್ಯೋ ಪಾಪ, ಇವಳಿಗೆ ಗಂಡನಿಲ್ಲವಲ್ಲ!' ಎಂದು ಪಶ್ಚಾತ್ತಾಪ ಪಡುತ್ತಿದ್ದರು.

ಲಲಿತೆಗೆ ಸುಮಾರು ೧೩ ವಯಸ್ಸಾಗಿದ್ದಾಗ ಅವಳ ತಂಗಿ ರುಕ್ಮಿಣಿಯನ್ನು ಮದುವೆಯಾಗುವ ಉದ್ದೇಶದಿಂದ ನೋಡಿಕೊಂಡು ಹೋಗಬೇಕೆಂದು ಒಬ್ಬ ವರನು ಬಂದನು. ಅವನೇ ಮರಳಹಳ್ಳಿ ಶ್ರೀನಿವಾಸ. ಆವತ್ತು ಲಲಿತೆಗೂ ಏನೋ ಕಾರಣದಿಂದ ಸಂಭ್ರಮ ಉಂಟಾಗಿತ್ತು. ಶ್ರೀನಿವಾಸ ಬರುವುದು ತನ್ನ ತಂಗಿಯನ್ನು ನೋಡುವುದಕ್ಕಾದರೂ ಅವಳಿಗೂ ಅದೇ ಹಬ್ಬವಾಯಿತು. ರಂಗಾಚಾರ್ರು, ರುಕ್ಮಿಣಿಗೆ 'ಒಳ್ಳೇ ಸೀರೆ ಉಟ್ಕೊ. ಹೂವು-ಗೀವು ಮುಡಿದುಕೊ, ಏನೋ ಈ ವಿಚಾರ ನನಗೆ ತಿಳಿಯುವುದಿಲ್ಲ. ಅವಳಾದರೂ ಇದ್ದಿದ್ದರೆ—' ಎಂದರು. ಅನಂತರ 'ಲಲಿತಾ, ರುಕ್ಮಿಣಿ ನೋಡೋಕೆ ಬರ್ತಾರೆ. ಸ್ವಲ್ಪ ಚೆನ್ನಾಗಿ ಅಲಂಕಾರ ಮಾಡಮ್ಮಾ' ಎಂದರು. ಲಲಿತುವಿಗೆ ತಾನು ವಿಧವೆ ಎಂದು ಗೊತ್ತಾಗಿದ್ದಿತು. ಆದರೂ ಅವಳಿಗೆ ಹೇಗೋ ತಾನೂ ಯಾತಕ್ಕೆ ಅಲಂಕಾರಮಾಡಿಕೊಳ್ಳಬಾರದು ಅನ್ನಿಸಿತು. ಅಂತೂ ಶ್ರೀನಿವಾಸ ಬರುವ ಹೊತ್ತಿಗೆ ಲಲಿತ (೧೩) ರುಕ್ಮಿಣಿ (೧೧) ರಂಗನಾಯಕಿ (೯) ಸೀತಾ (೭) ಲಕ್ಷ್ಮಿ (೫) ಇವರೆಲ್ಲಾ (ಲಕ್ಷ್ಮಿಯು ಲಂಗಾ ಧರಿಸಿದ್ದಳು. ಉಳಿದವರೆಲ್ಲಾ ಸೀರೆಯುಟ್ಟಿದ್ದರು) ಅಲಂಕೃತರಾಗಿ ಸಿದ್ಧವಾಗಿದ್ದರು. ಲಲಿತ ಸಜ್ಜಿಗೆ ಬೋಂಡ ಬಹಳ ರುಚಿರುಚಿಯಾಗಿ ಮಾಡಿದ್ದಳು. ಕಾಫಿಯಂತೂ

ಅಮೃತವಾಗಿತ್ತು. ರಂಗಾಚಾರ್ರು ಶ್ರೀನಿವಾಸನಿಗೆ 'ಅವಳಾದರೂ ಇದ್ದಿದ್ದರೆ... ಎಷ್ಟೋ ಸಂಭ್ರಮದಿಂದ ನಿನ್ನನ್ನು ಆದರಿಸುತ್ತ ಇದ್ದಳು. ಈಗ ನಾವು ಅನ್ನ ಕಾಣೋದೆ ಸಾಕಾಗಿದೆ. ಈ ಹುಡುಗಿಯಾದರೂ ಇರೋ ಹೊತ್ತಿಗೆ ಮಧ್ಯಾನ್ಹದ ಹೊತ್ತಿಗೆ ಒಂದು ರೊಟ್ಟಿ ಗಂಜಿ ಆದರೂ ಮಾಡಿಕೊಡುತ್ತೆ.' ಎಂದರು. ಅಷ್ಟು ಹೊತ್ತಿಗೆ ಲಲಿತ ಬೆಳ್ಳಿಯ ತಟ್ಟೆಗಳಲ್ಲಿ ತಿಂಡಿಯನ್ನು ತಂದು ಇಟ್ಟಳು. ಅವಳನ್ನು ಶ್ರೀನಿವಾಸನು ಕಣ್ಣೆತ್ತಿ ನೋಡಿದನು. ಲಲಿತ ಸ್ವಾಭಾವಿಕವಾಗಿಯೋ ಏನೋ ಹುಬ್ಬನ್ನುಮಿಟುಕಿಸಿದಳು. ಅಲ್ಲಿಗೆ ಶ್ರೀನಿವಾಸನು ಸತ್ತನು. ಹಿಂದೆ ರುಕ್ಮಿಣಿಯು ಬಟ್ಟಲುಗಳಲ್ಲಿ ಕಾಫಿ ತಂದುದನ್ನೂ ರಂಗಾಚಾರ್ರು 'ಇವಳೇ ನೋಡಪ್ಪ. ವಿದ್ಯೆ ಬುದ್ಧಿ ಸಾಧಾರಣ; ಕೆಲಸಮಟ್ಟಿಗೆ ಚೆನ್ನಾಗಿ ಮಾಡುತ್ತಾಳೆ' ಎಂದುದನ್ನೂ ಅವನು ಗಮನಿಸಲೇ ಇಲ್ಲ.

ಲಲಿತೆ ಬಂದು ಹೋದ ಕೂಡಲೇ ಶ್ರೀನಿವಾಸನ ಕಣ್ಣುಮುಂದೆ ಮಿಂಚು ಸುಳಿದಂತೆ ಆಯಿತು. ರಂಗಾಚಾರ್ರ ಮೊದಲನೆ ಮಗಳೊಬ್ಬಳಿದ್ದಾಳೆ. ಅವಳು ವಿಧವೆ ಎಂದು ಅವನಿಗೆ ಗೊತ್ತಿದ್ದರೂ ಅವನು ಮತ್ತೆ ರಂಗಾಚಾರ್ರನ್ನು 'ನಿಮ್ಮ ಹಿರೆ ಹುಡುಗಿ ಎಲ್ಲಿ?' ಎಂದನು. ರಂಗಾಚಾರ್ರು 'ಈಗ ಇಲ್ಲಿ ತಿಂಡಿ ತಂದು ಕೊಟ್ಟಳಲ್ಲ, ಅವಳೇ. ನನ್ನಂತಹ ಅದೃಷ್ಟವಂತ ಮತ್ತೆಲ್ಲೂ ಇಲ್ಲ' ಎಂದರು. ಅನಂತರ 'ಇಷ್ಟು ಚೆನ್ನಾದ ಹುಡುಗಿ ಈ ಊರಲ್ಲೇ ಇಲ್ಲ.

**ಒನಕೆ ಒಳ್ಳೆದವ್ವ ಒಲಿದು ಕುಟ್ಟುವರಿಲ್ಲ**
**ಸೀರೆ ಒಳ್ಳೆದವ್ವ ಸೆರಗಿಲ್ಲ! ಹೆಣ್ಣೀನ**
**ಗುಣ ಒಳ್ಳೆದವ್ವ ರುಣವಿಲ್ಲ**

ಅನ್ನೋ ಹಾಗೆ ಆಗಿದೆ. ಕಣ್ಣೀರು ಕುಡಿತಾ ಕಾಲ ಹಾಕ್ತಾ ಇದೇನೆ. ಎಂದರು.

ರಂಗಾಚಾರ್ರು ರುಕ್ಮಿಣಿಯನ್ನು ಕರೆಸಿ ಶ್ರೀನಿವಾಸನ ಮುಂದೆ ನಿಲ್ಲಿಸಿ ಪ್ರದರ್ಶನ ಮಾಡಿದರು. ಆದರೆ ಶ್ರೀನಿವಾಸನ ಮನಸ್ಸು ಎಲ್ಲಿಯೋ ಹೋಗಿತ್ತು. ಲಲಿತೆಯೆಲ್ಲಿ! ರುಕ್ಮಿಣಿಯೆಲ್ಲಿ! ರುಕ್ಮಿಣಿ ಕುರೂಪಿಯಾಗಿರಲಿಲ್ಲ. ಲಲಿತೆಯು ಎದುರಿಗೆ ಇಲ್ಲದೆ ಇದ್ದಿದ್ದರೆ ರುಕ್ಮಿಣಿಯೇ ಸಾಕಾಗಿತ್ತು. ಆದರೆ ಲಲಿತೆಯನ್ನು ನೋಡಿದ ಮೇಲೆ—

ಆ ವರುಷ ರುಕ್ಮಿಣಿಗೆ ಮದುವೆ ನಿಶ್ಚಯವಾಗಲಿಲ್ಲ. ಶ್ರೀನಿವಾಸ ನಮ್ಮ ಊರಿನ ತನ್ನ ಸ್ನೇಹಿತರೊಂದಿಗೆ 'ಲಲಿತೆ ಒಂದು ಸಲ ಕಣ್ಣುಬಿಟ್ಟಳು. ಮುಂಗಾರು ಮಿಂಚು. ನನ್ನನ್ನು ಕೊಂದಳು.' ಎಂದುಕೊಂಡು ಹೊರಟುಹೋದನು.

ಮಾರನೆ ವರುಷ ಮತ್ತೆ ರಂಗಾಚಾರ್ರ ಆಹ್ವಾನವನ್ನು ಅಂಗೀಕರಿಸಿ ಅವರ ಹಳೆಯ ಸ್ನೇಹಿತ ನಾರಣಯ್ಯಂಗಾರ್ರ ಮಗ ನರಸಿಂಹನು ( ಇಂಟರ್ ಮಿಡಿಯೇಟ್ ವಿದ್ಯಾರ್ಥಿ) ರುಕ್ಮಿಣಿಯನ್ನು ನೋಡಿಕೊಂಡು ಹೋಗಲು ನಮ್ಮ ಊರಿಗೆ ಬಂದನು. ಅಷ್ಟು ಹೊತ್ತಿಗೆ ಮೊದಲ ವರುಷ ಶ್ರೀನಿವಾಸ ಹಿಂದಕ್ಕೆ ಹೋದ ಕಾರಣ ನಮ್ಮ ಊರಿನ ಮುದುಕಿಯರಿಗೂ ವಯಸ್ಕರಾದ ಮುತ್ತೈದೆಯರಿಗೂ ಗೊತ್ತಾಗಿದ್ದಿತು. ಅವರು 'ಲಲಿತ ಇರೋವರ್ಗೆ ಯಾರೂ ಈ ರುಕ್ಮಿಣೀನ ಮದ್ವೆ ಆಗೊಲ್ಲ. ಅವಳ ಬಿನ್ನಾಣ, ಅವಳ ಥಳಕು, ಯಾರು ಬಂದರೂ ಹುಬ್ಬು ಮಿಟಕಿಸತಾಳೆ. ಆ-ಗಂಡ ಅಪ್ಪ ರಂಗಾಚಾರಿಗೆ ಏನು ಕೇಡು, ತಕ್ಕೊಂಡು ಹೋಗಿ ಮೂಳೇನ ಬಾವಿಗೋ ಹೊಳೆಗೋ ತಳ್ಳಿಬರೋಕಾಗದೆ? ಆಗಲೇ ತಳ್ಳಿದ್ರೆ, ರುಕ್ಮಿಣಿ ಇಷ್ಟು ಹೊತ್ತಿಗೆ ಪುಟ್ಟದಾಗಿ ಗಂಡನ್ಮಲೇಲಿ ಇರೋಳು. ಆಗ್ಲೆ ತಲೆ ಬೋಳ್ಸು ಅಂತ ಬಡಕೊಂಡ್ರೂ ರಂಗಾಚಾರಿ ಕೇಳ್ಳಿಲ್ಲ. ಅಬ್ಬಾ ಅವಳ ಸೀರೆ, ಅವಳ ನಾಜೋಕು, ಮುತ್ತೈದೆ ಹಾಗೆ ಕಾಣ್ತಾಳೆ— ಚಿನಾಲಿ, ಚಿತ್ರಪುಟ್ಟಿ, ವೈಯ್ಯಾರಿ—! ಹೋದ ಸಲ ಅವನು ಬಂದ, ಇವಳ್ನೆ ನೋಡ್ಕೊಂಡ—ಹೋದ. ಈ ಸಲ ಇವ ಬಂದು ಏನ್ಮಾಡ್ತಾನೊ...' ಎಂದು ಹೇಳಿಕೊಳ್ಳುತ್ತಿದ್ದರು. ಪ್ರತಿಯೊಂದು ಮನೆಯಲ್ಲಿಯೂ ಲಲಿತೆಯ ವಿಷಯದಲ್ಲಿ ಹಿರಿಯರಿಗೂ ಕಿರಿಯರಿಗೂ ನಿತ್ಯಾ ಕುರುಕ್ಷೇತ್ರ ನಡೆಯುತ್ತಲೇ ಇದ್ದಿತು. ಲಲಿತೆ ನಡೆದ ನೆಲಕ್ಕೆ ಮುತ್ತಿಡಲು ಸಿದ್ಧರಾಗಿದ್ದ ಕಿರಿಯರು ಅವಳ ಪಕ್ಷವನ್ನು ಹಿಡಿದು ಕಾದಾಡುತ್ತಿದ್ದರು.

ಆದರೆ ಇದೊಂದೂ ರಂಗಾಚಾರ್ಯರಿಗೆ ತಿಳಿದಿರಲಿಲ್ಲ. ಬೀದಿಯವರೆಲ್ಲಾ ಮಾತನಾಡುತ್ತಿದ್ದರೂ ತನ್ನ ಮನೆ ವಿಷಯ ತನಗೆ ತಿಳಿಯುವುದು ಕಷ್ಟ.ಆದರೆ ಲಲಿತೆಯ ಕಿವಿಗೆ ಈ ಮಾತುಗಳು ಬೀಳದೆ ಇರಲಿಲ್ಲ. ಅವಳು 'ಈ ಮುದಿಮುತ್ತೈದೆಯರಿಗೆ ನಾನು ಯಾವ ಅಪಚಾರವನ್ನೂ ಮಾಡಲಿಲ್ಲವಲ್ಲ. ಇವರು ಯಾಕೆ ನನ್ನನ್ನು ಕಂಡರೆ ಸಿಡಿಗುಟ್ಟುತ್ತಾರೆ' ಎಂದುಕೊಂಡಳು.

ನರಸಿಂಹನು ಬಂದಾಗಲೂ ಸ್ವಲ್ಪ ಹೆಚ್ಚು ಕಡಿಮೆ ಶ್ರೀನಿವಾಸನು ಬಂದಾಗ ಆದಂತೆಯೇ ಆಯಿತು. ಊಟಕ್ಕೆ ಕುಳಿತುಕೊಂಡಾಗ ಲಲಿತ ಬಡಿಸುತ್ತಿರುವಾಗ ಅವನ ಮೇಲೂ ಒಂದು ಸ್ವಾಭಾವಿಕವಾದ ಸಹಜವಾದ ಕೃತ್ರಿಮವಲ್ಲದ ಕಟಾಕ್ಷವನ್ನು ಬೀರಿದಳು. ನರಸಿಂಹನು ಅಲ್ಲೇ ಹಣ್ಣಾದನು. ಆಮೇಲೆ ರುಕ್ಮಿಣಿ ತುಪ್ಪ ಬಡಿಸಿದುದು, ಮೊಸರು ಬಡಿಸಿದುದೂ ಅವನ ಲಕ್ಷ್ಯಕ್ಕೆ ಬರಲೇ ಇಲ್ಲ. ಅವನು 'ರಂಗಣ್ಣ, ನೀನು ಏನಾದರೂ ಮಾಡಿ ಲಲಿತೆಗೆ ಇನ್ನೊಂದು ಮದುವೆಗೆ ಏರ್ಪಾಡು ಮಾಡಬೇಕು. ಇನ್ನೂ ಇಂತಹ ಚಿಕ್ಕ ಹುಡುಗಿ' ಎಂದನು. ರಂಗಾಚಾರ್ಯರು 'ಅಯ್ಯೋ

ಉಂಟೇಪ್ಪ ನಮ್ಮ ಹಣೆಬರಹ ! ನಾವು ಅನುಭವಿಸಬೇಕು. ಸದ್ಯ ಉಳಿದ ಹುಡುಗೀರಿಗೆ ಮದುವೆ ಮಾಡಿದ್ರೆ ಸಾಕಾಗಿದೆ. ಪೂರ್ವಾರ್ಜಿತ; ಯಾರು ಏನು ಮಾಡುವುದು!' ಎಂದರು. ನರಸಿಂಹನು 'ಇಂತಾ ಹುಡುಗಿಗೆ ಇಂತಾ ಗತಿ ಬರಬಹುದೆ? ನಿಮ್ಮ ಹುಡುಗಿಯರ ಪೈಕಿ ಅವಳಂತೆ ಯಾರೂ ಇಲ್ಲ.' ಎಂದನು.

ನರಸಿಂಹನು ರುಕ್ಮಿಣಿಯನ್ನು ಮದುವೆಯಾಗಲು ಒಪ್ಪಲಿಲ್ಲ. ಅವನು ತನ್ನ ಊರಿಗೆ ಹೊರಡುವವರೆಗೆ 'ರಂಗಣ್ಣ ಏನಾದರೂ ಮಾಡು. ಬೇರೆ ಮದುವೆ ಮಾಡು. ಇಂತಹ ಹುಡುಗಿ, ಇಂತ ರತ್ನ—' ಎಂದುಕೊಂಡು ಹೊರಟು ಹೋದನು. ಅವನು ಹೋದ ಮೇಲೆ ನಮ್ಮ ಹಿರಿಯರು ಮತ್ತೆ 'ಅಲ್ಲಿ ನೋಡಿ, ಇನ್ನೊಂದು ಹೋಯಿತು. ಈ ಬೆಂಕಿಗೆ ಬಿದ್ದ ಮೇಲೆ ಅವು ಬದುಕುವುದುಂಟೆ?' ಎಂದುಕೊಂಡು ಸುಮ್ಮನಾದರು.

ಲಲಿತೆಗೆ ೧೪ ವರುಷವಾಗಿದ್ದರೂ ಅವಳಿಗೆ ಒಂದು ವಿಚಾರ ತಿಳಿದಿತ್ತು. 'ಈ ಪ್ರಾಣಿಗಳು ನನ್ನನ್ನು ಪೂಜಿಸುತ್ತಿವೆ. ನನ್ನ ಪ್ರಭಾವ ಇವುಗಳ ಮೇಲೆ ಬೀರೋಣ. ಇದೊಂದು ಆಟ. ಯಾವುದಾದರೂ ಬಲೆಗೆ ಬೀಳುತ್ತದೆಯೇ? ನೋಡೋಣ.' ಅವಳು ಯಾರಾದರೂ ತನ್ನನ್ನು ಮದುವೆಯಾಗಲಿ ಎಂದೂ ಆ ರೀತಿ ಮಾಡುತ್ತಿದ್ದಳೋ ಹೇಳಲಾರೆ. ಅಥವಾ ಕೇವಲ ಸ್ತ್ರೀಸಹಜವಾದ, ಬಾಲ್ಯಸಹಜವಾದ ಚೇಷ್ಟೆಯಿಂದ ಹಾಗೆ ಮಾಡುತ್ತಿದ್ದಳೋ ಹೇಳಲಾರೆ. ಆದರೆ ತನ್ನನ್ನು ನೋಡಿದ ಕೂಡಲೆ ಗಂಡಸರು ಮೆತ್ತಗಾಗುತ್ತಾರೆಂಬುದು, ಅವಳಿಗೆ ತಿಳಿಯದೆ ಇರಲಿಲ್ಲ. ತನ್ನನ್ನು ನೋಡಿ; ಬಂದವರು ರುಕ್ಮಿಣಿಯನ್ನು ಮದುವೆಯಾಗದೆ ಹೋದರೆಂಬುದು ಅವಳಿಗೆ ತಿಳಿಯುತ್ತಿದ್ದಿತು. ಆದರೆ ಅವಳಿಗೆ ಅದರಲ್ಲಿ ತನ್ನದೇನೂ ತಪ್ಪುತೋರಿರಲಿಲ್ಲ. ನರಸಿಂಹನಿಗೂ ಶ್ರೀನಿವಾಸನಿಗೂ ರುಕ್ಮಿಣಿಯಲ್ಲಿ ಯಾವ ಕೊರತೆಯೂ ತೋರಿರಲಿಲ್ಲ. ಆದರೆ ಲಲಿತೆಯನ್ನು ನೋಡಿದ ಮೇಲೆ ಅವರಿಗೆ ರುಕ್ಮಿಣಿಯಲ್ಲಿ ಲಕ್ಷ್ಯವೇ ಹೋಗಲಿಲ್ಲ.

ಇರಲಿ. ಈಚೆಗೆ ರಂಗಾಚಾರ್ರು ತಮ್ಮ ಸ್ನೇಹಿತರಾದ ರಾಮಸ್ವಾಮಿಯ ತಂದೆಗೆ ತಮ್ಮ ಮಗಳು ರುಕ್ಮಿಣಿ ವಿಚಾರ ಬರೆದು 'ಬೇಕಾದರೆ ಅಲ್ಲಿಗೆ ರುಕ್ಮಿಣಿಯನ್ನು ಕರೆದುಕೊಂಡು ಬರುತ್ತೇನೆ. ನಮ್ಮಿಬ್ಬರ ಹಿಂದಲ ಸ್ನೇಹವನ್ನು ಈ ಬಾಂಧವ್ಯದಿಂದ ಬಿಗಿಯೋಣ' ಎಂದು ತಿಳಿಸಿದ್ದರು. ರಾಮಸ್ವಾಮಿಯ ತಂದೆ 'ಮೊದಲು ನಮ್ಮ ರಾಮು ಅಲ್ಲಿ ಬಂದು ನೋಡಲಿ. ಆನಂತರ ನಿಮ್ಮ ಮಗಳನ್ನು ಕರೆದುಕೊಂಡು ಬರುವಿರಂತೆ' ಎಂದು ಬರೆದಿದ್ದರು. ರಾಮಸ್ವಾಮಿ ಹಿಂದೆ ತಿಳಿಸಿದಂತೆ

ಎಪ್ರಿಲ್ ಮೂರನೆ ವಾರದ ಸಾಯಂಕಾಲ ನಮ್ಮ ಊರಿಗೆ ಬಂದನು. ದಾರಿಯಲ್ಲಿ ಸೇತುವೆಯ ಬಳಿ ಅವನಿಗೆ ನಮ್ಮ ವೈಯ್ಯಾರಿಯ ದರ್ಶನವಾಯಿತು.

ರಾಮಸ್ವಾಮಿಗೆ ಸುಮಾರು ೨೫ ವರುಷ ವಯಸ್ಸಾಗಿದ್ದರೂ ಅವನು ಒಂದು ಸಲವೂ ನಮ್ಮ ಊರಿಗೆ ಹಿಂದೆ ಬಂದಿರಲಿಲ್ಲ. ಅವನ ತಂದೆಯವರು ಮೈಸೂರಿಗೆ ಬಂದಿದ್ದಾಗ 'ರಂಗಣ್ಣನಿಗೆ ಲೆಕ್ಕವಿಲ್ಲದಷ್ಟು ಹೆಣ್ಣುಗಳಿವೆ. ಕುದುರೆಗಳ ಹಾಗೆ ಬೆಳೆದಿವೆ. ನಿನಗೆ ಯಾವುದು ಬೇಕೊ ಅದನ್ನು ಒಪ್ಪಿಕೊ. ನೀನು ಒಪ್ಪಿದುದನ್ನು ಮಾಡುತ್ತೇನೆ' ಎಂದು ಹೇಳಿದ್ದರು. ರಾಮಸ್ವಾಮಿಗೆ ರಂಗಾಚಾರ್ಯರಿಗೆ ವಿಧವೆಯಾದ ಒಬ್ಬ ಮಗಳಿದ್ದಾಳೆ ಎಂಬುದೂ ತಿಳಿದಿರಲಿಲ್ಲ. ಮತ್ತು ನದಿಯಲ್ಲಿ ಲಲಿತೆಯು 'ರಂಗಾಚಾರ್ರು ನಮ್ಮ ತಂದೆ' ಎಂದು ಸ್ವಲ್ಪ ನಾಚಿಕೆಯಿಂದ ರಾಮಸ್ವಾಮಿಯ ಕಡೆ ನೋಡಿ ಹೇಳಿದಾಗ 'ಇವಳೇ ಮದುವೆಯಾಗುವ ಹುಡುಗಿ. ಅದಕ್ಕೆ ನಾಚಿಕೆ' ಎಂದುಕೊಂಡನು. ಅವನು ನದಿಯಿಂದ ಮನೆಗೆ ಬರುತ್ತಾ, ದಾರಿಯಲ್ಲಿ 'ಇವಳು ನನಗೆ ಒಪ್ಪಿಗೆ. ದಾರಿಯಲ್ಲಿ ಹೊಳೆಯಲ್ಲಿ ಇವಳನ್ನು ಕಂಡುದು ಶುಭಶಕುನ. ತನ್ನ ಸ್ನೇಹಿತನ ಮಗಳನ್ನು ಸೊಸೆ ಎನ್ನಲು ನಮ್ಮ ಅಪ್ಪನಿಗೆ ಬಹಳ ಸಂತೋಷವಾಗುತ್ತೆ. ನನಗೋ-ನಾನೇ ಇಂದ್ರ.' ಎಂದುಕೊಂಡನು.

ಲಲಿತ ಮನೆಯಲ್ಲಿ ರಾಮಸ್ವಾಮಿ ಬಂದ ಮಾತನ್ನು ಹೇಳಿರಲಿಲ್ಲವೆಂದು ಕಾಣುತ್ತದೆ. ರಂಗಾಚಾರ್ರು ರಾಮಸ್ವಾಮಿಯು ಬಂದ ಕೂಡಲೆ 'ಬಾ. ನಿಮ್ಮ ತಂದೆಗೂ ನನಗೂ ಬಹಳ ಸ್ನೇಹ, ನೀನು ಬಂದುದು ತುಂಬ ಸಂತೋಷವಾಯಿತು' ಎಂದರು. ಅನಂತರ 'ಲಲಿತ ಕಾಫಿ ಮಾಡಿಕೊಡಮ್ಮ' ಎಂದರು. ರಾಮಸ್ವಾಮಿಯು 'ಈ ಅವೇಳೇಲಿ ಕಾಫಿ ಯಾಕೆ? ನನಗೆ ಕಾಫಿ ಅಷ್ಟು ಅಭ್ಯಾಸವಿಲ್ಲ' ಎಂದನು. ಲಲಿತೆಯು 'ನಡೆದುಕೊಂಡು ಬಂದು ಆಯಾಸವಾಗಿದೆ' ಎಂದಳು. ರಾಮಸ್ವಾಮಿ 'ಸರಿ, ನಿಮ್ಮ ಇಷ್ಟ' ಎಂದನು. ಸ್ವಲ್ಪಹೊತ್ತಿನೊಳಗಾಗಿ ರುಕ್ಮಿಣಿಯು ಒಂದು ಲೋಟದಲ್ಲಿ ಕಾಫಿಯನ್ನು ತಂದು ರಾಮಸ್ವಾಮಿಯ ಮುಂದೆ ಇಟ್ಟಳು. ಲಲಿತೆಯು ತಂದೆಯ ಮುಂದೆ ಇಟ್ಟಳು. ಆಗ ರಾಮಸ್ವಾಮಿಯು ಲಲಿತೆಯ ಜಡೆಯನ್ನು ನೋಡಿದನು. ನದಿಯ ತೀರದಲ್ಲಿ ಅಷ್ಟು ಚೆನ್ನಾಗಿ ಅವಳ ತಲೆಯಲ್ಲಿ ಹಬ್ಬಿದ್ದ ಹೂವಿನ ಲತೆಗಳೊಂದೂ ಅಲ್ಲಿ ಕಾಣಲಿಲ್ಲ.

ಊಟವಾದ ಮೇಲೆ ರಂಗಣ್ಣನವರು ರಾಮಸ್ವಾಮಿಯನ್ನು ಹತ್ತಿರ ಕೂರಿಸಿಕೊಂಡು 'ನೋಡಪ್ಪ, ನೀನು ನನ್ನ ಸ್ನೇಹಿತನ ಮಗ. ಹೆಚ್ಚು ಉಪಚಾರ ಹೇಳಲಾರೆ. ತಾಯಿಯಿಲ್ಲದ ಮಗು. ಕೈಹಿಡಿದು ಉದ್ಧಾರ ಮಾಡು' ಎಂದು ಹೇಳಿ 'ರುಕ್ಮಿಣಿ ಇಲ್ಲಿ ಬಾ' ಎಂದರು. ರಾಮಸ್ವಾಮಿಗೆ ಆಗಲೆ

ಹೆಸರಿನ ವ್ಯತ್ಯಾಸ ಸ್ವಲ್ಪ ತಿಳಿದಿತ್ತು. ಹಿಂದೆ 'ಲಲಿತ ಕಾಫಿ' ಎಂದಿದ್ದರು. ಇದೇನು, ಈಗ ರುಕ್ಮಿಣಿ ಎನ್ನುತ್ತಾರೆ. 'ರುಕ್ಮಿಣಿ ಯಾತಕ್ಕೋ ನೋಡೋಣ' ಎಂದುಕೊಂಡನು. ರುಕ್ಮಿಣಿಯು ಬಂದು ಸಂಕೋಚದಿಂದ ನಿಂತುಕೊಂಡಳು. ಅವಳಿಗೂ ೧೩ ವಯಸ್ಸಾಗಿತ್ತು. ಒಳ್ಳೆ ಕಟ್ಟುಮಸ್ತಾಗಿ ಬೆಳೆದ ಹುಡುಗಿಯಾಗಿದ್ದಳು. ರಂಗಣ್ಣನವರು 'ಇವಳೇ ನೋಡಪ್ಪ' ಎಂದರು. ರಾಮಸ್ವಾಮಿಯು 'ಆಂ' ಎಂದನು. ರಂಗಣ್ಣನವರು ಗಾಬರಿಯಿಂದ 'ಏನಾಯಿತು?' ಎಂದರು. ರಾಮಸ್ವಾಮಿಯು ಚೇತರಿಸಿಕೊಂಡು 'ನಿಮ್ಮ ಆ ಹುಡುಗಿ ಅವಳ ಹೆಸರೇನು?' ಎಂದನು. ರಂಗಣ್ಣ 'ಲಲಿತೆಯೆ?' ಎಂದರು. ರಾಮಸ್ವಾಮಿಯು ನಿರ್ದಾಕ್ಷಿಣ್ಯವಾಗಿ 'ನಾನು ಅವಳನ್ನೇ ಮದುವೆಯಾಗುತ್ತೇನೆ' ಎಂದನು. ಸಿಡಿಲು ಬಡಿದಿದ್ದರೂ ರಂಗಣ್ಣ ಅಷ್ಟು ಬೆಚ್ಚಿಬೀಳುತ್ತಿರಲಿಲ್ಲ. ಅವರು ಒಂದೇ ಏಟಿಗೆ ೨ ಅಡಿ ಹಾರಿದರು. 'ರಾಮ ರಾಮ ಶಾಂತಂ ಪಾಪಂ ಶಾಂತಂ ಪಾಪಂ' ಎಂದರು.

ರಾಮಸ್ವಾಮಿಗೆ ದಿಕ್ಕು ತೋಚದಾಯಿತು. ಅವನು 'ರಂಗಣ್ಣನವರೇ, ಯಾಕೆ ಹೀಗೆ ಹೇಳುತ್ತೀರಿ? ನಾನೇನು ಅವಳನ್ನು ಸುಖವಾಗಿ ಇಟ್ಟುಕೊಳ್ಳುವುದಿಲ್ಲ ಅಂತ ಭಯವೆ? ವೈದೀಕ ಗೊಡ್ಡು ಮನೆಯಲ್ಲಿ ಕೆಲಸ ಜಾಸ್ತಿ ಅಂತ ಭಯವೆ? ಇನ್ನಾರಿಗಾದರೂ ಗೊತ್ತಾಗಿದೆಯೇ?' ಎಂದು ಒಂದೇ ಉಸಿರಿಗೆ ಕೇಳಿದನು. ರಂಗಣ್ಣನಿಗೂ ಬೇಜಾರಾಗಿತ್ತು. ಅವನು 'ಗೊತ್ತಾಗಿದೆ' ಎಂದನು. ರಾಮಸ್ವಾಮಿಯು ಆಸೆಯಿಂದ 'ಯಾರಿಗೆ?' ಎಂದನು. ರಂಗಣ್ಣನು 'ಯಮನಿಗೆ' ಎಂದನು. ರಾಮಸ್ವಾಮಿಯು ಮಾತನಾಡದೆ ಸುಮ್ಮನೆ ಕುಳಿತುಬಿಟ್ಟನು. ೨-೩ ನಿವಿಷಗಳ ನಂತರ ರಂಗಣ್ಣನು ಅವನ ಹೆಗಲಿನ ಮೇಲೆ ಕೈಯಿಟ್ಟು 'ಲಲಿತೆಗೆ ಮದುವೆ ಆಗಿ ೫ ವರುಷವಾಯಿತು. ಗಂಡ ಸತ್ತು ನಾಲ್ಕು ವರುಷವಾಯಿತು. ಇದನ್ನು ನೋಡುವುದು ಈ ಪಾಪಿಯು ಹಣೆಯಲ್ಲಿ ಬರೆದಿದೆ' ಎಂದು ನಿಟ್ಟುಸಿರುಬಿಟ್ಟನು.

ಆ ರಾತ್ರಿ ಅವರು ಮುಂದೆ ಮಾತು ಸಾಗಿಸಲಿಲ್ಲ. ಹಾಸಿಗೆ ಹಾಸಿಕೊಂಡು ಮಲಗಿದರು. ರಂಗಣ್ಣನಿಗೇನೋ ನಿದ್ರೆ ಬಂದಿತು. ಆದರೆ ರಾಮಸ್ವಾವಿಯ ಮನಸ್ಸು ಬಿರುಗಾಳಿಯ ಸಮುದ್ರದ ಅಲೆಗಳ ಹೊಡೆತದಂತೆ ಅಲ್ಲೋಲಕಲ್ಲೋಲವಾಗಿದ್ದಿತು. ಅವನ ಮನಸ್ಸಿನಲ್ಲಿ ಎಳುತ್ತಿದ್ದುದು ಒಂದೇ ಪ್ರಶ್ನೆ. ವಿಧವೆಯಾದರೇನು? ಯಾಕೆ ಮದುವೆಯಾಗಬಾರದು? ಲಲಿತೆಯ ತಲೆಯಲ್ಲಿ ಹೊಳೆಯಲ್ಲಿದ್ದ ಹೂವು, ಮನೆಯಲ್ಲಿ ಇಲ್ಲದುದಕ್ಕೆ ಅವನಿಗೆ ಕಾರಣ ಗೊತ್ತಾಯಿತು. ಸ್ವಾಭಾವಿಕವಾದ ಆಸೆಯಿಂದ ಅಲ್ಲಿ ನಿರ್ಜನಪ್ರದೇಶದಲ್ಲಿ ಮುಡಿದಿದ್ದಳು. ಮನೆಗೆ ಬರುವಾಗ ದಾರಿಯಲ್ಲಿ ಕಿತ್ತುಹಾಕಿದ್ದಾಳೆ. ಅವಳ ರೂಪ, ಕಣ್ಣಿನ ಹೊಳಪು, ತೋಳಿನ ಕೋಮಲತೆ ಇವುಗಳನ್ನು

ನೆನೆಸಿಕೊಂಡು ಅವನು ಹುಚ್ಚನಂತೆ ಹಾಸಿಗೆಯ ಮೇಲೆ ಹೊರಳುತ್ತಿದ್ದನು. ಲಲಿತೆಯ ಆ ಮಿಂಚಿನ ಕುಡಿಗಳ ಜತೆಯಲ್ಲಿ ತೋರುತ್ತಿದ್ದ ದೈನ್ಯವೂ ಅವನ ಮನಸ್ಸನ್ನು ಕೊರೆಯಿತು. 'ಇವಳನ್ನು ಮದುವೆಯಾಗದಿದ್ದರೆ ಬೇರೆ ನನಗೆ ಸುಖವಿಲ್ಲ' ಎಂದು ಅವನು ತೀರ್ಮಾನಿಸಿಕೊಂಡನು.

ಬೆಳಗಾಯಿತು. ರಾಮಸ್ವಾಮಿಯು ಮುಖವನ್ನು ತೊಳೆದುಕೊಂಡು ಅಡಿಗೆಯ ಮನೆಗೆ ಹೋದನು. ಅಲ್ಲಿ ಲಲಿತ ಒಲೆಯ ಮುಂದೆ ಕಾಫಿ ಕಾಯಿಸುತ್ತಾ ಕುಳಿತಿದ್ದಳು. ರಾಮಸ್ವಾಮಿಯು 'ಲಲಿತ ನನ್ನನ್ನು ಮದುವೆಯಾಗುವೆಯ?' ಎಂದನು. ಲಲಿತೆ ಮಾತನಾಡಲಿಲ್ಲ. ಅವನ ಕಡೆಗೆ ಒಂದು ಸಲ ದೃಷ್ಟಿಯನ್ನು ಹೊರಳಿಸಿದಳು. ರಾಮಸ್ವಾಮಿಯು 'ಬದುಕಿದೆ' ಎಂದುಕೊಂಡನು.

ರಾಮಸ್ವಾಮಿಯ ತಂದೆತಾಯಿಗಳು ಮೊದಲು ಮೊದಲು ಏನು ಮಾಡಿದರೂ ಮದುವೆಗೆ ಒಪ್ಪಲಿಲ್ಲ. ರಂಗಣ್ಣನವರೂ ಒಪ್ಪಿರಲಿಲ್ಲ. ಕೊನೆಗೆ ಎಲ್ಲಾ ಸರಿಹೋಯಿತು. ನಮ್ಮ ಊರಿನಲ್ಲಿಯೇ ಜರ್ಬಾಗಿ ಮಡುವೆ ಆಯಿತು. ಮತ್ತೆ ವೃದ್ಧಮುತ್ತೈದೆಯರು 'ಎಲಾ ವೈಯ್ಯಾರಿ, ಬಲೆ ಎಸೆದದ್ದಕ್ಕೆ ಕೊನೆಗೂ ಒಂದು ಮೀನನ್ನು ಹಿಡಿದೇ ಹಿಡಿದಳು' ಎಂದರು. ಪುರೋಹಿತರು 'ಇದರಿಂದ ಊರು ಹಾಳಾಗ್ತದೆ' ಎಂದರು. ಶ್ಯಾನುಭಾಗರು 'ಅಯ್ಯೊ ಬಿಡಿ ಸ್ವಾಮಿ, ಈ ಊರು ಇವತ್ತಿನದಲ್ಲ, ಹಾಳಾಗೋಕೆ. ಹಿಂದೆ ಎಷ್ಟು ನಡೀತೋ ಮುಂದೆ ಎಷ್ಟು ನಡೀಬೇಕೊ' ಎಂದರು.

ರಂಗಣ್ಣನವರು ಈಚೆಗೆ ರುಕ್ಮಿಣಿ, ರಂಗನಾಯಕೆ ಇವರಿಗೂ ಮದುವೆ ಮಾಡಿದರು. ಈಗ ಅವರಿಗೆ ಗಂಡು ಸಿಕ್ಕುವುದಕ್ಕೆ ಕಷ್ಟವಾಗುತ್ತಿಲ್ಲ.